ಮುದ್ರಕರು :
ಆರ್. ಜಿ. ಹುಕ್ಕೇರಿ,
ಅಕ್ಷಯ ಪ್ರೆಸ್, ಧಾರವಾಡ.

# ಅನುಕ್ರಮಣಿಕೆ.



ಪ್ರಕಾಶಕರು :
ಆರ್. ಜಿ, ಹುಕ್ಕೇರಿ
ದಿ ಸ್ಟೂಡಂಟ್ಸ್ ಓನ ಬುಕ್ ಡಿಪೋ,
ಧಾರವಾಡ.

# ಭಾರತದ ನೂತನ ಪ್ರಶ್ನೋತ್ತರ ಇತಿಹಾಸ

## ೧ ಅತಿಪ್ರಾಚೀನ ಕಾಲ

### (ಕ್ರಿ. ಶ. ಪೂ. ೩೦೦೦—ಕ್ರಿ. ಶ. ಪೂ. ೩೨೧ ರ ವರೆಗೆ)

**ಪ್ರ.:— ಭಾರತದ ಇತಿಹಾಸಕಾಲವನ್ನು ಅಭ್ಯಾಸದ ಅನುಕೂಲತೆಗಾಗಿ ಹೇಗೆ ವಿಭಾಗಿಸಿಕೊಂಡಿರುವರು ?**

**ಉ.:—** ಇತಿಹಾಸಕಾಲವೆಂಬದು ಕ್ರಿ. ಶ. ಪೂ. ೩೦೦೦ ದಿಂದ ಈಗಿನ ವರೆಗಿನ ಕಾಲವು ಇದನ್ನು ವಿಭಾಗಿಸಿಕೊಂಡಿರುವ ರೀತಿ—

೧. ಅತಿಪ್ರಾಚೀನಕಾಲ (ಕ್ರಿ. ಶ. ಪೂ. ೩೦೦೦—ಕ್ರಿ. ಶ. ಪೂ. ೩೨೧ ರ ವರೆಗೆ)

೨. ಪ್ರಾಚೀನಕಾಲ (ಕ್ರಿ. ಶ. ಪೂ. ೩೨೧—ಕ್ರಿ. ಶ. ೧೨೦೬ ರ ವರೆಗೆ)

೩. ಮಧ್ಯಕಾಲ (ಕ್ರಿ. ಶ. ೧೨೦೬—ಕ್ರಿ. ಶ. ೧೮೧೮ ರ ವರೆಗೆ)

(ಅ) ಕ್ರಿ. ಶ. ೧೨೦೬—೧೫೨೬ (ಸುಲ್ತಾನರ ಕಾಲ)

(ಬ) ಕ್ರಿ. ಶ. ೧೫೨೬—೧೭೦೭ (ಮೊಗಲರ ಕಾಲ)

(ಕ) ಕ್ರಿ. ಶ. ೧೭೦೭—೧೮೧೮ (ಮರಾಠರ ಕಾಲ, ಇಂಗ್ಲಿಷರ ಅಧಿಕಾರ ಸ್ಥಿರಗೊಂಡದ್ದು)

೪. ಅರ್ವಾಚೀನ ಕಾಲ ಕ್ರಿ. ಶ. ೧೮೧೮—೧೯೫೨ (ಇಂಗ್ಲಿಷರ ಉತ್ಕರ್ಷ ಆಧುನಿಕ ಸುಧಾರಣೆ, ಭಾರತೀಯರಲ್ಲಿ ಉಂಟಾದ ಜಾಗ್ರತಿ, ಸ್ವಾತಂತ್ರ್ಯದ ಪ್ರಯತ್ನಗಳು, ಸ್ವಾತಂತ್ರ್ಯಪ್ರಾಪ್ತಿ, ಭಾರತದ ಉತ್ಕರ್ಷದ ಪ್ರಯತ್ನಗಳು.)

**ಪ್ರ.:— ಹಿಂದುಸ್ತಾನದ ಮೂಲನಿವಾಸಿಗಳು ಯಾರು ? ದ್ರಾವಿಡರು ಈ ದೇಶಕ್ಕೆ ಬರುವ ಮೊದಲು ಇಲ್ಲಿ ಯಾರು ಯಾರು ವಾಸಿಸುತ್ತಿದ್ದರು ?**

**ಉ.:—** ಕರಾಚಿಯ ಪಶ್ಚಿಮಕ್ಕೆ ಸಮುದ್ರತೀರದಲ್ಲಿಯೂ, ಆರಾಕಾನ ತೇನಾಸರೀಮ, ಸಯಾಮ ಈ ಭಾಗಗಳಲ್ಲಿಯೂ ಈಗ ವಾಸಿಸಿರುವ

**ನಿಗ್ರಿಟೋ** ವರ್ಗದ ಕಾಡುಜನರ ಪೂರ್ವಜರೇ ಹಿಂದುಸ್ಥಾನದ ಮೂಲ ನಿವಾಸಿಗಳೆಂದು ಹೇಳುವರು. ಈ ಜನರು ಗಿಡ್ಡರೂ ಕಪ್ಪುಬಣ್ಣದವರೂ ಆಗಿದ್ದು ಮೀನುಗಾರಿಕೆಯಿಂದಲೇ ಬಹುಕಾಲದಿಂದ ಉಪಜೀವಿಸುತ್ತ ಬಂದಿರುವರು. ಇವರ ಪೂರ್ವಜರಿಗೆ ಧಾತುಗಳ ಉಪಯೋಗವು ಗೊತ್ತಿರಲಿಲ್ಲ. ಬೇಟೆಗಾಗಿ ಅವರು ಚೂಪಾದ ಕಲ್ಲುಗಳ ಆಯುಧಗಳನ್ನೇ ಉಪಯೋಗಿಸುತ್ತಿದ್ದರು.

**ನಿಗ್ರೋಜನರು:** —ಎಷ್ಟೋಸಾವಿರ ವರ್ಷಗಳ ಹಿಂದೆ ಹಿಂದೀ ಮಹಾಸಾಗರದಲ್ಲಿ ಖಂಡಪ್ರಾಯವಾದ ಒಂದು ಭೂಪ್ರದೇಶವು ಆಸ್ಟ್ರೇಲಿಯಾ, ಆಫ್ರಿಕೆಗಳ ವರೆಗೆ ಹಬ್ಬಿದ್ದಿತು. ಮತ್ತು ಅಲ್ಲಿ ಈಗಿನ ಅಂದಮಾನದ ಕಾಡು ಜನರಂಥ ನಿಗ್ರೋವರ್ಗದ ಜನರು ವಾಸವಾಗಿದ್ದರು. ಆ ಪ್ರದೇಶವು ಮುಂದೆ ನೀರಿನಲ್ಲಿ ಮುಳುಗಿಹೋಯಿತು! ಅಲ್ಲಿಂದಲೇ ಈ **ನಿಗ್ರೋಜನರು** ಹಿಂದುಸ್ಥಾನದ ದಕ್ಷಿಣ ಭಾಗದಲ್ಲಿ ಬಂದು ನೆಲಸಿದರು.

ಈ ನಿಗ್ರೋಜನರ ತರುವಾಯ ಹಿಂದುಸ್ಥಾನದ ಈಶಾನ್ಯ ಮಾರ್ಗದಿಂದ ಮೋಂಗೋಲಿಯನ್, ಕೋಲೇರಿಯನ್ ವರ್ಗದ ಜನರು ಬ್ರಹ್ಮಪುತ್ರೆ ಗುಂಟ ಬಂದು ಈ ದೇಶದಲ್ಲಿ ನೆಲೆಸಿದರು. ಮಧ್ಯಹಿಂದುಸ್ಥಾನ, ಒಡಿಸಾ, ಛೋಟಾನಾಗಪುರ ಈ ಗುಡ್ಡಗಳ ಪ್ರದೇಶದಲ್ಲಿ ಈಗ ವಾಸವಾಗಿರುವ ಸಂತಾಳ, ಕೋಳ, ಗೋಂಡ ಜನರ ಪೂರ್ವಜರೇ ಈ ಮೋಂಗೋಲಿಯನ್, ಕೋಲೇರಿಯನ್ ವರ್ಗದವರು.

ಈ ಬಗೆಯಾಗಿ ನಿಗ್ರಿಟೋ, ನಿಗ್ರೋ, ಮೋಂಗೋಲಿಯನ್, ಕೋಲೇರಿಯನ್ ವರ್ಗದ ಜನರು ದ್ರಾವಿಡರು ಬರುವ ಮೊದಲು ಈ ದೇಶದಲ್ಲಿ ವಾಸಿಸಿದ್ದರು.

**ಪ್ರ. :— ದ್ರಾವಿಡರು ಆರ್ಯರಗಿಂತ ಮೊದಲು ಹಿಂದುಸ್ಥಾನದಲ್ಲಿ ವಾಸಿಸಿ ಒಳ್ಳೆಯ ಸುಧಾರಿಸಿದವರಾಗಿ ಬಾಳಿಕೊಂಡಿದ್ದರು; ಎಂಬ ಮಾತನ್ನು ವಿವರಿಸಿ ಹೇಳಿರಿ.**

**ಉ. :—** ಸುಮಾರು ಐದು ಸಾವಿರ ವರ್ಷಗಳ ಹಿಂದೆ ದ್ರಾವಿಡರೆಂಬ ಜನರು ಮಧ್ಯ ಏಶಿಯದಿಂದ ಬಲುಚಿಸ್ಥಾನದ ಮಾರ್ಗವಾಗಿ ಹಿಂದುಸ್ಥಾನಕ್ಕೆ ಬಂದು ನೆಲೆಸಿದರೆಂದು ಒಂದು ಅಭಿಪ್ರಾಯ. ಇವರು ಹಿಂದುಸ್ಥಾನದ ನಿವಾಸಿಗಳೇ ಆಗಿದ್ದು ಬಲುಚಿಸ್ಥಾನದ ವರೆಗೆ ಹಬ್ಬಿದ್ದರು; ಎಂದು ಇನ್ನೊಂದು

ಅಭಿಪ್ರಾಯ. ಇವರು ಬ್ರಾಂಝ್, ತಾಮ್ರ, ಕಬ್ಬಿಣ, ಬಂಗಾರ ಇವುಗಳನ್ನು ಉಪಯೋಗಿಸುತ್ತಿದ್ದರು. ಚಿತ್ರಕಲೆ, ಕೆತ್ತಿಗೆಯ ಕೆಲಸ, ಕಟ್ಟಡಗಳನ್ನು ಕಟ್ಟುವದು ಮುಂತಾದ ಕಲೆಗಳನ್ನು ಬಲ್ಲವರಾಗಿದ್ದರು. ನದಿಗಳಿಗೆ ಒಡ್ಡುಗಳನ್ನು ಹಾಕಿ ಕಾಲುವೆಗಳಿಂದ ಭೂಮಿಗಳಿಗೆ ನೀರನ್ನು ಒದಗಿಸಿ ಕೊಳ್ಳುತ್ತಿದ್ದರು. ಜಲಪ್ರವಾಸಕ್ಕಾಗಿ ನಾವೆಗಳನ್ನು ಕಟ್ಟಿಕೊಂಡಿದ್ದರು. ಮಣ್ಣಿನಿಂದ ಬಗೆ ಬಗೆಯ ಅಂದವಾದ ಪಾತ್ರೆ ಮುಂತಾದವುಗಳನ್ನು ಮಾಡುವವರಾಗಿದ್ದರು. ಇವರು ಹಲವು ಸುಧಾರಣೆಗಳಿಂದ ಅನುಕೂಲವಾದ ಪಟ್ಟಣಗಳನ್ನು ಕಟ್ಟಿಕೊಂಡಿದ್ದರು.

ಒಟ್ಟಿನಲ್ಲಿ, ದ್ರಾವಿಡರು ಈ ದೇಶಕ್ಕೆ ಹೊರಗಿನಿಂದ ಬಂದಿರಲಿ, ಈ ದೇಶದವರೇ ಆಗಿರಲಿ ಇವರು ಆರ್ಯರು ಪ್ರವೇಶಿಸುವ ಮೊದಲು ಸುಸಂಸ್ಕೃತರೂ ಸುಧಾರಣೆಗಳಿಂದ ಕೂಡಿಕೊಂಡವರೂ ಆಗಿದ್ದರೆಂಬ ಮಾತು ನಿಶ್ಚಿತವಾಗಿದೆ.

**ಪ್ರ. :— ಆರ್ಯರ ಮೂಲಸ್ಥಾನವು ಯಾವದು? ಅವರು ಈ ದೇಶವನ್ನು ಪ್ರವೇಶಿಸಿ ಎಲ್ಲಿ ಎಲ್ಲಿ ನೆಲೆಗೊಂಡರು? ಆರ್ಯಾವರ್ತ ಎಂಬ ಹೆಸರು ಯಾವ ಭಾಗಕ್ಕೆ ಏಕೆ ಉಂಟಾಯಿತು?**

**ಉ. :—** ಕ್ರಿ. ಶ. ಪೂ. ೨೦೦೦ ವರ್ಷಗಳ ಮೊದಲು ಎಂದರೆ ದ್ರಾವಿಡರ ತರುವಾಯ ಬಹುಕಾಲದ ನಂತರ ಮಧ್ಯ ಏಶಿಯಾದಿಂದ ಗೌರವರ್ಣರೂ ಹೆಚ್ಚು ನಿಲುವಿಕೆಯವರೂ ಮೇಧಾವಿಗಳೂ ಆದ ಆರ್ಯ ಎಂಬ ಜನಾಂಗದವರು ಹಿಂದುಸ್ಥಾನದ ವಾಯುವ್ಯ ಮಾರ್ಗವಾಗಿ ಬಂದು ಪಂಜಾಬದಲ್ಲಿ ಒಕ್ಕಲಾಗಿ ನಿಂತರು. ಈ ಆರ್ಯರು ಕೆಲವರು ಗುಂಪುಗುಂಪುಗಳಾಗಿ ತಮ್ಮ ದನಕರುಗಳೊಡನೆ ಪಂಜಾಬದಿಂದ ಆಗ್ನೇಯಕ್ಕೆ ಸಾಗುತ್ತ ಗಂಗಾ-ಯಮುನೆಗಳ ದಂಡೆಗುಂಟ ಬೆಳೆಯುಳ್ಳ ಭೂಮಿಗಳನ್ನೂ ಇರಲು ಅನುಕೂಲವಾದ ಸ್ಥಳವನ್ನೂ ನೋಡಿಕೊಂಡು ಒಕ್ಕಲಾಗಿ ನಿಂತರು. ಆರೋಗ್ಯಕರವಾದ ಹವೆ, ಫಲವತ್ತಾದ ಭೂಮಿ, ವಿಪುಲವಾದ ನೀರು, ಮನೋಹರವಾದ ಸೃಷ್ಟಿಸೌಂದರ್ಯ ಇವುಗಳಿಂದ ಇಲ್ಲಿ ಸ್ಥಿರವಾಗಿ ನೆಲೆಗೊಳ್ಳಲು ಅವರಿಗೆ ಉತ್ಸಾಹವೆನಿಸಿತು. ಒಕ್ಕಲುತನ, ಪಶುಪಾಲನೆ, ನೆಯ್ಗೆ ಈ ಉದ್ಯೋಗಗಳಿಂದ ಅವರ ಉಪಜೀವನವು ಉತ್ತಮವಾಗಿ ಸಾಗಹತ್ತಿತು.

ಆರ್ಯರಿಂದ ವ್ಯಾಪಿಸಲ್ಪಟ್ಟ ಉತ್ತರ ಹಿಂದುಸ್ಥಾನಕ್ಕೆ ಸಾಮಾನ್ಯ ವಾಗಿ ಆರ್ಯಾವರ್ತ ಎಂಬ ಹೆಸರುಂಟಾಯಿತು.

ಪ್ರ. :— (ಅ) ಉಪನಿಷತ್ತುಗಳು (ಬ) ಸ್ಮೃತಿಗಳು (ಕ) ಭಗವದ್ಗೀತೆ (ಡ) ಮನುವಿನ ಧರ್ಮಶಾಸ್ತ್ರ ಇವುಗಳ ಬಗೆಗೆ ಟಿಪ್ಪಣಿಗಳನ್ನು ಬರೆಯಿರಿ.

**(ಅ) ಉಪನಿಷತ್ತುಗಳು :—** ಇವು ಆರ್ಯರ ಅಧ್ಯಾತ್ಮಜ್ಞಾನದ ಅತಿಸರಸವಾದ ವಿವೇಚನೆಯುಳ್ಳ ಗ್ರಂಥಗಳು. ಉಪನಿಷತ್ತುಗಳನ್ನು ಓದಿದ ಜರ್ಮನ್ ಪಂಡಿತನಾದ ಶೋಪೆನ್ ಹಾಯರನು "ಇವು ನನ್ನ ಜೀವನದ ಕಳವಳವನ್ನು ಶಾಂತಗೊಳಿಸಿದವು;" ಎಂದಿರುವನು. ಉಪನಿಷತ್ತು ಎಂಬದು ಶ್ರುತಿಗಳಲ್ಲಿ ನಾಲ್ಕನೆಯದು.

**(ಬ) ಸ್ಮೃತಿಗಳು :—** ಧರ್ಮಸೂತ್ರಗಳನ್ನು ವಿಸ್ತಾರವಾಗಿ ವಿವರಿಸುವ ಗ್ರಂಥಗಳು ಸ್ಮೃತಿಗಳು. ಇವುಗಳಲ್ಲಿ ಮನು, ಯಾಜ್ಞವಲ್ಕ್ಯರ ಸ್ಮೃತಿಗಳು ಹೆಸರಾಗಿವೆ.

**(ಕ) ಭಗವದ್ಗೀತೆ:—** ಯುದ್ಧದ ಆರಂಭದಲ್ಲಿ ಶ್ರೀ ಕೃಷ್ಣನು ಅರ್ಜುನನಿಗೆ ಮಾಡಿದ ಉಪದೇಶ ಗ್ರಂಥವೇ ಭಗವದ್ಗೀತೆಯು. ಇದರಲ್ಲಿ ಹದಿನೆಂಟು ಅಧ್ಯಾಯಗಳೂ ಏಳುನೂರು ಶ್ಲೋಕಗಳೂ ಇರುವವು. ವೇದ-ಉಪನಿಷತ್ತುಗಳಲ್ಲಿಯ ತತ್ವಜ್ಞಾನವು ಸಾರರೂಪವಾಗಿ ಇದರಲ್ಲಿ ಉಪದೇಶಿಸಲ್ಪಟ್ಟಿದೆ. ಇದು ಹಿಂದುಗಳ ಧರ್ಮ ಗ್ರಂಥವು.

**(ಡ) ಮನುವಿನ ಧರ್ಮಶಾಸ್ತ್ರ :—** ಇದು ಧರ್ಮ ಸಂಬಂಧವಾದ ಸೂತ್ರಗ್ರಂಥವು. ಮನು ಮಹರ್ಷಿಯು ಬರೆದುದರಿಂದ ಇದಕ್ಕೆ ಮನುವಿನ ಧರ್ಮಶಾಸ್ತ್ರ ಎಂದು ಹೆಸರುಂಟು.

**ಪ್ರ. :— ಆರ್ಯರ ನಾಲ್ಕು ವರ್ಣಗಳು ಹೇಗೆ ಉಂಟಾದವು? ಪ್ರತಿಯೊಂದು ವರ್ಣದವರ ಉದ್ಯೋಗವಾವದು? ಆರ್ಯರ ನಾಲ್ಕು ಆಶ್ರಮಗಳಾವವು? ಪ್ರತಿಯೊಂದು ಆಶ್ರಮದ ಕರ್ತವ್ಯಗಳಾವವು?**

**ಉ. :—** ಆರ್ಯರಲ್ಲಿ ಗುಣ-ಕರ್ಮಗಳಿಗೆ ತಕ್ಕಂತೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ವರ್ಣಗಳುಂಟಾದವು. ವೇದಾಭ್ಯಾಸ, ಪಾರಮಾರ್ಥಿಕವಿಚಾರ, ಧರ್ಮಕಾರ್ಯ ಇವುಗಳಲ್ಲಿಯೇ ಮಗ್ನರಾದವರು ಬ್ರಾಹ್ಮಣರೆನಿಸಿದರು. ಸಂರಕ್ಷಣೆ ಮತ್ತು ರಾಜ್ಯಭಾರಗಳನ್ನು ವಹಿಸಿದವರು

ಕ್ಷತ್ರಿಯರೆನಿಸಿದರು. ಕೃಷಿಕರ್ಮ, ವ್ಯಾಪಾರ, ಉದ್ಯೋಗಗಳನ್ನು ಕೈಕೊಂಡ ವರು ವೈಶ್ಯರೆನಿಸಿದರು. ಆರ್ಯರು ಅನಾರ್ಯರ ಒಪ್ಪಿಗೆಯ ಮೇರೆಗೆ ಅವರನ್ನು ತಮ್ಮ ಹತ್ತಿರ ಇರಿಸಿಕೊಂಡು ಕೂಲಿ–ಕುಂಬಳಿ ಮುಂತಾದ ಕೆಲಸ ಗಳನ್ನು ಅವರಿಂದ ಮಾಡಿಸಿಕೊಳ್ಳ ಹತ್ತಿದರು. ಈ ಜನರು ಶೂದ್ರರೆನಿಸಿದರು. ಹೀಗೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬವು ನಾಲ್ಕು ವರ್ಣಗಳು.

ಆರ್ಯರು ಮಾನವನ ಆಯುಷ್ಯದಲ್ಲಿ ನಾಲ್ಕು ಭಾಗಗಳನ್ನು ಕಲ್ಪಿಸಿ ಆ ಆ ಕಾಲದಲ್ಲಿ ಮಾಡತಕ್ಕ ಕರ್ತವ್ಯಗಳನ್ನು ಗೊತ್ತುಮಾಡಿದರು. ಬ್ರಹ್ಮ ಚರ್ಯ, ಗೃಹಸ್ಥ, ವಾನಪ್ರಸ್ಥ, ಸಂನ್ಯಾಸ ಇವು ನಾಲ್ಕು ಆಶ್ರಮಗಳು. **ಬ್ರಹ್ಮ ಚರ್ಯ**—ಎಂಟನೆಯ ವರುಷ ಉಪನಯನವಾದ ಬಳಿಕ ಗುರುವಿನ ಬಳಿ ಯಲ್ಲಿ ಇದ್ದು ಸುಮಾರು ೨೫ ವರ್ಷಗಳ ವಯಸ್ಸಿನ ವರೆಗೆ ವಿದ್ಯಾಭ್ಯಾಸವನ್ನೂ ಗುರುಸೇವೆಯನ್ನೂ ಮಾಡುವದು. **ಗೃಹಸ್ಥ**– ಪ್ರಾಪಂಚಿಕನಾಗಿ ಸುಮಾರ್ಗ ದಿಂದ ಹಣವನ್ನು ಸಂಪಾದಿಸಿ ಕುಟುಂಬವನ್ನು ಸಂರಕ್ಷಿಸುವದು, ಸಮಾಜದ ಹಿತದ ಕಾರ್ಯಗಳಲ್ಲಿ ನೆರವಾಗುವದು. **ವಾನಪ್ರಸ್ಥ**—ಪ್ರಪಂಚದ ಮೋಹವು ಕಡಿಮೆ ಯಾಗಲೆಂದು ಕೆಲಕಾಲ ಅರಣ್ಯದಲ್ಲಿದ್ದು, ಕಂದಮೂಲಗಳನ್ನು ಸೇವಿಸುತ್ತ ಚಿತ್ತಶುದ್ಧಿಯನ್ನು ಪಡೆಯುವದು. **ಸಂನ್ಯಾಸ**— ಸ್ವಂತದ ಅಭಿ ಲಾಷೆಯನ್ನು ಬಿಟ್ಟು, ಕರ್ತವ್ಯಬುದ್ಧಿಯಿಂದ ಲೋಕಕಲ್ಯಾಣದ ಕಾರ್ಯ ಗಳನ್ನು ಮಾಡುತ್ತ ಪರಮಾತ್ಮನ ಧ್ಯಾನದಲ್ಲಿ ಮಗ್ನನಾಗಿ ಸದ್ಗತಿಯನ್ನು ಪಡೆಯುವದು.

**ಪ್ರ. :— ರಾಮಾಯಣ, ಮಹಾಭಾರತಗಳ ಮಹತ್ತ್ವವನ್ನು ಸ್ವಲ್ಪದರಲ್ಲಿ ವಿವರಿಸಿರಿ. ಈ ಗ್ರಂಥಗಳನ್ನು ಯಾರು ಬರೆದರು ?**

**ಉ. :—** ರಾಮಾಯಣ ಮತ್ತು ಮಹಾಭಾರತ ಇವೆರಡು ನಮ್ಮ ರಾಷ್ಟ್ರೀಯ ಇತಿಹಾಸಗಳಾಗಿವೆ. ಇವು ನಮ್ಮಲ್ಲಿ ಸ್ಫೂರ್ತಿಯನ್ನು ಉಂಟು ಮಾಡುವ ಗ್ರಂಥಗಳಾಗಿವೆ. ರಾಮಾಯಣದಲ್ಲಿ ಸುಮಾರು ಇಪ್ಪತ್ತು ಸಾವಿರ ಶ್ಲೋಕಗಳೂ, ಮಹಾಭಾರತದಲ್ಲಿ ಸುಮಾರು ಇದರ ನಾಲ್ಕುಮಡಿ ಶ್ಲೋಕ ಗಳೂ ಇರುತ್ತವೆ. ರಾಮಾಯಣವನ್ನು ವಾಲ್ಮೀಕಿ ಋಷಿಗಳೂ ಮಹಾಭಾರತ ವನ್ನು ವ್ಯಾಸ ಋಷಿಗಳೂ ಬರೆದರು. ಈ ಗ್ರಂಥಗಳಿಂದ ಆರ್ಯರ ಧಾರ್ಮಿಕ, ಸಾಮಾಜಿಕ, ರಾಜಕೀಯ ಮುಂತಾದ ಎಲ್ಲ ವಿಷಯಗಳ ಜ್ಞಾನವಾಗುವದು. ಪ್ರಾಚೀನ ಭಾರತದ ವೈಭವದ ಮತ್ತು ಸುಧಾರಣೆಗಳ ವರ್ಣನೆಯು ಇವುಗಳಲ್ಲಿ

ಬಹು ಸರಸಾಗಿ ವರ್ಣಿಸಲ್ಪಟ್ಟಿದೆ. ಹಿಂದುಸ್ಥಾನದ ಎಲ್ಲ ಭಾಷೆಗಳಲ್ಲಿಯೂ ಈ ಗ್ರಂಥಗಳ ಭಾಷಾಂತರಗಳಾಗಿವೆ. ಹಿಂದುಮಾತ್ರರಿಗೆಲ್ಲ ಈ ಗ್ರಂಥಗಳ ಲ್ಲಿಯ ವಿಷಯಗಳ ಪರಿಚಯವು ಇದ್ದೇ ಇರುವದು

**ಪ್ರ. :— ಪ್ರಾಚೀನಕಾಲದ ಭರತಖಂಡದ ರಾಜ್ಯಗಳಾವವು? ಅವು ಈಗಿನ ಯಾವ ಯಾವ ರಾಜ್ಯಗಳಲ್ಲಿ ಇದ್ದವು? ಬರೆಯಿರಿ.**

**ಉ. :—** ಪ್ರಾಚೀನ ರಾಜ್ಯಗಳ ಮುಂದೆ ಕಂಸಿನಲ್ಲಿ ಈಗಿನ ರಾಜ್ಯಗಳ ಹೆಸರುಗಳನ್ನು ಬರೆದಿರುತ್ತೇವೆ.

ಮಗಧ (ಬಿಹಾರ), ಅಂಗ (ಪಶ್ಚಿಮ ಬಂಗಾಲ), ವಂಗ (ಪೂರ್ವ ಬಂಗಾಲ), ಕಲಿಂಗ (ಓರಿಸಾ), ಆಂಧ್ರ (ದಕ್ಷಿಣ ಭಾರತದ ಮಧ್ಯಭಾಗ), ಚೋಳ (ಕಾರೋಮಾಂಡಲ), ಚೇರ (ಮಲಬಾರ), ಪಾಂಡ್ಯ (ಮಧುರೆ), ಅವಂತಿ (ಮಾಳವ), ಸೌರಾಷ್ಟ್ರ (ಕಾಠೇವಾಡ), ವಿದರ್ಭ (ವರ್ಹಾಡ), ಗಾಂಧಾರ (ಕಂದಹಾರ), ಕೋಸಲ (ಅಯೋಧ್ಯಾಪ್ರಾಂತ).

**ಪ್ರ. :— ಆರ್ಯರಲ್ಲಿ ಜಾತಿಭೇದಗಳು ಹೇಗೆ ಉಂಟಾದವು? ಈಗಿನ ಪರಿಸ್ಥಿತಿಯಲ್ಲಿ ಈ ಜಾತಿಭೇದಗಳಿಂದ ಉಂಟಾದ ತೊಂದರೆಗಳಾವವು?**

**ಉ. :—** ಆರ್ಯರು ಮೊದಲು ಪಂಜಾಬದಲ್ಲಿ ಒಕ್ಕಲಾಗಿ ನಿಂತರು. ಬಳಿಕ ದಿನದಿನಕ್ಕೆ ಅವರ ಸಂಖ್ಯೆ ಬೆಳೆಯಹತ್ತಿತು. ಆಗ ಅವರು ದಕ್ಷಿಣಕ್ಕೆ ಸಾಗಹತ್ತಿದರು. ಮತ್ತು ತಮಗೆ ಅಡ್ಡಿ ಮಾಡಿದ ಅನಾರ್ಯರನ್ನು ಸೋಲಿಸುವದಕ್ಕಾಗಿ ಯುದ್ಧ ಮಾಡಬೇಕಾಯಿತು. ಆಗ ಆರ್ಯರಲ್ಲಿ ಯುದ್ಧದ ಒಲವಿದ್ದವರು ಯುದ್ಧವಿದ್ಯೆಯನ್ನು ಕೈವಶಮಾಡಿಕೊಂಡರು. ಅವರು ಕ್ಷತ್ರಿಯರೆನಿಸಿದರು. ಒಕ್ಕಲುತನ–ವ್ಯಾಪಾರಗಳು ಜನಾಂಗದ ಜೀವನಕ್ಕೆ ಅವಶ್ಯವಾದ ಹೋರೆಗಳು. ಇವನ್ನು ಕೆಲವರು ಕೈಕೊಂಡರು. ಇವರು ವೈಶ್ಯರೆನಿಸಿದರು. ವೇದವಿದ್ಯೆ, ಧರ್ಮಕಾರ್ಯ, ಅಧ್ಯಯನ–ಅಧ್ಯಾಪನ ಈ ಕಾರ್ಯಗಳನ್ನು ಈ ವಿಷಯಗಳ ಒಲವಿದ್ದವರೂ ಯೋಗ್ಯತೆಯುಳ್ಳವರೂ ಕೈಕೊಂಡರು. ಇವರು ಬ್ರಾಹ್ಮಣರೆನಿಸಿದರು. ಇವರೆಲ್ಲರು ಆರ್ಯರೇ. ಆರಂಭದ ಬಹುಕಾಲದ ವರೆಗಂತೂ ಇವರಲ್ಲಿ ಶ್ರೇಷ್ಠ–ಕನಿಷ್ಟ ಭಾವನೆಗಳಿರಲಿಲ್ಲ. ಈ ತ್ರೈವರ್ಣಿಕರಲ್ಲಿ ಬೇಕಾದವರು ಬೇಕಾದ ಉದ್ಯೋಗವನ್ನು ಮಾಡಬಹುದಾಗಿದ್ದಿತು. ಆದರೆ ವ್ಯವಹಾರ ದೃಷ್ಟಿಯಿಂದ ಒಂದೇ ಉದ್ಯೋಗ

ವನ್ನು ವಂಶಪರಂಪರೆಯಿಂದ ಮಾಡುವದು ಹೆಚ್ಚು ಅನುಕೂಲವೂ ಸ್ವಾಭಾವಿಕವೂ ಎನಿಸಹತ್ತಿತು. ಹೀಗೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಎಂಬ ಸ್ವತಂತ್ರ ವರ್ಗಗಳು ಅಥವಾ ಜಾತಿಗಳುಂಟಾದವು. ಆರ್ಯರಿಂದ ನೋಲಿಸಲ್ಪಟ್ಟ ಅನಾರ್ಯರಲ್ಲಿ, ಒಪ್ಪಿಕೊಂಡವರನ್ನು ಆರ್ಯರು ತಮ್ಮ ಸಮಾಜ ರಚನೆಯಲ್ಲಿ ಸೇರಿಸಿಕೊಂಡರು. ಈ ಅನಾರ್ಯರು ಶೂದ್ರರೆನಿಸಿ ತ್ರೈವರ್ಣಿಕರ ಕೂಲಿ–ಕುಂಬಳಿ ಮುಂತಾದ ಉದ್ಯೋಗಗಳನ್ನು ಮಾಡಹತ್ತಿದರು.

ಮುಂದೆ ಕಾಲಾಂತರದಿಂದ ದ್ರಾವಿಡರ ಸಂಬಂಧವು ಆರ್ಯರೊಡನೆ ಉಂಟಾಯಿತು. ಶಕ, ಹೂಣ, ಕುಶಾನ ಮೊದಲಾದ ಜನಾಂಗದವರೂ ಈ ದೇಶಕ್ಕೆ ಬಂದು ಇಲ್ಲಿಯ ಸಂಸ್ಕೃತಿಯೊಡನೆ ಬೆರೆತರು. ಆದರೂ ಈ ಬೇರೆ ಬೇರೆ ಜನರು ತಮ್ಮ ತಮ್ಮ ವಂಶಗಳನ್ನು ಉಳಿದವರಿಂದ ಸ್ವತಂತ್ರವಾಗಿ ಉಳಿಸಿಕೊಳ್ಳುವ ಪ್ರಯತ್ನ ಮಾಡಿದ್ದರಿಂದ ಅಷ್ಟು ತರದ ಜನರಿಂದ ಅಷ್ಟು ಜಾತಿಗಳೇ ಉಂಟಾಗಿರಬೇಕು. ಮುಂದೆ ಈ ಜಾತಿಗಳ ಸಂಕರದಿಂದ ಹೊಸ ಜಾತಿಗಳು ಉಂಟಾಗುವದೂ ಸ್ವಾಭಾವಿಕವು. ಹೀಗಾಗಿ ೪–೫ ಸಾವಿರ ವರ್ಷಗಳ ಅವಧಿಯಲ್ಲಿ ಜಾತಿಗಳ ಸಂಖ್ಯೆ ತೀರ ಹೆಚ್ಚಾಗಿದೆ.

ಈ ಜಾತಿಭೇದಗಳ ಮೂಲಕ ಪರಸ್ಪರರಲ್ಲಿ ಪ್ರೇಮ, ವಿಶ್ವಾಸ, ಬಾಂಧವ್ಯ ಇವುಗಳಿಗೆ ತಡೆಯಾಗಿದೆ. ಮತ್ತು ರಾಷ್ಟ್ರೀಯತೆಗೆ ಬಲವಾದ ಪೆಟ್ಟು ಬೀಳುತ್ತದೆ. ಆದದರಿಂದ ಈ ಜಾತೀಯತೆಯ ಪ್ರಶ್ನವನ್ನು ಹೇಗೆ ಬಿಡಿಸಬೇಕು? ಎಂದು ರಾಷ್ಟ್ರದ ಹಿತಚಿಂತಕರೆಲ್ಲರೂ ಉಪಾಯವನ್ನು ಚಿಂತಿಸುತ್ತಿರುವರು.

**ಪ್ರ. :— (ಅ) ಬೌದ್ಧ ಧರ್ಮದ ಸ್ಥಾಪಕನು ಯಾರು? ಆ ಧರ್ಮದ ತತ್ತ್ವಗಳಾವವು? (ಬ) ಬೌದ್ಧಧರ್ಮ ಸ್ಥಾಪಕನ ಚರಿತ್ರೆಯನ್ನು ಸಂಕ್ಷಿಪ್ತವಾಗಿ ಬರೆಯಿರಿ.**

**ಉ. —** (ಅ) ಗೌತಮ ಬುದ್ಧನು ಬೌದ್ಧಮತದ ಸಂಸ್ಥಾಪಕನು.

ಬೌದ್ಧಮತದ ತತ್ತ್ವಗಳು :— ಆತ್ಯಂತಿಕ ಮೋಕ್ಷ ಅಥವಾ ನಿರ್ವಾಣವು ಯಾವ ಯಜ್ಞಾದಿ ಬಾಹ್ಯ ಸಾಧನಗಳಿಂದ ದೊರೆಯುವದಿಲ್ಲ. ಶುದ್ಧಾಚರಣೆ, ದಯೆ, ಪರೋಪಕಾರ, ಅಹಿಂಸೆ ಇವುಗಳಿಂದಲೇ ನಿರ್ವಾಣವು ಪ್ರಾಪ್ತವಾಗುವದು. ಆಶೆಯನ್ನು ತ್ಯಜಿಸಿ ನಿರ್ವಾಣವನ್ನು ಪಡೆಯಲು ಎಂಟು ತರದ ಸಾಧನಗಳು ಹೇಳಲ್ಪಟ್ಟಿವೆ. ಈ ಸಾಧನಗಳಲ್ಲಿ ಸದಿಚ್ಛೆ, ಸತ್

ಶ್ರದ್ಧೆ, ಸದ್ವರ್ತನ, ಸದ್ವಚನ, ಸನ್ಮಾರ್ಗ, ಸತ್ಪರಿಶ್ರಮ, ಸಚ್ಚಿಂತನ, ಸನ್ನಿಶ್ಚಯ
ಎಂಬ ಎಂಟು ಉತ್ತಮ ನೀತಿತತ್ತ್ವಗಳು ಅಡಕವಾಗಿವೆ.

(ಬ) ಬುದ್ಧನ ಚರಿತ್ರೆ : — ಶಾಕ್ಯರ ರಾಜಧಾನಿಯಾದ ಕಪಿಲವಸ್ತು ಎಂಬಲ್ಲಿ ಶುದ್ಧೋದನನೆಂಬ ಅರಸು ಆಳುತ್ತಿದ್ದನು. ಇವನ ಮಗನು ಸಿದ್ಧಾರ್ಥನು. ಈ ಸಿದ್ಧಾರ್ಥನೇ ಮುಂದೆ ಬುದ್ಧನೆಂದು ಹೆಸರಾದನು. ಸಿದ್ಧಾರ್ಥನು ಕ್ರಿ. ಶ. ಪೂ. ೫೬೩ ರಲ್ಲಿ ಹುಟ್ಟಿದನು. ತಂದೆಗೆ ಇವನೊಬ್ಬನೇ ಮಗನು. ಸಿದ್ಧಾರ್ಥನು ದೊಡ್ಡವನಾಗಲು ತಂದೆಯು ಇವನಿಗೆ ಉತ್ತಮವಾದ ಶಿಕ್ಷಣವನ್ನು ಕೊಟ್ಟನು. ಸಿದ್ಧಾರ್ಥನು ಧನುರ್ವಿದ್ಯೆಯಲ್ಲಿ ಬಲ್ಲಿದನಾದನು. ೧೬ ನೆಯ ವಯಸ್ಸಿನಲ್ಲಿ ಕಠಿಣವಾದ ಪಣವನ್ನು ಗೆದ್ದು ಯಶೋಧರೆ ಎಂಬ ರಾಜಕನ್ನಿಕೆಯನ್ನು ಮದುವೆಯಾದನು. ಮುಂದೆ ಇವನಿಗೆ ರಾಹುಲನೆಂಬ ಮಗನು ಹುಟ್ಟಿದನು. ಇಷ್ಟೆಲ್ಲ ಅನುಕೂಲ ಪರಿಸ್ಥಿತಿಯಿರುವಾಗ ಸಿದ್ಧಾರ್ಥನು ರಾಜವೈಭವದೊಂದಿಗೆ ವಿಲಾಸದಲ್ಲಿರಬಹುದಾಗಿದ್ದಿತು. ಆದರೆ ಸಿದ್ಧಾರ್ಥನ ಮನಸ್ಸು ಐಹಿಕ ಸುಖದಲ್ಲಿ ತೊಡಗಲಿಲ್ಲ ಅವನು ಪ್ರತಿಯೊಂದು ಸಂಗತಿಯ ಬಗೆಗೆ ಸೂಕ್ಷ್ಮವಾಗಿ ವಿಚಾರಿಸುತ್ತಿದ್ದನು. ಯಜ್ಞಯಾಗಾದಿಗಳಿಂದ ಮೋಕ್ಷವು ಅದು ಹೇಗೆ ದೊರಕುವದು? ಯಜ್ಞಗಳ ಮೂಲಕ ಆಗುವ ಹಿಂಸೆಯು ದೇವರಿಗೆ ಒಪ್ಪಿತವಾಗುವದೇ? ಸಮಾಜ ನಿಯಮನದಲ್ಲಿಯ ಪಕ್ಷಪಾತವೂ ಅನ್ಯಾಯವೂ ದೇವರ ಮನಸ್ಸಿಗೆ ಬರುವದೇ? ಇವೇ ಮುಂತಾದ ವಿಷಯಗಳ ಚಿಂತನೆಯು ಅವನ ಮನಸ್ಸನ್ನು ಕೊರಗಿಸಹತ್ತಿದವು. ಬರಬರುತ್ತ ಅವನ ಕಳವಳವು ಹೆಚ್ಚಾಯಿತು. ಅವನು ಸಂಸಾರವನ್ನು ತ್ಯಜಿಸಿ ಅರಣ್ಯಕ್ಕೆ ತೆರಳಿದನು. ಅಲ್ಲಿ ಏಕಾಂತದಲ್ಲಿ ಅಧ್ಯಯನವನ್ನೂ ತಪಸ್ಸನ್ನೂ ಮಾಡುತ್ತ ಆರು ವರ್ಷ ವಾಸಿಸಿದನು. ಇಷ್ಟಾದರೂ ಅವನ ಮನಸ್ಸಿಗೆ ಶಾಂತಿಯೆನಿಸಲಿಲ್ಲ. ಆಗ ಅವನು ಅಲ್ಲಿಂದ ಹೊರಟು ಗಯೆಯ ಹತ್ತಿರ ಒಂದು ವೃಕ್ಷದ ಬುಡದಲ್ಲಿ ವಿಚಾರಮಗ್ನನಾಗಿ ಕುಳಿತಿರುವಾಗ ದಿವ್ಯಜ್ಞಾನ ಉಂಟಾಯಿತು. ಅವನ ಮನಸಿನ ಕಳವಳವು ಶಾಂತವಾಯಿತು. ಈ ವೃಕ್ಷಕ್ಕೆ ಬೋಧಿವೃಕ್ಷ ಎಂದು ಹೆಸರುಂಟಾಯಿತು. ಗಯೆಯು ಈಗಲೂ ಜಗತ್ತಿನ ಬೌದ್ಧಧರ್ಮದವರಿಗೆಲ್ಲ ಪವಿತ್ರಸ್ಥಾನವಾಗಿರುವದು.

ವೇದಗಳು ಕೇವಲ ಪ್ರಮಾಣಗಳಲ್ಲ; ಜಾತಿಗಳ ಉಚ್ಚನೀಚ ಭೇದವು ಅಯೋಗ್ಯವು; ಸ್ತ್ರೀಯರು ಕೂಡ ಸಂನ್ಯಸ್ತ ವೃತ್ತಿಯಿಂದ ಭಿಕ್ಷುಣಿಗಳಾಗಿ

ಸ್ವತಂತ್ರರಾಗಿ ಇರಬಹುದು; ಇಂದ್ರಿಯದಮನ, ಭೂತದಯೆ, ಪರೋಪಕಾರ ಇವೇ ಪುರುಷಾರ್ಥಗಳು; ಈ ಮುಂತಾದ ಸಂಗತಿಗಳನ್ನು ಎತ್ತಿ ಬುದ್ಧನು ಉಪದೇಶಿಸಿದನು. ಜನಸಾಮಾನ್ಯರಿಗೆ ಪರಿಚಿತವಾದ ಪಾಲಿ ಭಾಷೆಯ ಮೂಲಕ ತನ್ನ ಧರ್ಮವನ್ನು ಪ್ರಸಾರಗೊಳಿಸಿದನು. ಈ ಮಹಾತ್ಮನು ಸ್ವತಃ ಆಚರಣಶೀಲನಾಗಿ ದೇಶದಲ್ಲಿ ಸಂಚಾರ ಮಾಡುತ್ತ ಉಪದೇಶ ಬಲದಿಂದ ತನ್ನ ಧರ್ಮವನ್ನು ಪ್ರಸಾರಗೊಳಿಸುತ್ತ ವಯಸ್ಸಿನ ೮೦ ನೆಯ ವರ್ಷ ಕ್ರಿ. ಶ. ೪೮೩ ರಲ್ಲಿ ದೇಹವನ್ನಿಟ್ಟನು.

**ಪ್ರ :— ಬೌದ್ಧ ಧರ್ಮದ ಉದಯ, ಪ್ರಸಾರ, ಅಸ್ತ ಇವುಗಳ ಕಾರಣ ಗಳಾವವು ?**

**ಉ. :— ಬೌದ್ಧಧರ್ಮದ ಉದಯ** — ಆರ್ಯರ ಧರ್ಮದಲ್ಲಿ ಕಾಲಾಂತರದಿಂದ ಕೆಲವು ದೋಷಗಳುಂಟಾದವು. ಪ್ರಾಣಿಹಿಂಸೆ, ಜಾತಿಭೇದ, ಪಕ್ಷಪಾತಬುದ್ಧಿಯಿಂದ ಮಾಡಿದ ನಿಯಮಗಳು, ಆಚಾರದ ಡಾಂಭಿಕತನ, ಮೂಲ ಧರ್ಮತತ್ತ್ವಗಳ ಕಡೆಗೆ ಆದ ಅಲಕ್ಷ ಇವುಗಳ ಮೂಲಕ ಜನ ಸಮಾಜವು ಗೊಂದಲದಲ್ಲಿ ಸಿಲುಕಿತು. ಇಂಥ ಸಮಯಕ್ಕೆ ಬುದ್ಧನು ಮೇಲೆ ಹೇಳಿದ ದೋಷಗಳನ್ನು ನಿವಾರಿಸುವದಕ್ಕಾಗಿ ಬೌದ್ಧಧರ್ಮವನ್ನು ಉಪ ದೇಶಿಸಿದನು. ಈ ಧರ್ಮದ ನೀತಿತತ್ತ್ವಗಳು ಜನರ ಮನಸ್ಸನ್ನು ಎಳೆದು ಕೊಂಡವು. ಹಿಂದು ಧರ್ಮದವರು ಬೌದ್ಧರನ್ನು ಸಹಾನುಭೂತಿಯಿಂದ ನೋಡುವವರಾಗಿದ್ದರು.

**ಬೌದ್ಧಧರ್ಮದ ಪ್ರಸಾರ**:— ಬುದ್ಧನ ಮರಣದ ನಂತರ ಬೌದ್ಧ ಧರ್ಮವು ಹಿಂದು ಧರ್ಮದಿಂದ ಬೇರೆಯಾಗಿ ಒಡೆದು ಕಾಣಹತ್ತಿತು. ಈ ಧರ್ಮವು ಜನಸಾಮಾನ್ಯರ ಭಾಷೆಯಲ್ಲಿ ಸುಲಭ ಕಥೆಗಳ ರೂಪದಿಂದ ಉಪ ದೇಶಿಸಲ್ಪಡುತ್ತಿದ್ದಿತು. ಆದುದರಿಂದ ಹಿಂಸೆ, ಸಾಮಾಜಿಕ ವಿಷಮತೆ ಇವು ಗಳಿಂದ ಬೇಸರಗೊಂಡ ಜನರಿಗೆ ಸತ್ಯ, ಅಹಿಂಸೆ, ಶುದ್ಧಾಚರಣಗಳಂತಹ ತತ್ತ್ವಗಳುಳ್ಳ ಬೌದ್ಧಧರ್ಮವು ಪ್ರಿಯವಾಯಿತು. ಬೌದ್ಧ ಭಿಕ್ಷುಗಳು ಸಂನ್ಯಸ್ತವೃತ್ತಿಯಿಂದ ಇದ್ದು ಧರ್ಮೋಪದೇಶವನ್ನು ಮಾಡುತ್ತಿದ್ದದರಿಂದ ಇವರ ಸ್ವಾರ್ಥತ್ಯಾಗದ ಮೂಲಕ ಬೌದ್ಧಧರ್ಮವು ಹೆಚ್ಚು ಜನಪ್ರಿಯ ವಾಯಿತು. ಅಶೋಕನಂತಹ ಅರಸರು ಬೌದ್ಧಧರ್ಮದ ಪ್ರಸಾರ ಕಾರ್ಯ ವನ್ನು ಕೈಕೊಂಡದ್ದರಿಂದ ಈ ಧರ್ಮವು ಈ ದೇಶದಲ್ಲಿಯೂ ಸಿಂಹಳದ್ವೀಪ, ಬ್ರಹ್ಮದೇಶ, ಚೀನ ಮುಂತಾದ ಕಡೆಗಳಲ್ಲಿಯೂ ಭರದಿಂದ ಹಬ್ಬಿತು.

**ಬೌದ್ಧಧರ್ಮದ ಅಸ್ತ :**— ಕಾಲಾಂತರದಿಂದ ಬೌದ್ಧ ಧರ್ಮ ದಲ್ಲಿಯೂ ಕೆಲವು ದೋಷಗಳುಂಟಾದವು. ರೊಕ್ಕಸ್ತರಾದ ಭಿಕ್ಷುಗಳು ಹಲ ವರು ನೀತಿತಪ್ಪಿ ನಡೆಯಹತ್ತಿದರು. ಭಿಕ್ಷುಗಳ ಸಂಖ್ಯೆಯು ದೊಡ್ಡದಾಗಿ ಅವರನ್ನು ಪೋಷಿಸುವ ಭಾರವು ಸಮಾಜದ ಮೇಲೆ ಹೆಚ್ಚಾಯಿತು. ಅಹಿಂ ಸೆಯು ಅತಿರೇಕವಾಗಿ ಸ್ವಸಂರಕ್ಷಣೆಗೆ ಅವಶ್ಯವಾದ ಕ್ಷಾತ್ರವೃತ್ತಿಯ ಜನರ ಕೊರತೆಯುಂಟಾಯಿತು. ವೇದಪ್ರಾಮಾಣ್ಯ, ವರ್ಣಾಶ್ರಮ ಇವುಗಳನ್ನು ಪ್ರೀತಿಸುವ ಹಿಂದು ಧರ್ಮಾಭಿಮಾನಿಗಳು ಈ ದೋಷಗಳನ್ನೆತ್ತಿ ತೋರಿಸಿ ಆ ಮತವನ್ನು ಖಂಡಿಸಿದರು. ಕುಮಾರಿಲ ಭಟ್ಟರ ವಿಶೇಷವಾಗಿ ಶಂಕರಾ ಚಾರ್ಯರ ಸಾಹಸದಿಂದ ಹಿಂದುಧರ್ಮದ ಪುನರುದ್ಧಾರವಾಗಿ ದೋಷ ಗಳಿಂದ ಕೂಡಿದ್ದ ಬೌದ್ಧಧರ್ಮವು ಹಿಮ್ಮೆಟ್ಟಿತು. ಬರಬರುತ್ತ ಬೌದ್ಧರೆಲ್ಲ ಹಿಂದುಗಳಾದರು.

**ಪ್ರ. :— ಜೈನ ಮತದ ಸಂಸ್ಥಾಪಕನು ಯಾರು? ಅವನ ಚರಿತ್ರೆಯನ್ನು ಸಂಕ್ಷಿಪ್ತವಾಗಿ ಹೇಳಿರಿ. ಮತ್ತು ಈ ಧರ್ಮದ ತತ್ತ್ವಗಳಾವವು?**

**ಉ. :**— ಜೈನ ಮತದ ಉದ್ಧಾರಕನು ವರ್ಧಮಾನನು. ಇವನು ಕ್ರಿ. ಶ. ಪೂ. ೫೪೦ ರಲ್ಲಿ ವೈಶಾಲಿಯ ಕುಂದಗ್ರಾಮದಲ್ಲಿ ಲಿಚ್ಛವಿ ಎಂಬ ರಾಜವಂಶದಲ್ಲಿ ಜನಿಸಿದನು. ಚಿಕ್ಕಂದಿನಲ್ಲಿಯೇ ಮಹಾವೀರನು ವಿಚಾರ ಮಗ್ನನೂ ವಿಷಯಪರಾಙ್ಮುಖನೂ ಆಗಿದ್ದನು. ಪಾರ್ಶ್ವನಾಥ ಎಂಬ ಸತ್ಪುರು ಷನ ಶಿಷ್ಯನಾಗಿ ಗುರುವಿನ ತರುವಾಯ ತಾನೇ ಉಪದೇಶ ಕಾರ್ಯವನ್ನು ಕೈಕೊಂಡನು. ಇವನು ಹನ್ನೆರಡು ವರ್ಷ ತಪಸನ್ನಾಚರಿಸಿ ದಿವ್ಯ ಜ್ಞಾನವನ್ನು ಪಡೆದನು. ಇವನ ಆಚರಣೆಯನ್ನು ನೋಡಿ ಜನರು ಇವನನ್ನು ಮಹಾವೀರ ನೆಂದೂ ಜಿನನೆಂದೂ ಕರೆದರು. ಮಗಧದರಾಜನು ಇವನ ಆಪ್ತನಾದುದರಿಂದ ಇವನ ಧರ್ಮಪ್ರಸಾರಕ್ಕೆ ಅವನಿಂದ ಸಹಾಯವಾಯಿತು. ಮಹಾವೀರ ವರ್ಧಮಾನನು ತನ್ನ ವಯಸ್ಸಿನ ೭೨ ನೆಯ ವರ್ಷ ಎಂದರೆ ಕ್ರಿ. ಶ ಪೂ. ೪೬೮ ರಲ್ಲಿ ಮರಣಹೊಂದಿದನು.

**ಜೈನಮತ ತತ್ತ್ವಗಳು :**— ಪ್ರಪಂಚವು ದುಃಖಮಯವು. ಪ್ರತಿಯೊ ಬ್ಬನ ಕರ್ಮವು ಅವನ ದುಃಖದ ಮೂಲವು. ಆದದರಿಂದ ಕರ್ಮಸನ್ಯಾಸವೇ ದುಃಖವನ್ನು ನೀಗುವ ಮಾರ್ಗವು. ಜೀವನು ವಿಮೋಚನೆಯಾಗುವವರೆಗೆ ಅನೇಕ ಜನ್ಮಗಳನ್ನು ತಾಳಬೇಕಾಗುವದು. ಕರ್ಮಸನ್ಯಾಸವು ಸಾಧ್ಯವಾಗಲು

ಸಮ್ಯಕ್ ದೃಷ್ಟಿ, ಸಮ್ಯಕ್ ಜ್ಞಾನ, ಸಮ್ಯಕ್ ಆಚಾರ ಈ ತ್ರಯಿಗಳನ್ನು ಆಶ್ರಯಿಸಬೇಕು. ಮಾನವನಲ್ಲಿ ಸುಪ್ತಾವಸ್ಥೆಯಲ್ಲಿರುವ ಆತ್ಮನ ಆತ್ಯಂತಿಕ ವಿಕಾಸವೇ ಪರಮಾತ್ಮನು ಅಥವಾ ದೇವರು. ಎಂದರೆ ಜೈನರು ಆತ್ಮವಾದಿಗಳು. ತಪಶ್ಚರ್ಯೆ ಮತ್ತು ದೇಹದಂಡನೆ ಇವು ಆತ್ಮನ ಆತ್ಯಂತಿಕ ವಿಕಾಸದ ಸಾಧನಗಳು.

**ಪ್ರ.:— ಬೌದ್ಧ ಮತ್ತು ಜೈನ ಧರ್ಮಗಳನ್ನು ಹೋಲಿಸಿರಿ.**

**ಉ.** :— ಬೌದ್ಧ ಮತ್ತು ಜೈನ ಧರ್ಮಗಳು ಹಿಂದುಧರ್ಮದಿಂದ ತೀರ ಸ್ವತಂತ್ರವಾದ ಹೊಸಧರ್ಮಗಳೆಂದು ತಿಳಿಯುವ ಕಾರಣವಿಲ್ಲ. ಹಿಂದು ಧರ್ಮದಲ್ಲಿಯ ತಮ್ಮ ಮನಸ್ಸಿಗೆ ಬಂದ ತತ್ತ್ವಗಳನ್ನೇ ಬುದ್ಧ ಮತ್ತು ಮಹಾವೀರರು ಜನರಿಗೆ ಬೋಧಿಸಿರುವರು. ಬುದ್ಧನಂತೂ ಉಪನಿಷತ್ತುಗಳಲ್ಲಿಯ ತತ್ವಗಳನ್ನೇ ಆಶ್ರಯಿಸಿರುವನು. ಯಜ್ಞಯಾಗಾದಿಗಳನ್ನೂ ವೇದ ಪ್ರಾಮಾಣ್ಯವನ್ನೂ ಮಾತ್ರ ಅವನು ಅಲ್ಲಗಳೆದನು. ಮಹಾವೀರನು ತನ್ನ ಧರ್ಮತತ್ವಗಳನ್ನು ಪರಿಣಾಮಕರವಾಗುವಂತೆ ಬೋಧಿಸಿದನೇ ಹೊರತು ಹಿಂದು ಧರ್ಮದ ದೋಷಗಳನ್ನು ಎತ್ತಿ ಅದನ್ನು ಹೀಯಾಳಿಸಲಿಲ್ಲ. ಬುದ್ಧ–ಮಹಾವೀರರಿಬ್ಬರೂ ಕ್ಷತ್ರಿಯಕುಲದಲ್ಲಿ ಜನ್ಮತಾಳಿದವರು. ದಕ್ಷಿಣಬಿಹಾರ ಮತ್ತು ಆದರ ನೆರೆಯ ಪ್ರದೇಶದಲ್ಲಿಯೇ ಎರಡೂ ಧರ್ಮಗಳ ಉದಯವಾಯಿತು. ಅಹಿಂಸೆ, ಸಂನ್ಯಾಸ, ಸದ್ವರ್ತನೆ ಈ ತ್ರಯಿಗಳೇ ಎರಡೂ ಧರ್ಮಗಳ ಮುಖ್ಯ ತತ್ವಗಳು. ಮೋಕ್ಷಪ್ರಾಪ್ತಿಗಾಗಿ ಸಂನ್ಯಾಸವನ್ನು ಸ್ವೀಕರಿಸಲು ಎರಡೂ ಧರ್ಮಗಳು ಅವಕಾಶವನ್ನು ಕಲ್ಪಿಸಿವೆ.

ಆದರೆ ಜೈನಧರ್ಮವು ಆತ್ಮನ ಅಸ್ತಿತ್ವವನ್ನು ಒಪ್ಪುವದು. ಬೌದ್ಧ ಧರ್ಮವು ಆತ್ಮನ ಸ್ವತಂತ್ರ ಅಸ್ತಿತ್ವವನ್ನು ಒಪ್ಪುವದಿಲ್ಲ. ಜೈನಧರ್ಮದಲ್ಲಿ ಮೋಕ್ಷಪ್ರಾಪ್ತಿಗಾಗಿ ಸಂನ್ಯಾಸವೂ ತಪಶ್ಚರ್ಯೆಯೂ ಅತ್ಯವಶ್ಯವೆಂದು ಹೇಳಿದೆ. ಈ ಸಂನ್ಯಸ್ತವೃತ್ತಿಯ ಅತಿರೇಕವು ಬೌದ್ಧಧರ್ಮದಲ್ಲಿಲ್ಲ.

**ಪ್ರ.:— ಸಿಕಂದರನ ದಾಳಿಯನ್ನು ವರ್ಣಿಸಿರಿ. ಮತ್ತು ಅದರಿಂದ ಆದ ಪರಿಣಾಮವನ್ನು ಹೇಳಿರಿ.**

**ಉ.** :— ಗ್ರೀಸದ ಉತ್ತರಕ್ಕಿರುವ ಮಾಸಿಡೋನಿಯದಲ್ಲಿ ಫಿಲಿಪನೆಂಬ ಪರಾಕ್ರಮಿಯಾದ ಅರಸು ಆಳುತ್ತಿದ್ದನು. ಇವನ ಮಗನೇ ಸಿಕಂದರನು. ತಂದೆಯ ತರುವಾಯ ಸಿಕಂದರನು ಪಟ್ಟಕ್ಕೆ ಬಂದನು. ಇವನಾದರೂ

ಶೂರನೂ ಸಾಹಸಿಯೂ ಚತುರನೂ ಆಗಿದ್ದನು. ಜಗತ್ತನ್ನೇ ಗೆಲ್ಲುವ ಇಚ್ಛೆಯು ಇವನಿಗಿದ್ದಿತು. ಗ್ರೀಸ, ಇರಾಣ ದೇಶಗಳನ್ನು ಗೆದ್ದುಕೊಂಡ ಬಳಿಕ ಇವನು ಹಿಂದುಸ್ಥಾನವನ್ನು ನುಗ್ಗಬೇಕೆಂದು ಹೊರಟನು.

ಕ್ರಿ. ಶ. ಪೂ. ೩೨೯ ರಲ್ಲಿ ಸಿಕಂದರನು ಕಾಬೂಲದ ವರೆಗೆ ಬಂದು ತಿರುಗಿ ಹೋಗಿದ್ದನು. ಮುಂದೆ ೨ ವರ್ಷ ತಡೆದು ಎಂದರೆ ಕ್ರಿ. ಶ. ಪೂ. ೩೨೭ ರಲ್ಲಿ ೩೦ ಸಾವಿರ ಕುದುರೆಯ ಸವಾರರಿಂದ ಕೂಡಿದ ಸೈನ್ಯದೊಡನೆ ಹಿಂದುಸ್ಥಾನದ ವಾಯುವ್ಯ ಸರಹದ್ದಿಗೆ ಬಂದನು. ಬಳಿಕ ಚಳಿಗಾಲವು ಹೋಗಿ ಬೇಸಗೆ ಬರಲು ಓಹಿಂದದ ಬಳಿಯಲ್ಲಿ ಸಿಂಧುನದವನ್ನು ದಾಟಿ ತಕ್ಷಶಿಲೆಯ ರಾಜ್ಯವನ್ನು ಸೇರಿದನು. ತಕ್ಷಶಿಲೆಯ ಅಂಭಿಯು ಸಿಕಂದರನನ್ನು ಕೂಡಿಕೊಂಡು ಪೌರವನಮೇಲೆ ಸಾಗಬೇಕೆಂದು ತಿಳಿಸಿದನು. ಆದರೂ ಪೌರವನು ಧೈರ್ಯದಿಂದ ಸಿಕಂದರನಿಗೆ ಇದಿರಾದನು. ಜೇಹಲಂ ತೀರದಲ್ಲಿ ಘೋರವಾದ ಯುದ್ಧವಾಯಿತು. ಪೌರವನು ಸೋತನು. ಆದರೂ ಇವನ ಶೌರ್ಯ–ಧೈರ್ಯಗಳಿಗೆ ಮೆಚ್ಚಿ ಸಿಕಂದರನು ಅವನ ರಾಜ್ಯವನ್ನು ಮರಳಿ ಕೊಟ್ಟನು. ಮುಂದೆ ಇಡಿ ಹಿಂದುಸ್ಥಾನವನ್ನು ಗೆಲ್ಲುವ ಮನಸ್ಸು ಅವನದಿದ್ದಿತು. ಆದರೆ ಸೈನಿಕರ ಮನಸ್ಸಿಲ್ಲದ್ದರಿಂದ ಮತ್ತು ಮೊದಲು ಗೆದ್ದ ಸೀಮೆಗಳಲ್ಲಿ ಬಂಡುಗಾರರ ಹಾವಳಿ ಎದ್ದದರಿಂದ ಅವನು ಸಿಂಧುನದಿಯ ಮುಖದ ವರೆಗೆ ಸಾಗಿ ಸಮುದ್ರಮಾರ್ಗವಾಗಿ ತನ್ನ ದೇಶಕ್ಕೆ ಹೊರಟನು. ಆದರೆ ದಾರಿಯಲ್ಲಿಯೇ ಬಾಬಿಲನ ಪಟ್ಟಣದಲ್ಲಿ ಕ್ರಿ. ಶ. ಪೂ. ೩೨೩ ರಲ್ಲಿ ವಯಸ್ಸಿನ ೩೨ ನೆಯ ವರ್ಷ ಮರಣಹೊಂದಿದನು.

ಸಿಕಂದರನ ದಾಳಿಯಿಂದಾದ ಪರಿಣಾಮ:— ಈ ದಾಳಿಯ ನಂತರ ಹಿಂದುಸ್ಥಾನ–ಯುರೋಪಗಳ ಬಳಕೆಯು ಹೆಚ್ಚಾಯಿತು. ಸಿಕಂದರನ ಕೂಡ ಗ್ರೀಸದ ಅನೇಕ ವಿದ್ವಾಂಸರು ಇತ್ತ ಬಂದಿದ್ದರು. ಅವರು ಆಗಿನ ಹಿಂದುಸ್ಥಾನದ ಸ್ಥಿತಿಯನ್ನು ವರ್ಣಿಸಿರುವರು. ಸಿಕಂದರನು ತನ್ನೊಡನೆ ಈ ದೇಶದ ಎಷ್ಟೋ ಪಂಡಿತರನ್ನೂ ಹಲವು ಗ್ರಂಥಗಳನ್ನೂ ಒಯ್ದಿದ್ದನು. ಇದರಿಂದ ಹಿಂದುಸ್ಥಾನದ ಸಿರಿ–ಸಂಪತ್ತು, ವಿದ್ಯೆ–ಕಲೆ, ಆಚಾರ–ವಿಚಾರ ಇವುಗಳ ಪರಿಚಯವು ಯುರೋಪದವರಿಗಾಯಿತು. ಸಿಕಂದರನ ದಾಳಿಯ ಕಾಲವು ಅತಿಪ್ರಾಚೀನ ಮತ್ತು ಪ್ರಾಚೀನ ಈ ಇತಿಹಾಸ ಕಾಲಗಳ ಗಡಿ ಎಂದು ಹೇಳುವರು.

---

# ೨ ಪ್ರಾಚೀನ ಕಾಲ

## ( ಕ್ರಿ. ಶ. ಪೂ. ೩೨೧—ಕ್ರಿ. ಶ. ౧೨೦೫ )

ಪ್ರ. :— ಮೌರ್ಯ ಸಾಮ್ರಾಜ್ಯದ ಸಂಸ್ಥಾಪಕನು ಯಾರು ? ಇವನ ಚರಿತ್ರೆಯನ್ನು ಸಂಕ್ಷಿಪ್ತದಲ್ಲಿ ಬರೆಯಿರಿ.

**ಉ.** :— ಮೌರ್ಯ ಸಾಮ್ರಾಜ್ಯದ ಸಂಸ್ಥಾಪಕನು ಚಂದ್ರಗುಪ್ತನು.

**ಚಂದ್ರಗುಪ್ತನ ಚರಿತ್ರೆ** :— ಇವನು ನಂದರನ್ನು ಮುರಿಬಡಿದು ಕ್ರಿ. ಶ. ಪೂ. ೩೨೧ ರಲ್ಲಿ ಮಗಧರಾಜ್ಯಕ್ಕೆ ಒಡೆಯನಾದನು. ಈ ರಾಜ್ಯವನ್ನು ಸ್ಥಾಪಿಸುವ ಕಾರ್ಯದಲ್ಲಿ ವಿಷ್ಣುಗುಪ್ತ ಅಥವಾ ಆರ್ಯಚಾಣಕ್ಯನೆಂಬ ಬುದ್ಧಿಶಾಲಿಯಾದ ಬ್ರಾಹ್ಮಣನ ಸಹಾಯವು ದೊರೆಯಿತು. ಈ ಆರ್ಯ ಚಾಣಕ್ಯನು ನಂದರ ಮಂತ್ರಿಯಾಗಿದ್ದನು. ಇವನು ಬರೆದ ಕೌಟಲೀಯ ಅರ್ಥಶಾಸ್ತ್ರವೆಂಬ ಗ್ರಂಥದಲ್ಲಿ ರಾಜನೀತಿಶಾಸ್ತ್ರವು ಮಾರ್ಮಿಕವಾಗಿ ವಿವರಿಸಲ್ಪಟ್ಟಿದೆ. ಈತನು ಆರ್ಯಧರ್ಮದ ಅಭಿಮಾನಿಯಾಗಿದ್ದನು. ನಂದ ರಾಜರು ಬೌದ್ಧಧರ್ಮಕ್ಕೆ ಅನುಕೂಲರಾಗಿದ್ದರು. ಒಂದು ದಿನ ನಂದರು ತುಂಬಿದ ಸಭೆಯಲ್ಲಿ ಚಾಣಕ್ಯನನ್ನು ಅವಮಾನಗೊಳಿಸಿದರು. ಆಗ ಇವನು "ನಾನು ನಂದರನ್ನು ನಾಶಗೊಳಿಸದಿದ್ದರೆ ಚಾಣಕ್ಯನೇ ಅಲ್ಲ," ಎಂದು ಪ್ರತಿಜ್ಞೆಯನ್ನು ಮಾಡಿದನು. ನಂದರ ಸೇನಾಪತಿಯಾದ ಚಂದ್ರಗುಪ್ತನಿಗೂ ನಂದರು ನಾಶವಾಗುವದು ಬೇಕಾಗಿದ್ದಿತು. ಚಾಣಕ್ಯ–ಚಂದ್ರಗುಪ್ತರು ನಂದರ ನಾಶಕ್ಕಾಗಿ ಮಾಡಿದ ಒಂದು ಪ್ರಯತ್ನವು ವಿಫಲವಾಗಲು ಅವರಿಬ್ಬರೂ ರಾಜ್ಯದಿಂದ ಹೊರಗೆ ಹಾಕಲ್ಪಟ್ಟರು. ಅವರು ಎಡೆಗೆಡದೆ ಪಂಜಾಬದಲ್ಲಿ ನಿಂತು ನಂದರ ನಾಶದ ಹಂಚಿಕೆಯನ್ನು ಹಾಕಹತ್ತಿದರು. ಮುಂದೆ ಸಿಕಂದರನ ಮರಣದ ನಂತರ ಪಂಜಾಬದ ಪೌರವ ಮೊದಲಾದ ಅರಸರ ನೆರವನ್ನು ಪಡೆದು, ನಂದರ ರಾಜ್ಯವನ್ನು ನುಗ್ಗಿ ಧನಾನಂದನನ್ನು ಸೋಲಿಸಿ ಕೊಂದು ಆ ರಾಜ್ಯವನ್ನು ಕೈವಶ ಮಾಡಿಕೊಂಡನು. ಚಾಣಕ್ಯನು ಚಂದ್ರಗುಪ್ತನ ಮಂತ್ರಿಯಾದನು. ಚಂದ್ರಗುಪ್ತ–ಚಾಣಕ್ಯರ ಶೌರ್ಯ, ಸಾಹಸ, ಬುದ್ಧಿಶಕ್ತಿ ಇವುಗಳ ಸುಯೋಗದಿಂದ ಪ್ರಾಚೀನ ಇತಿಹಾಸಕಾಲದ ಮೊದಲನೆಯ ಸಾಮ್ರಾಜ್ಯವು ಸ್ಥಾಪಿಸಲ್ಪಟ್ಟಿತು.

ಚಂದ್ರಗುಪ್ತನು ಪಟ್ಟಕ್ಕೆ ಬಂದ ಬಳಿಕ ಭರದಿಂದ ರಾಜ್ಯವನ್ನು ವಿಸ್ತರಿಸಿದನು ಸಿಕಂದರನ ಒಡೆತನಕ್ಕೆ ಸೇರಿದ್ದ ಪಂಜಾಬಪ್ರಾಂತವನ್ನು ಮೊದಲು ವಶಪಡಿಸಿಕೊಂಡನು. ಸಿಂಧುವಿನಿಂದ ಬಂಗಾಲದ ವರೆಗಿನ ಪ್ರದೇಶದಲ್ಲಿ ಚಂದ್ರಗುಪ್ತನ ರಾಜ್ಯವು ಹಬ್ಬಿದ್ದಿತು. ಇಷ್ಟರಲ್ಲಿ ಸಿಕಂದರನ ಶೂರ ಸೇನಾಪತಿಯಾದ ಸೆಲ್ಯೂಕಸನು ಸಿಂಧದ ವರೆಗಿನ ಪ್ರದೇಶವನ್ನು ವಶಪಡಿಸಿಕೊಂಡು ಹಿಂದುಸ್ಥಾನದ ಮೇಲೆ ಸಾಗಿಬಂದನು. ಆಗ ಚಂದ್ರಗುಪ್ತನಿಗೂ ಸೆಲ್ಯೂಕಸನಿಗೂ ಯುದ್ಧವಾಗಿ ಸೆಲ್ಯೂಕಸನು ಸೋತು ಕಾಬೂಲ, ಕಂದಾಹಾರ, ಬಲೂಚಿಸ್ಥಾನ ಈ ಪ್ರಾಂತಗಳನ್ನು ಚಂದ್ರಗುಪ್ತನಿಗೆ ಬಿಟ್ಟುಕೊಟ್ಟನು. ಮತ್ತು ತನ್ನ ಮಗಳನ್ನು ಚಂದ್ರಗುಪ್ತನಿಗೆ ಕೊಟ್ಟನು. ಅಂದಿನಿಂದ ಸೆಲ್ಯೂಕಸನ ವಕೀಲನಾದ ಮೆಗ್ಯಾಸ್ಥಿನೀಸನು ಚಂದ್ರಗುಪ್ತನ ಓಲಗದಲ್ಲಿ ಇರಹತ್ತಿದನು. ಚಂದ್ರಗುಪ್ತನು ಐದುನೂರು ಆನೆಗಳನ್ನು ಸೆಲ್ಯೂಕಸನಿಗೆ ಕೊಟ್ಟನು

ಚಂದ್ರಗುಪ್ತನ ರಾಜ್ಯಪದ್ಧತಿಯು ಈಗಿನ ಕಾಲದ ಸುಧಾರಿಸಿದ ರಾಷ್ಟ್ರಗಳ ರಾಜ್ಯಪದ್ಧತಿಯನ್ನೇ ಹೋಲುವಂತಹದಿದ್ದಿತು. ಇದರಿಂದ ಚಂದ್ರಗುಪ್ತನ ಮತ್ತು ಆತನ ಮಂತ್ರಿಯಾದ ಆರ್ಯಚಾಣಕ್ಯನ ಯೋಗ್ಯತೆಯು ಚೆನ್ನಾಗಿ ವ್ಯಕ್ತವಾಗುವದು. ರಾಜ್ಯದ ಮುಖ್ಯಭಾಗದ ವ್ಯವಸ್ಥೆಯನ್ನು ಸ್ವತಃ ತಾನೇ ನೋಡುತ್ತಿದ್ದನು. ಉಳಿದ ಭಾಗಗಳಿಗೆ ರಾಜಮನೆತನಕ್ಕೆ ಸಂಬಂಧಿಸಿದವರನ್ನು ಪ್ರತಿನಿಧಿಗಳನ್ನಾಗಿ ನಿಯಮಿಸಿದ್ದನು. ಕಾರಭಾರದ ಸೌಲಭ್ಯಕ್ಕಾಗಿ ಸೈನ್ಯ, ನ್ಯಾಯವಿಚಾರಣೆ, ಗುಪ್ತಚಾರರು, ಉತ್ಪನ್ನ, ಕೆರೆ-ಕಾಲುವೆಗಳು, ಜನಹಿತದ ಕೆಲಸಗಳು ಎಂಬ ಆರು ಖಾತೆಗಳನ್ನು ಸ್ಥಾಪಿಸಿದ್ದನು.

ಹೀಗೆ ವೈಭವದಿಂದಲೂ, ಪರಾಕ್ರಮದಿಂದಲೂ, ಪ್ರಾಚೀನ ಭರತಖಂಡದ ಚಕ್ರವರ್ತಿಯೆಂದೆನಿಸಿದ ಈ ಚಂದ್ರಗುಪ್ತನು ಕ್ರಿ. ಶ. ಪೂ. ೨೯೮ ರಲ್ಲಿ ಮರಣ ಹೊಂದಿದನು.

**ಪ್ರ. :— ಮೌರ್ಯ ಚಂದ್ರಗುಪ್ತನ ರಾಜ್ಯಪದ್ಧತಿಯನ್ನು ವಿವರಿಸಿರಿ.**

**ಉ. :** — ಮೌರ್ಯ ಚಂದ್ರಗುಪ್ತನ ರಾಜ್ಯಪದ್ಧತಿಯು ಈಗಿನ ಸುಧಾರಿಸಿದ ರಾಷ್ಟ್ರಗಳ ರಾಜ್ಯಪದ್ಧತಿಯನ್ನೇ ಹೋಲುತ್ತಿದ್ದಿತು. ಇದರಿಂದ ಚಂದ್ರಗುಪ್ತ-ಚಾಣಕ್ಯರ ಯೋಗ್ಯತೆಯು ಚೆನ್ನಾಗಿ ವ್ಯಕ್ತವಾಗುವದು. ರಾಜ್ಯದ ಮುಖ್ಯಭಾಗದ ವ್ಯವಸ್ಥೆಯನ್ನು ಅಧಿಕಾರಿಗಳ ನೆರವಿನಿಂದ ತಾನೇ

ಸಾಗಿಸುತ್ತಿದ್ದನು. ಅಧೀನ ಪ್ರದೇಶಗಳಿಗೆ ರಾಜಮನೆತನಕ್ಕೆ ಸಂಬಂಧಿಸಿದವರನ್ನೇ ಪ್ರತಿನಿಧಿಗಳನ್ನಾಗಿ ನಿಯಮಿಸುತ್ತಿದ್ದನು. ರಾಜ್ಯಕಾರಭಾರದ ವ್ಯವಸ್ಥೆಗಾಗಿ ಆರು ಖಾತೆಗಳನ್ನು ಸ್ಥಾಪಿಸಿದ್ದನು. ೧. ಸೈನ್ಯ, ೨. ಗುಪ್ತಚಾರರು, ೩. ನ್ಯಾಯವಿಚಾರಣೆ, ೪. ಉತ್ಪನ್ನ, ೫ ಕೆರೆಕಾಲುವೆಗಳು, ೬. ಲೋಕೋಪಯೋಗದ ಕೆಲಸಗಳು.

(೧) **ಸೈನ್ಯ**:— ಇವನ ಸೈನ್ಯವು ಆನೆ, ಕುದುರೆ, ರಥ, ಕಾಲಾಳು ಇವುಗಳಿಂದ ಕೂಡಿದ್ದಿತು. ಈ ನಾಲ್ಕುತರದ ಸೈನ್ಯದ ಮೇಲೆ ನಾಲ್ವರು ಅಧಿಕಾರಿಗಳಿದ್ದರು. ಯುದ್ಧದ ಹಡಗುಪಡೆಗೆ ಒಬ್ಬ ಸ್ವತಂತ್ರ ಅಧಿಕಾರಿಯಿದ್ದನು. ಸೈನ್ಯದ ಪ್ರವಾಸದ ವ್ಯವಸ್ಥೆಗೆ ಒಬ್ಬ ಅಧಿಕಾರಿಯು ಇದ್ದನು. ಈ ರೀತಿ ಸೈನ್ಯದ ಮೇಲೆ ಆರು ಜನರ ನಿಯಂತ್ರಣವಿದ್ದಿತು. ಆರು ಲಕ್ಷ ಕಾಲಾಳುಗಳು, ೩೦ ಸಾವಿರ ಸವಾರರು, ಒಂಬತ್ತು ಸಾವಿರ ಆನೆಗಳು, ಎಂಟು ಸಾವಿರ ರಥಗಳು ಇವನ ಸೈನ್ಯದಲ್ಲಿದ್ದವು.

(೨) **ಗುಪ್ತಚಾರರು**:— ರಾಜ್ಯದ ಎಲ್ಲ ವಿಭಾಗಗಳಲ್ಲಿ ನಡೆದ ಮಹತ್ವದ ಸಂಗತಿಗಳನ್ನೂ ಶತ್ರುಗಳ ಒಳಸಂಚು ಸುಳಿದಾಟಗಳನ್ನೂ ಅರಸನಿಗೆ ತಿಳಿಸುವದು ಗುಪ್ತಚಾರರ ಕೆಲಸವಾಗಿದ್ದಿತು.

(೩) **ನ್ಯಾಯವಿಚಾರಣೆ**:— ನ್ಯಾಯವಿಚಾರಣೆಯ ಕೆಲಸವು ನಿಷ್ಪಕ್ಷಪಾತದಿಂದ ಸಾಗುತ್ತಿದ್ದಿತು. ಅಪರಾಧಿಗಳಿಗೆ ಕಠಿಣತರದ ದಂಡನೆಯು ವಿಧಿಸಲ್ಪಡುತ್ತಿದ್ದಿತು. ಕೊನೆಯ ನಿರ್ಣಯದ ಕೆಲಸವು ಅರಸನ ಕಡೆಗಿದ್ದಿತು. ಅವನು ತುಂಬಿದ ಸಭೆಯಲ್ಲಿ ನ್ಯಾಯವಿಚಾರಣೆಯನ್ನು ನಡೆಸುತ್ತಿದ್ದನು.

(೪) **ಉತ್ಪನ್ನ**:— ಭೂಮಿ, ಕಾಲುವೆ, ಮಾದಕಪದಾರ್ಥಗಳು, ವ್ಯಾಪಾರದ ಸರಕುಗಳು ಇವುಗಳ ಮೇಲಿನ ಕರದಿಂದ ಉತ್ಪನ್ನವು ಬರುವದು. ಭೂಮಿಯ ಉತ್ಪನ್ನದ ನಾಲ್ಕನೆಯ ಪಾಲಿನಷ್ಟು ಹಣವನ್ನು ಸರಕಾರಕ್ಕೆ ಕೊಡಬೇಕಾಗಿದ್ದಿತು.

(೫) **ಕೆರೆ ಕಾಲುವೆಗಳು**:— ಇದ್ದವುಗಳನ್ನು ಸರಿಪಡಿಸುವದು; ಹೊಸ ಕೆರೆ–ಕಾಲುವೆಗಳನ್ನು ಕಟ್ಟಿಸುವದು; ನೀರಿನ ಕರವನ್ನು ನಿರ್ಧರಿಸಿ ಅದನ್ನು ಎತ್ತುವದು ಇವು ಈ ಖಾತೆಯ ಕೆಲಸಗಳಾಗಿದ್ದವು.

(೬) **ಲೋಕೋಪಯುಕ್ತ ಖಾತೆ**:— ಮಾರ್ಗಗಳನ್ನು ಸರಿಯಾಗಿ ಇಡುವದು. ಹೊಸ ಮಾರ್ಗಗಳನ್ನು ತಯಾರಿಸುವದು. ಪ್ರಯಾಣಿಕರ

ತೊಂದರೆಗಳನ್ನು ನಿವಾರಿಸುವದು. ಈ ಮುಂತಾದ ಜನಹಿತದ ಕೆಲಸಗಳು ಈ ಖಾತೆಯವು ಆಗಿದ್ದವು. ಹಳ್ಳಿಗಳ ಮತ್ತು ಪಟ್ಟಣಗಳ ಅಂತರವ್ಯವಸ್ಥೆಯಲ್ಲಿ ಅರಸರು ಕೈಹಾಕುತ್ತಿರಲಿಲ್ಲ. ಹಳ್ಳಿಗಳ ವ್ಯವಸ್ಥೆಯನ್ನು ಗ್ರಾಮಪಂಚಾಯತಿಗಳೂ, ಪಟ್ಟಣಗಳ ವ್ಯವಸ್ಥೆಯನ್ನು ನಗರ ಮಂಡಲಗಳೂ ನೋಡಿಕೊಳ್ಳುತ್ತಿದ್ದವು.

ಪ್ರ. :— ಅಶೋಕನ ಚರಿತ್ರವನ್ನು ಬರೆಯಿರಿ. ಅವನು ತನ್ನ ಸಾಮ್ರಾಜ್ಯದ ಕಾರಭಾರವು ಉತ್ತಮವಾಗಿ ಸಾಗಲು ಮಾಡಿದ ಪರಿಶ್ರಮವನ್ನು ವಿವರಿಸಿರಿ. ಮತ್ತು ಭೌದ್ಧಧರ್ಮದ ಪ್ರಸಾರಕ್ಕಾಗಿ ಅವನು ಯಾವ ಯಾವ ಪ್ರಯತ್ನಗಳನ್ನು ಮಾಡಿದನೆಂಬದನ್ನು ಹೇಳಿರಿ.

**ಉ:— ಅಶೋಕನ ಚರಿತ್ರೆ :—** ಚಂದ್ರಗುಪ್ತನ ಮಗನಾದ ಬಿಂದುಸಾರನು ಶಾಂತತೆಯಿಂದ ರಾಜ್ಯಭಾರವನ್ನು ಸಾಗಿಸಿದನು. ಅವನ ಆಳಿಕೆಯ ಕೊನೆಗೆ ತಕ್ಷಕಶಿಲೆಯತ್ತ ಬಂಡಾಯವೆದ್ದಿತು. ಅದನ್ನು ಅವನ ೨ ನೆಯ ಮಗನಾದ ಶೂರ ಅಶೋಕನು ಅಡಗಿಸಿದನು. ಬಿಂದುಸಾರನ ಮರಣದ ನಂತರ ಈ ಅಶೋಕನೇ ಪಟ್ಟಕ್ಕೆ ಬಂದನು. ಕ್ರಿ. ಶ. ಪೂ. ೨೭೩. ರಾಜ್ಯಾಭಿಷೇಕ ಕ್ರಿ. ಶ. ಪೂ. ೨೬೯. ಇವನು ತನ್ನ ಆಳಿಕೆಯ ಮೊದಲಿನ ಒಂಬತ್ತು ವರ್ಷಗಳಲ್ಲಿ ಸಾಮ್ರಾಜ್ಯವನ್ನು ಸ್ಥಿರಗೊಳಿಸಿದನು. ಕ್ರಿ. ಶ. ಪೂ. ೨೬೧ ರಲ್ಲಿ ಇವನು ಕಲಿಂಗದ ಮೇಲೆ ದಾಳಿಯನ್ನು ಮಾಡಿದನು. ಅಶೋಕನು ಜಯಶಾಲಿಯಾಗಿ ಅದನ್ನು ತನ್ನ ಅಂಕಿತಗೊಳಿಸಿದನು. ಆದರೆ ಬಂಧಿತರ ಯಾತನೆ, ಅಸಂಖ್ಯಜನರ ಪ್ರಾಣಹಾನಿ ಇವುಗಳಿಂದ ಅಶೋಕನ ಮನಸ್ಸು ತಲ್ಲಣಿಸಿತು. ಅವನಿಗೆ ಉಪರತಿಯುಂಟಾಯಿತು. ತನ್ನ ಮಹತ್ವಾಕಾಂಕ್ಷೆಯಿಂದ ಉಂಟಾದ ಸಂಕಟಗಳಿಗಾಗಿ ಅವನಿಗೆ ಪಶ್ಚಾತ್ತಾಪ ಉಂಟಾಯಿತು. ಆಗ ನಿಷ್ಕಾರಣವಾಗಿ ಇನ್ನು ಯುದ್ಧ ಮಾಡಲಾಗದೆಂದು ನಿರ್ಧರಿಸಿ ಕೊನೆಯ ವರೆಗೆ ಅದರಂತೆ ನಡೆದನು.

ಅಶೋಕನ ಸಾಮ್ರಾಜ್ಯವು ಬಹಳ ದೊಡ್ಡದಿದ್ದಿತು. ಹಿಂದುಕುಶದ ವರೆಗೆ ಅಫಗಾಣಿಸ್ತಾನ, ಬಲುಚಿಸ್ತಾನ, ಮಾಕರಾನ, ಸಿಂಧ, ಕಾಶ್ಮೀರ, ನೇಪಾಳ, ಇಡೀ ಭಾರತ (ಪೂರ್ವಕ್ಕೆ ಆಸಾಮದ ವರೆಗೆ, ದಕ್ಷಿಣಕ್ಕೆ ತುಂಗಭದ್ರೆಯ ವರೆಗೆ) ಇಷ್ಟು ದೇಶಗಳು ಇವನ ಸಾಮ್ರಾಜ್ಯಕ್ಕೆ ಸೇರಿದ್ದವು. ಇವನು

ಹಿಂಸೆಯಿಂದ ದೂರವಾಗಿರುವನೆಂದು ತಿಳಿದ ಮೇಲೆಯೂ ಇವನ ಸಾರ್ವಭೌಮಾಧಿಕಾರವು ಶಿಥಿಲವಾಗದೆ ಮತ್ತಿಷ್ಟು ಭದ್ರವಾಗಿ ಉಳಿಯಿತು.

ಬೌದ್ಧ ಧರ್ಮದ ಅಹಿಂಸೆ, ಭೂತದಯೆ, ಪರೋಪಕಾರ ಮುಂತಾದ ನೀತಿತತ್ತ್ವಗಳ ಪರಿಣಾಮವು ಅಶೋಕನ ಮನಸ್ಸಿನ ಮೇಲೆ ದಿನದಿನಕ್ಕೆ ಹೆಚ್ಚಾಗಹತ್ತಿತು. ಇವನು ಮುಂದೆ ಬೌದ್ಧ ಧರ್ಮವನ್ನು ಸ್ವೀಕರಿಸಿ ಆ ಧರ್ಮದ ಪ್ರಸಾರಕ್ಕಾಗಿ ಬಹಳ ಪ್ರಯತ್ನ ಮಾಡಿದನು. ಆದರೂ ಉಳಿದ ಧರ್ಮದವರನ್ನು ಸಮದೃಷ್ಟಿಯಿಂದ ನೋಡುತ್ತಿದ್ದನು ಭಿನ್ನಧರ್ಮದವರಾದರೂ ಎಲ್ಲರೂ ಒಕ್ಕಟ್ಟಿನಿಂದ ಇರಬೇಕೆಂಬದು ಇವನ ಒಂದು ಲೇಖದ ಅಭಿಪ್ರಾಯವಾಗಿದೆ.

ಚಂದ್ರಗುಪ್ತನು ಹಾಕಿಕೊಟ್ಟ ಮಾದರಿಯಂತೆಯೇ ಇವನು ರಾಜ್ಯ ವ್ಯವಸ್ಥೆಯನ್ನು ಉತ್ತಮರೀತಿಯಲ್ಲಿ ಸಾಗಿಸಿದನು. ಪ್ರಜಾಹಿತದ ಕಾರ್ಯಗಳನ್ನು ಇವನಷ್ಟು ಯಾರೂ ಮಾಡಿರಲಿಕ್ಕಿಲ್ಲ. ಜನರು ಧರ್ಮನಿರತರಾಗಲೆಂಬದೇ ಈ ಎಲ್ಲ ಸುಖಸಾಧನಗಳನ್ನು ಒದಗಿಸಿ ಕೊಡುವದರ ಉದ್ದೇಶ! ಎಂದು ಅಶೋಕನು ಅಂದಿರುವನು.

ಅಶೋಕನಂಥ ಅಸಾಮಾನ್ಯ ಪುರುಷರು ಹುಟ್ಟುವದು ಅಪರೂಪ. ಈ ಜಗದ್ವಿಖ್ಯಾತನಾದ ಮಹಾಪುರುಷನು ಕ್ರಿ. ಶ. ಪೂ. ೨೩೨ ರಲ್ಲಿ ಮರಣ ಹೊಂದಿದನು.

**ಸಾಮ್ರಾಜ್ಯದ ಕಾರಭಾರವು ಉತ್ತಮವಾಗಿ ಸಾಗಲು ಅಶೋಕನು ಮಾಡಿದ ಪ್ರಯತ್ನಗಳು :—** ಅಶೋಕನು ತನ್ನ ರಾಜ್ಯದಲ್ಲಿ ಅಯ್ದು ವಿಭಾಗಗಳನ್ನು ಮಾಡಿ ಒಂದರ ವ್ಯವಸ್ಥೆಯನ್ನು ತನ್ನ ಕಡೆಗೆ ಇಟ್ಟುಕೊಂಡಿದ್ದನು. ಉಜ್ಜಯಿನಿ, ತಕ್ಷಶಿಲೆ, ತೋಸಲಿ (ಕಲಿಂಗ), ಸುವರ್ಣನಗರ (ಮೈಸೂರು) ಈ ಉಳಿದ ವಿಭಾಗಗಳ ಮೇಲೆ ನಾಲ್ವರು ರಾಜಪ್ರತಿನಿಧಿಗಳನ್ನು ನಿಯಮಿಸಿದ್ದನು. ರಾಜನು ಸ್ವತಂತ್ರನೆಂಬಂತೆ ತೋರುತ್ತಿದ್ದರೂ ಅವನು ಪ್ರಜಾಮತವನ್ನು ಅಲ್ಲಗಳೆದು ಮನಬಂದಂತೆ ನಡೆಯುವ ಹಾಗೆ ಇರಲಿಲ್ಲ. ಪ್ರಜೆಗಳಲ್ಲಿಯ ಕರ್ತವ್ಯಜಾಗ್ರತಿ ಮತ್ತು ಪ್ರಾಚೀನ ಪರಂಪರೆ ಇವು ಇದರ ಕಾರಣವು. ಪ್ರಾಚೀನ ಕಾಲದಿಂದ ನಡೆದು ಬಂದ ಧರ್ಮ–ಆಚಾರ–ವಿಚಾರ–ಸಾಂಪ್ರದಾಯಗಳಲ್ಲಿ ಹೆಚ್ಚುಕಡಿಮೆ ಮಾಡುವದಾದರೆ ಧರ್ಮಾಧಿಕಾರಿಗಳ ಮತ್ತು ಧರ್ಮಸಭೆಗಳ ಒಪ್ಪಿಗೆಯನ್ನು ಪಡೆಯಲೇ

ಬೇಕಾಗಿದ್ದಿತು. ಸೈನ್ಯ ಮೊದಲಾದ ಯಾವತ್ತು ಖಾತೆಗಳ ವ್ಯವಸ್ಥೆಯು ಚಂದ್ರಗುಪ್ತನ ಕಾಲದಂತೆಯೆ ನಡೆದಿದ್ದಿತು. ಅಶೋಕನ ಆಳಿಕೆಯು ಪ್ರಾಚೀನ ರಾಜನೀತಿಯ ಅತಿ ಉತ್ಕರ್ಷದ ಮಾದರಿಯೆಂದು ಹೇಳುವಲ್ಲಿ ಸಂಶಯವಿಲ್ಲ

**ಅಶೋಕನು ಬೌದ್ಧ ಧರ್ಮದ ಪ್ರಸಾರಕ್ಕಾಗಿ ಮಾಡಿದ ಪ್ರಯತ್ನಗಳು**:— ಅಶೋಕನು ಸ್ವತಃ ಬೌದ್ಧ ಧರ್ಮವನ್ನು ಸ್ವೀಕರಿಸಿದ್ದರಿಂದ ಅದರ ಪ್ರಸಾರಕ್ಕಾಗಿ ಕೊನೆಯವರೆಗೆ ಹೆಣಗಿದನು. ಕಪಿಲವಸ್ತು, ಗಯಾ, ಸಾರನಾಥ ಮೊದಲಾದ ಬೌದ್ಧರ ಪವಿತ್ರ ಕ್ಷೇತ್ರಗಳನ್ನು ಸಂದರ್ಶಿಸಿದನು. ಉಪಗುಪ್ತನೆಂಬ ತನ್ನ ಗುರುವಿನ ಆಜ್ಞೆಯಂತೆ ಕೊನೆಯತನಕ ಧರ್ಮ-ನೀತಿಗಳ ಪ್ರಚಾರವನ್ನೂ ಜನಹಿತದ ಕಾರ್ಯಗಳನ್ನೂ ಮಾಡುತ್ತಿದ್ದನು. ಅಶೋಕನು ಧರ್ಮಪ್ರಸಾರಕ್ಕಾಗಿ ಸ್ವತಂತ್ರವಾದ ಖಾತೆಯನ್ನೇ ಏರ್ಪಡಿಸಿ, ಅರವತ್ತುನಾಲ್ಕುಸಾವಿರ ಧರ್ಮೋಪದೇಶಕರನ್ನು ನಿಯಮಿಸಿ, ಈ ದೇಶದಲ್ಲಿಯೂ ವಿದೇಶಗಳಲ್ಲಿಯೂ ಬೌದ್ಧ ಧರ್ಮವನ್ನು ಹಬ್ಬಿಸಿದನು. ದೇಶದ ಎಲ್ಲ ಭಾಗಗಳಲ್ಲಿ ಧರ್ಮದ ಆಜ್ಞೆಗಳನ್ನು ಪ್ರಸಿದ್ಧಿಸಿ ಅಲ್ಲಲ್ಲಿ ಬಂಡೆಗಳ ಮೇಲೆಯೂ ಕಲ್ಲುಗಳ ಮೇಲೆಯೂ ಕೊರೆಯಿಸಿದನು. ತನ್ನ ಮಗನಾದ ಮಹಿಂದ್ರನನ್ನೂ ಮಗಳಾದ ಸಂಘಮಿತ್ರೆಯನ್ನೂ ಧರ್ಮೋಪದೇಶಕ್ಕಾಗಿ ಸಿಂಹಲ-ದ್ವೀಪಕ್ಕೆ ಕಳುಹಿದನು. ಅಲ್ಲದೆ ಪ್ರಚಾರಕರನ್ನು ನಿಯಮಿಸಿ ಸಿರಿಯಾ, ಇಜಿಪ್ತ, ಬಾಕ್ಟ್ರಿಯಾ, ಚೀನ, ನೇಪಾಳ ಮುಂತಾದ ಕಡೆಗೆ ಧರ್ಮಪ್ರಸಾರವನ್ನು ಮಾಡಿದನು. ಬೌದ್ಧ ಧರ್ಮಗಳ ತತ್ವಗಳ ಚರ್ಚೆಗಾಗಿ ೩ನೆಯ ಧರ್ಮಪರಿಷತ್ತನ್ನು ನೆರೆಯಿಸಿದನು. ಈ ಪರಿಷತ್ತಿನ ಕಾರ್ಯ ೯ ತಿಂಗಳು ಸಾಗಿತು. ಬೇರೆ ಬೇರೆ ಧರ್ಮಪಂಥಗಳ ಜನರು ಒಂದೆಡೆಗೆ ಕೂಡಿ ಒಮ್ಮನಸ್ಸಿನಿಂದ ಕೆಲಸ ಮಾಡಬೇಕೆಂದು ಇವನ ಒಂದು ಆಜ್ಞೆಯಲ್ಲಿ ಉಲ್ಲೇಖವಿದೆ.

**ಪ್ರ. :— ಮೌರ್ಯಮನೆತನದ ಕೊನೆಯಾದ ನಂತರ ಯಾವ ಯಾವ ಪರಕೀಯರು ಹಿಂದುಸ್ಥಾನದ ಮೇಲೆ ದಾಳಿ ಮಾಡಿದರು ?**

**ಉ** :— ಕ್ರಿ. ಶ. ಪೂ. ೧೯೦ ರಲ್ಲಿ ಗ್ರೀಕ ಅರಸನಾದ ಬಾಕ್ಟ್ರಿಯದ ಡೆಮಿಟ್ರಿಯಾಸನು ಮೌರ್ಯ ಮನೆತನದ ಕೊನೆಯ ಕಾಲದಲ್ಲಿಯ **ಮೊದಲನೆಯ ದಾಳಿಗಾರನು.** ಇವನು ಹಿಂದುಕುಶ ಪರ್ವತವನ್ನು ದಾಟಿ ಮೌರ್ಯರ ರಾಜ್ಯವನ್ನು ನುಗ್ಗಿ ಬೃಹದ್ರಥನನ್ನು ಸೋಲಿಸಿದನು. ಆಗ

ಕಾಬೂಲ ಪ್ರಾಂತವು ಮೌರ್ಯರ ಕೈಬಿಟ್ಟಿತು. ದಕ್ಷಿಣದಲ್ಲಿ ಆಂಧ್ರರು ಪ್ರಬಲರಾಗಹತ್ತಿದ್ದರು. ಇಷ್ಟರಲ್ಲಿ ಬೃಹದ್ರಥನ ಸೇನಾಪತಿಯಾದ ಪುಷ್ಯ ಮಿತ್ರಶುಂಗನು ಬೃಹದ್ರಥನನ್ನು ಕೊಂದು ಮಗಧ ರಾಜ್ಯವನ್ನು ಕೈವಶ ಮಾಡಿಕೊಂಡನು. ಕ್ರಿ. ಶ. ಪೂ. ೧೮೪.

ಈ ಪುಷ್ಯಮಿತ್ರನು ತನ್ನ ರಾಜ್ಯವನ್ನು ಬಲಿಸಿಕೊಂಡು ಆಳುತ್ತಿರು ವಾಗ ಕಾಬೂಲದಲ್ಲಿ ಆಳುತ್ತಿದ್ದ ಗ್ರೀಕ ರಾಜನಾದ ಮಿನಾಂಡರ ಅಥವಾ ಮಿಲಿಂದನು ಈ ದೇಶದ ಮೇಲೆ ಏರಿಬಂದ **ಎರಡನೆಯ ದಾಳಿಗಾರನು.** ಇವನು ಅಯೋಧ್ಯಾ ಪ್ರಾಂತದಲ್ಲಿಯ ಸಾಕೇತ ನಗರವನ್ನೂ ರಾಜಸ್ಥಾನ ದಲ್ಲಿಯ ನಾಗರೀ ಪಟ್ಟಣವನ್ನೂ ವಶಪಡಿಸಿಕೊಂಡು ಭಡೋಚದ ವರೆಗೆ ತನ್ನ ಅಧಿಕಾರವನ್ನು ಸ್ಥಾಪಿಸಿದನು. ಮತ್ತು ಕಾಬೂಲದಿಂದ ಸಿಯಾಲಕೋಟಕ್ಕೆ ತನ್ನ ಸಿಂಹಾಸನವನ್ನು ತಂದನು. ಇವನು ಬೌದ್ಧ ಧರ್ಮವನ್ನು ಸ್ವೀಕರಿಸಿ ದನು. "ಮಿಲಿಂದನ ಪ್ರಶ್ನೆಗಳು" ಎಂಬ ಹೆಸರಿನಿಂದ ಪ್ರಸಿದ್ಧವಾದ ತಾತ್ವಿಕ ಪ್ರಶ್ನೆಗಳು ಬೌದ್ಧ ವಾಙ್ಮಯದಲ್ಲಿ ಹೆಸರಾಗಿವೆ.

ಶುಂಗ ಮನೆತನದ ತರುವಾಯ ಕಣ್ವ ಮನೆತನದವರೂ ಅವರ ತರು ವಾಯ ಆಂಧ್ರರೂ ಮಗಧ ರಾಜ್ಯವನ್ನು ವಶಪಡಿಸಿಕೊಂಡರು. ಈ ಕಾಲ ದಲ್ಲಿ ಶಕರು ಬಲೂಚಿಸ್ತಾನದ ಮಾರ್ಗವಾಗಿ ಸಿಂಧ–ಪಂಜಾಬಗಳನ್ನು ಪ್ರವೇ ಶಿಸಿದರು. ತಕ್ಷಶಿಲೆ, ಉಜ್ಜಯಿನಿ, ಮಥುರೆ, ಕಾಠೇವಾಡ ಎಂಬ ಪ್ರಾಂತಗಳಲ್ಲಿ ಶಕರ ರಾಜ್ಯಗಳುಂಟಾದವು. ಇವರು **೩ನೆಯ ದಾಳಿಗಾರರು.** ಇವರು ತಮ್ಮನ್ನು ಸತ್ರಪ (ಕ್ಷತ್ರಪ) ಅಥವಾ ಮಹಾಕ್ಷತ್ರಪರೆಂದು ಎನಿಸಿಕೊಳ್ಳ ಹತ್ತಿದರು. ಇವರ ರಾಜ್ಯಗಳು ಕ್ರಿ. ಶ. ೫ ನೆಯ ಶತಕದ ವರೆಗೆ ನಡೆದವು. ಆದರೆ ಆಂಧ್ರರ ಬಲವಾದ ತಡೆಯ ಮೂಲಕ ಇವರಿಂದ ಸಾಮ್ರಾಜ್ಯವನ್ನು ಸ್ಥಾಪಿಸುವದಾಗಲಿಲ್ಲ.

ಶಕರ ನಂತರ ಹಿಂದುಸ್ಥಾನದ ಮೇಲೆ ದಾಳಿಮಾಡಿದವರು ಕುಶಾನರು. ಇವರು **೪ ನೆಯ ದಾಳಿಗಾರರು.** ಕುಶಾನರು ಕಡಫೀಸನನ್ನು ಮುಖ್ಯಸ್ಥ ನನ್ನಾಗಿ ಮಾಡಿಕೊಂಡು ಗ್ರೀಕರನ್ನು ಸೋಲಿಸಿ ಕಾಬೂಲವನ್ನು ವಶಪಡಿಸಿ ಕೊಂಡರು, ಮುಂದೆ ೨ ನೆಯ ಕಡಫೀಸನು ಹಿಂದುಸ್ಥಾನವನ್ನು ಪ್ರವೇಶಿಸಿ ಕಾಶಿಯ ವರೆಗೆ ಪ್ರದೇಶವನ್ನು ತೆಗೆದುಕೊಂಡನು. ಕ್ರಿ. ಶ. ೧೨೦ ರಲ್ಲಿ ಕನಿ ಷ್ಕನು ಕುಶಾನರ ಅರಸನಾದನು. ಪೇಶಾವರವು (ಪುರುಷಪುರವು) ಇವನ

ರಾಜಧಾನಿಯು. ಶಕರು ಕನಿಷ್ಕನ ಮಾಂಡಲಿಕರಾದರು. ಸಿಂಧ, ಕಾಬೂಲ, ಕಾಶ್ಮೀರ, ಜಾರ್ಕಂದ, ಖೋತಾನ, ಚೀನದ ಕೆಲವು ಭಾಗ ಇಷ್ಟು ಪ್ರದೇಶ ಗಳು ಕನಿಷ್ಕನ ರಾಜ್ಯಕ್ಕೆ ಸೇರಿದ್ದವು. ಮಥುರೆಯು ಇವನ ದಕ್ಷಿಣದ ರಾಜ ಧಾನಿಯಾಯಿತು. ಕನಿಷ್ಕನು ವಿದ್ಯಾಪಕ್ಷಪಾತಿಯಾಗಿದ್ದಂತೆ ಬೌದ್ಧ ಧರ್ಮಾ ಭಿಮಾನಿಯೂ ಆಗಿದ್ದನು. ಮಹಾಸಭೆಯನ್ನು ನೆರೆಯಿಸಿ, ವಿದ್ವಾಂಸರಿಂದ ಬೌದ್ಧಗ್ರಂಥಗಳ ಮೇಲಿನ ಟೀಕೆಗಳನ್ನು ಬರೆಯಿಸಿದನು.

ಪಾರ್ಥಿಯನರ ದಾಳಿಯು ಈ ಕಾಲದಲ್ಲಿ ಹಿಂದುಸ್ಥಾನದ ಮೇಲಾದ ಪರಕೀಯರ ೫ **ನೆಯ ದಾಳಿಯು.** ಆದರೆ ಈ ಪಾರ್ಥಿಯನರ ಅಧಿಕಾರವು ಸಿಂಧದ ದಕ್ಷಿಣದಲ್ಲಿ ನಡೆಯಿತು. ಕ್ರಿ. ಶ. ೨ ನೆಯ ಶತಕದಲ್ಲಿ ಇವರ ರಾಜ್ಯವು ಕುಶಾನರ ಸಾಮ್ರಾಜ್ಯದಲ್ಲಿ ಕೂಡಿಹೋಯಿತು

**ಪ್ರ. :— ಸಮುದ್ರಗುಪ್ತನ ಪರಾಕ್ರಮವನ್ನು ವರ್ಣಿಸಿರಿ. ಮತ್ತು ಅವನನ್ನು 'ಭಾರತದ ನೆಪೋಲಿಯನ' ನೆಂದು ಏಕೆ ಕರೆಯುವರು? ಬರೆಯಿರಿ.**

**ಉ. :—** ಸಮುದ್ರಗುಪ್ತ ಚಕ್ರವರ್ತಿಯು ಗುಪ್ತಮನೆತನದ ಮೂಲ ಪುರುಷನಾದ ಚಂದ್ರಗುಪ್ತನ ಮಗನು. ಇವನು, ತಂದೆಯು ಸ್ಥಾಪಿಸಿದ ರಾಜ್ಯವನ್ನು ಒಳ್ಳೆಯ ಊರ್ಜಿತ ಸ್ಥಿತಿಗೆ ತಂದನು. ಅಶೋಕನ ತರುವಾಯ ಆದ ಕರ್ತೃತ್ವಶಾಲಿಯಾದ ಚಕ್ರವರ್ತಿಯು ಇವನೇ. ಇವನು ಭಗವದ್ಗೀತೆಯ ಭಾಗವತ ಧರ್ಮದ ಅನುಯಾಯಿಯಾಗಿದ್ದನು. ಅಶೋಕನು ಕೊರೆಯಿಸಿದ ನೀತಿವಚನಗಳ ಬುಡದಲ್ಲಿಯೇ ಇವನು ತನ್ನ ದಿಗ್ವಿಜಯದ ವರ್ಣನೆಯನ್ನು ಬರೆಯಿಸಿರುವನು. ಕಾಬೂಲದಿಂದ ಆಸಾಮುದವರೆಗೂ ನೇಪಾಳದಿಂದ ಕಾಂಜೀವರಮದ ವರೆಗೂ ಇವನ ರಾಜ್ಯವು ಹಬ್ಬಿದ್ದಿತು. ಮಹಾಕಾಂತಾರ (ಒಡಿಸಾ) ಮುಂತಾದ ಹನ್ನೆರಡು ರಾಷ್ಟ್ರಗಳನ್ನು ಗೆದ್ದುಕೊಂಡ ಬಳಿಕ ಆ ರಾಜರು ಇವನ ಒಡೆತನವನ್ನು ಒಪ್ಪಿಕೊಂಡದ್ದರಿಂದ ಅವರ ಸ್ವಾತಂತ್ರ್ಯವನ್ನು ತಿರುಗಿ ಕೊಟ್ಟನು. ಪೂರ್ವ–ಪಶ್ಚಿಮ–ಉತ್ತರ ದಿಕ್ಕುಗಳ ರಾಜರನ್ನೆಲ್ಲ ಅಂಕಿತದಲ್ಲಿ ತಂದನು. ವಾಯುವ್ಯಮಾರ್ಗವಾಗಿ ಬರುವ ದಾಳಿಗಾರರನ್ನು ಬಲವಾಗಿ ತಡೆದನು. ಸಿಂಹಳದ ಮೇಘವರ್ಮನು ಇವನೊಡನೆ ಸ್ನೇಹ ದಿಂದಿದ್ದು ಬುದ್ಧಗಯೆಯಲ್ಲಿ ಯಾತ್ರಿಕರಿಗಾಗಿ ಒಂದು ಧರ್ಮಶಾಲೆಯನ್ನು ಕಟ್ಟಿಸಿಕೊಳ್ಳಲು ಕೇಳಿಕೊಂಡನು. ಇದಕ್ಕೆ ಸಮುದ್ರಗುಪ್ತನು ಸಂತೋಷ ದಿಂದ ಒಪ್ಪಿಗೆಯನ್ನಿತ್ತನು.

ಈ ರೀತಿ ಮಾಂಡಲಿಕರಿಗೂ ಮಿತ್ರರಿಗೂ ಪ್ರಿಯನಾದ, ಪರಾಕ್ರಮಿಯೂ ಸುಸಂಸ್ಕೃತನೂ ರಾಜನೀತಿ ನಿಪುಣನೂ ಆದ ಈ ಚಕ್ರವರ್ತಿ ಕ್ರಿ. ಶ. ೩೭೫ ರಲ್ಲಿ ಮರಣಹೊಂದಿದನು.

ಸಮುದ್ರಗುಪ್ತನನ್ನು ನೇಪೋಲಿಯನನೆನ್ನುವರು—ಸಮುದ್ರಗುಪ್ತನ ಮಾದರಿಯ ಸೈನ್ಯವ್ಯವಸ್ಥೆ, ಶ್ರೇಷ್ಠ ಸೇನಾಪತಿತ್ವ, ಅಲೌಕಿಕ ಬುದ್ಧಿಮತ್ತೆ, ರಾಜಕಾರ್ಯಕುಶಲತೆ ಈ ಮುಖ್ಯ ಗುಣಗಳ ಮೂಲಕ ಇವನನ್ನು ಭಾರತದ ನೆಪೋಲಿಯನ್ ಎಂದು ಅಂದಿರುವರು. ಅಲ್ಲದೆ ಇವನು ವಿದ್ವಾಂಸನೂ ಕವಿಯೂ ಗಾಯನ–ವಾದನ ಕಲಾನಿಪುಣನೂ ಕೊನೆಯ ವರೆಗೆ ವೈಭವ ಸಂಪನ್ನನೂ ಆಗಿ ಮೆರೆದನು. ನೇಪೋಲಿಯನನ ಕೊನೆಯ ದಿನಗಳು ಇವನ ಪಾಲಿಗೆ ಇರಲಿಲ್ಲ. ಆದದರಿಂದ ಅವನಿಗಿಂತ ಶ್ರೇಷ್ಠನೆನ್ನಬಹುದು.

**ಪ್ರ. — ಶ್ರೀಹರ್ಷನ ಚರಿತ್ರೆಯನ್ನು ಬರೆದು ಅವನ ಆಳಿಕೆಯಲ್ಲಿಯ ಮುಖ್ಯ ಮುಖ್ಯ ಸಂಗತಿಗಳನ್ನು ಕೊಡಿರಿ.**

**ಉ. :**— ಸಾರ್ವಭೌಮನಾದ ಶ್ರೀಹರ್ಷನು—(ಕ್ರಿ. ಶ. ೬೦೬–೬೪೭) ಶ್ರೀಹರ್ಷನು ಅಧಿಕಾರಿಗಳನ್ನು ನಿಯಮಿಸಿ ಪಂಜಾಬ, ಸಿಂಧ, ಕಾಠೇವಾಡ, ನೇಪಾಳ ಇವುಗಳಲ್ಲಿ ತನ್ನ ವರ್ಚಸ್ಸನ್ನು ನೆಲೆಗೊಳಿಸಿದನು. ಶಶಾಂಕನನ್ನು ಹಿಂದಕಟ್ಟಿ ಅವನು ಪಶ್ಚಿಮದ ಕಡೆಗೆ ಕಾಲಿಡದಂತೆ ಮಾಡಿದನು. ಆಸಾಮದ ಕುಮಾರ ರಾಜನು ಇವನ ಸ್ನೇಹವನ್ನು ಬೆಳೆಸಿ ಬೆಲೆಯುಳ್ಳ ಒಂದು ಶ್ವೇತ ಛತ್ರವನ್ನು ಸಾರ್ವಭೌಮತ್ವದ ಗುರುತೆಂದು ಇವನಿಗೆ ಕೊಟ್ಟನು. ಹೀಗೆ ಇಡೀ ಉತ್ತರ ಹಿಂದುಸ್ಥಾನವು ಇವನ ವರ್ಚಸ್ಸಿಗೆ ಒಳಗಾಯಿತು. ಇದೇ ಕಾಲಕ್ಕೆ ದಕ್ಷಿಣ ಹಿಂದುಸ್ಥಾನಕ್ಕೆ ಚಾಲುಕ್ಯರ ೨ನೆಯ ಪುಲಿಕೇಶಿಯು ಸಾರ್ವಭೌಮನಾಗಿದ್ದನು. ಹರ್ಷನು ನರ್ಮದೆಯ ದಕ್ಷಿಣಕ್ಕೆ ಬಂದು ಪುಲಿಕೇಶಿಯ ರಾಜ್ಯವನ್ನು ಪ್ರವೇಶಿಸಲು ಪುಲಿಕೇಶಿಯು ಅವನನ್ನು ತಡೆದು ಹಿಂದಕ್ಕಟ್ಟಿದನು. ಅಂದಿನಿಂದ ನರ್ಮದೆಯೆ ಈ ಇಬ್ಬರು ಸಾರ್ವಭೌಮರ ಗಡಿಯಾಯಿತು. ಶ್ರೀಹರ್ಷನಲ್ಲಿ ಒಂದು ಲಕ್ಷ ಕುದುರೆ ಸವಾರರೂ ಅರವತ್ತುಸಾವಿರ ಆನೆಗಳೂ ಇದ್ದವು.

ಆರುವರ್ಷಗಳ ವರೆಗೆ ಶ್ರಮವಹಿಸಿ ಸಾಮ್ರಾಜ್ಯವನ್ನು ಭದ್ರಗೊಳಿಸಿದ ಬಳಿಕ ಶ್ರೀ ಹರ್ಷನು ಉಳಿದ ಕಾಲವನ್ನು ಬೌದ್ಧಧರ್ಮದ ಪ್ರಸಾರಕ್ಕಾಗಿಯೆ

ಕಳೆದನು. ದಿವಾಕರಮಿತ್ರನೆಂಬ ಬೌದ್ಧ ಸಂನ್ಯಾಸಿಯ ಉಪದೇಶದಿಂದ ಇವನು ಬೌದ್ಧ ಧರ್ಮವನ್ನು ಸ್ವೀಕರಿಸಿದನು. ರಾಜ್ಯದಲ್ಲಿಯ ಹಿಂಸೆಯನ್ನು ನಿಲ್ಲಿಸಿದನು. ಭಿಕ್ಷುಗಳಿಗಾಗಿ ವಿಹಾರಗಳನ್ನು ಕಟ್ಟಿಸಿದನು. ವರ್ಷಕ್ಕೊಮ್ಮೆ ಭಿಕ್ಷುಗಳ ಸಭೆಯನ್ನು ನೆರೆಯಿಸಿ ಇಪ್ಪತ್ತೊಂದು ದಿನಗಳ ವರೆಗೆ ಧರ್ಮದ ಚರ್ಚೆಯನ್ನು ಮಾಡಿಸುವನು. ಚೀನದ ಪ್ರವಾಸಿಯಾದ ಹುವೆನ್‌ತ್ಸಾಂಗನು ಬೌದ್ಧಧರ್ಮದ ಜ್ಞಾನವನ್ನು ಸಂಪಾದಿಸುವದಕ್ಕಾಗಿ ಬರಲು ಶ್ರೀಹರ್ಷನು ಕನೋಜದಲ್ಲಿ ದೊಡ್ಡ ಧರ್ಮಸಭೆಯನ್ನು ನೆರೆಯಿಸಿದನು.

ಶ್ರೀಹರ್ಷನು ಪರಾಕ್ರಮದಲ್ಲಿ ಸಮುದ್ರಗುಪ್ತನನ್ನೂ ದಾತೃತ್ವದಲ್ಲಿ ಅಶೋಕನನ್ನೂ ಹೋಲುತ್ತಿದ್ದನು. ಐದು ವರ್ಷಕ್ಕೊಮ್ಮೆ ಶಿಲುಕು ಹಣ ವನ್ನೆಲ್ಲ ಭೇದಬುದ್ಧಿಯಿಲ್ಲದೆ ಬೌದ್ಧ ಭಿಕ್ಷುಗಳು, ಬ್ರಾಹ್ಮಣರು, ಶ್ರಮಣಕರು ಮುಂತಾದವರಿಗೆ ದಾನಮಾಡುವನು. ಸ್ವಪರಾಕ್ರಮದಿಂದ ಘಳಿಸಿದ ಸಂಪ ತ್ತನ್ನು ಉದಾರಮನಸ್ಸಿನಿಂದ ದಾನಮಾಡುವ ಶ್ರೀಹರ್ಷನಂತಹ ರಾಜರು ಸಿಗುವದು ದುರ್ಲಭವು.

ಶ್ರೀಹರ್ಷನ ರಾಜ್ಯದಾಡಳಿತದ ಮುಖ್ಯ ಸಂಗತಿಗಳು— ಇವನು ರಾಜ್ಯಭಾರವನ್ನು ಜಾಗ್ರತೆಯಿಂದ ಸಾಗಿಸುತ್ತಿದ್ದನು. ಬೇಟಿ, ತೀರ್ಥಯಾತ್ರೆ ಅಧಿಕಾರಿಗಳ ಮೇಲ್ವಿಚಾರಣೆ ಈ ನೆವದಿಂದ ರಾಜ್ಯದಲ್ಲಿ ತಿರುಗಾಡಿ ನಿಜವಾದ ಪರಿಸ್ಥಿತಿಯನ್ನು ಅರಿತುಕೊಳ್ಳುತ್ತಿದ್ದನು. ಕನೋಜದ ಪಟ್ಟಕ್ಕೆ ಶ್ರೀಹರ್ಷನೇ ಯೋಗ್ಯನೆಂದು ಅಲ್ಲಿಯ ಮಂತ್ರಿಮಂಡಲದವರು ಗೊತ್ತುಮಾಡಿದ್ದರು. ರಾಜ್ಯದ ಲೆಕ್ಕ–ಪತ್ರಗಳ ವ್ಯವಸ್ಥೆಗಾಗಿ ಸ್ವತಂತ್ರ ಖಾತೆಯೇ ಇದ್ದಿತು. ಕಾಲಾಳುಗಳು, ಸವಾರರು, ರಥಗಳು, ಆನೆಗಳು ಇವುಗಳಿಂದ ಕೂಡಿದ ದೊಡ್ಡಸೈನ್ಯವು ರಾಜ್ಯವನ್ನು ಭದ್ರವಾಗಿ ಕಾಯ್ದುಕೊಳ್ಳಲು ಸಮರ್ಥವಾಗಿ ದ್ದಿತು. ದಾಳಿಗಾರರ ಕಾಟವು ಆಗುತ್ತಿತ್ತೆಂದು ಬಾಣಭಟ್ಟ-ಹೂವೆನ್‌ತ್ಸಾಂಗರು ಬರೆದಿಟ್ಟ ಸಂಗತಿಗಳಿಂದ ತಿಳಿಯುಸದು.

**ವಿದ್ಯೆಯ ಏಳ್ಗೆ :—** ಶ್ರೀಹರ್ಷನು ಸಂಪತ್ತಿನ ನಾಲ್ಕನೆಯ ಅಂಶ ವನ್ನು ವಿದ್ಯೆಯ ಏಳ್ಗೆಗಾಗಿ ವೆಚ್ಚಮಾಡುವನು. ಬಹುಜನ ವಿದ್ವಾಂಸರು ಸಂನ್ಯಸ್ತವೃತ್ತಿಯಿಂದಲೇ ಇದ್ದು ಅಧ್ಯಯನ ಅಧ್ಯಾಪನಗಳಲ್ಲಿಯೆ ಆಯುಷ್ಯ ವನ್ನು ಕಳೆಯುತ್ತಿದ್ದರು. ನಾಲಂದ, ಗಯಾ, ಪ್ರಯಾಗ. ಕನೋಜ ಈ ವಿಶ್ವ ವಿದ್ಯಾಲಯಗಳು ವಿದ್ಯಾರ್ಥಿಗಳಿಂದ ತುಂಬಿದ್ದವು ನಾಲಂದದ ವಿದ್ಯಾಲಯವು

ಇವುಗಳಲ್ಲಿ ಹೆಚ್ಚಿನದು; ಇದು ಹತ್ತುಸಾವಿರ ವಿದ್ಯಾರ್ಥಿಗಳಿಗೆ ಸಾಕಾಗು ದಂಥದೂ ಆರು ಅಂತಸ್ತುಗಳುಳ್ಳದ್ದೂ ಆಗಿದ್ದಿತು. ಈ ಮಹಾವಿದ್ಯಾಲಯದ ವೆಚ್ಚಕ್ಕಾಗಿ ನೂರು ಊರುಗಳು ಉಂಬಳಿಯಾಗಿದ್ದವು.

ಶ್ರೀಹರ್ಷನು ಬಾಣಭಟ್ಟ, ಹರದತ್ತ, ಜಯಸೇನ ಮೊದಲಾದ ವಿದ್ವಾಂಸರಿಗೆ ಆಶ್ರಯಕೊಟ್ಟಿದ್ದನು. ಒಮ್ಮೆ ಜಯಸೇನನ ವಿದ್ವತ್ತಿಗೆ ಮೋಹಿತನಾದ ಹರ್ಷನು ಆತನಿಗೆ ಎಂಬತ್ತು ಗ್ರಾಮಗಳ ಉಂಬಳಿಯನ್ನು ಕೊಡುವ ಮನಸ್ಸನ್ನು ವ್ಯಕ್ತಪಡಿಸಿದನು. ಆದರೆ ಆಗ ನಿರಪೇಕ್ಷಿಯಾದ ಆ ಜಯಸೇನನು ದಾನವನ್ನು ಸ್ವೀಕರಿಸಲಿಲ್ಲ.

**ಸಮಾಜ ಸ್ಥಿತಿ:—** ಹರ್ಷನ ಕಾಲಕ್ಕೆ ಸಹಗಮನವು ಗೌರವದ ಸಂಗತಿಯಾಗಿದ್ದಿತು. ಬಾಲವಿವಾಹವೂ ರೂಢಿಯಲ್ಲಿತ್ತು. ಪುನರ್ವಿವಾಹ ವನ್ನು ಶಿಷ್ಟರು ಒಪ್ಪುತ್ತಿರಲಿಲ್ಲ. ಸ್ತ್ರೀಯರು ವಿದ್ಯಾವತಿಯರಾಗಿದ್ದರು. ಜಾತಿಭೇದಗಳು ದೃಢವಾಗಿದ್ದವು ಮೂರ್ತಿಪೂಜೆಯು ರೂಢವಾಗಿತ್ತು. ಈ ದೇಶದ ವ್ಯವಹಾರವು ಜಾವಾ–ಸುಮಾತ್ರಾ ದ್ವೀಪಗಳೊಡನೆ ಸಾಗುತ್ತಿದ್ದಿತು. ಉಡಿಗೆ ತೊಡಿಗೆಗಳು ಸಾದಾತರದವಿದ್ದವು. ಧನಿಕರು ಜರದ ಬೆಲೆಯುಳ್ಳ ವಸ್ತ್ರಗಳನ್ನು ಉಪಯೋಗಿಸುತ್ತಿದ್ದರು.

**ಪ್ರ. :— ಹಿಂದುಧರ್ಮದ ಪುನರುದ್ಧಾರದ ಕಾರ್ಯವನ್ನು ಯಾರು ಮಾಡಿ ದರು? ಆ ಕಾಲದಲ್ಲಿ ಬೌದ್ಧಧರ್ಮದ ಸ್ಥಿತಿಯು ಹೇಗೆ ಇದ್ದಿತು? ಅವರು ಹಿಂದುಧರ್ಮದ ಪುನರುದ್ಧಾರದ ಕಾರ್ಯವನ್ನು ನೆರವೇರಿಸಿದುದು ಹೇಗೆ?**

**ಉ. :—** ಮೊದಲು ಕುಮಾರಿಲ ಭಟ್ಟರು, ಬಳಿಕ ಶಂಕರಾಚಾರ್ಯರು ಹಿಂದುಧರ್ಮದ ಪುನರುದ್ಧಾರದ ಕಾರ್ಯವನ್ನು ಮಾಡಿದರು.

ಆ ಕಾಲದಲ್ಲಿ ಎಂದರೆ ಕ್ರಿ. ಶ. ೭ ನೆಯ ಶತಮಾನದಲ್ಲಿ ಬೌದ್ಧಧರ್ಮ ದವರಲ್ಲಿಯೂ ದೋಷಗಳುಂಟಾದವು. ಠೊಕ್ಕನ್ನರಾದ ಬೌದ್ಧ ಭಿಕ್ಷುಗಳು ನೀತಿತಪ್ಪಿ ನಡೆಯುತ್ತಿದ್ದರು. ಭಿಕ್ಷುಗಳ ಸಂಖ್ಯೆ ದೊಡ್ಡದಾಗಿ ಅವರನ್ನು ಪೋಷಿಸುವ ಭಾರವು ಸಮಾಜದ ಮೇಲೆ ಹೆಚ್ಚಾಯಿತು. ಅಹಿಂಸೆಯ ಅತಿ ರೇಕದಿಂದ ಸ್ವಂತದ ಹಾಗೂ ರಾಷ್ಟ್ರದ ಸಂರಕ್ಷಣೆಗೆ ಬೇಕಾದ ಕ್ಷಾತ್ರವೃತ್ತಿಯು ಇಲ್ಲದಾಯಿತು. ವೇದಪ್ರಾಮಾಣ್ಯ–ವರ್ಣಾಶ್ರಮಗಳನ್ನು ಮೆಚ್ಚುವ ಹಿಂದು ಗಳು ಬೌದ್ಧರಲ್ಲಿಯ ಈ ದೋಷಗಳನ್ನು ಎತ್ತಿ ಅದನ್ನು ಖಂಡಿಸಹತ್ತಿದ್ದರು.

**ಕುಮಾರಿಲಭಟ್ಟರು ಮಾಡಿದ ಕಾರ್ಯ:—** ಬೌದ್ಧ ಧರ್ಮವು ಇಳಿಮುಖವಾಗುತ್ತಿರುವ ಕಾಲಕ್ಕೆ ಆಸಾಮು ಪ್ರಾಂತದ ವಿದ್ಯಾವಂತರ ಒಂದು ಮನೆತನದಲ್ಲಿ ಹುಟ್ಟಿದ ಕುಮಾರಿಲಭಟ್ಟರೆಂಬವರು ಹರ್ಷನ ಕಾಲದ ನಂತರ ತುಸು ದಿನಗಳಲ್ಲಿ ಪ್ರಸಿದ್ಧಿಗೆ ಬಂದರು. ಇವರು ವಿದ್ವಾಂಸರಾಗಿದ್ದು ಬೌದ್ಧ ಭಿಕ್ಷುಗಳಿಂದ ಆ ಧರ್ಮದ ತತ್ವಗಳನ್ನು ಚೆನ್ನಾಗಿ ಮನನ ಮಾಡಿಕೊಂಡರು. ಬಳಿಕ ಇವರು ಬೌದ್ಧಮತವನ್ನು ಖಂಡಿಸಿ ವೇದಗಳ ಬಗೆಗೆ ಜನರ ಮನಸ್ಸಿನಲ್ಲುಂಟಾದ ಅನಾದರವನ್ನು ಕಳೆದು ಅವುಗಳಿಗೆ ಮೊದಲಿನ ಗೌರವವನ್ನು ಉಂಟುಮಾಡಿದರು. ಅಗ್ನಿಹೋತ್ರವೂ ಯಜ್ಞಯಾಗಾದಿಗಳೂ ಅತ್ಯವಶ್ಯವೆಂದು ಜನರ ಮನಸ್ಸಿನಲ್ಲಿ ಬಿಂಬಿಸಲು ಪ್ರಯತ್ನಿಸಿದರು. ಆದರೆ ಬೌದ್ಧ ಧರ್ಮದ ಅಹಿಂಸೆ, ಸಂನ್ಯಾಸ ಈ ತತ್ವಗಳು ಜನಸಾಮಾನ್ಯರಿಗೆ ಪ್ರಿಯವಾಗಿದ್ದದರಿಂದ ಯಜ್ಞಯಾಗಾದಿಗಳನ್ನು ಮರಳಿ ರೂಢಿಸುವದು ಶಕ್ಯವಾಗಲಿಲ್ಲ.

ಶಂಕರಾಚಾರ್ಯರು ಮಾಡಿದ ಕಾರ್ಯ:— ಅಸಾಮಾನ್ಯ ಬುದ್ಧಿಶಾಲಿಗಳಾದ ಇವರು ಕೇರಳ ಪ್ರಾಂತದ ನಂಬುದ್ರಿ ಎಂಬ ಬ್ರಾಹ್ಮಣ ಕುಲದಲ್ಲಿ ಜನ್ಮತಾಳಿದರು. ಕ್ರಿ ಶ. ೭೮೮. ಇವರು ಚಿಕ್ಕವರಿರುವಾಗಲೆ ಇವರ ಹಿರಿಯರು ತೀರಿಕೊಂಡರು. ಅಲ್ಪಕಾಲದಲ್ಲಿ ಇವರು ವಿದ್ಯಾಭ್ಯಾಸವನ್ನು ಮುಗಿಸಿದರು. ಇವರ ಲಗ್ನದ ವಿಚಾರವು ನಡೆಯಿತು ಇವರು ಅದಕ್ಕೆ ಒಪ್ಪಿಕೊಳ್ಳದೆ ಉಪಾಯದಿಂದ ತಾಯಿಯ ಅಪ್ಪಣೆ ಪಡೆದು ಕಾಶಿಗೆ ಹೊರಟರು. ಮಾರ್ಗದಲ್ಲಿ ವಿಂಧ್ಯದ ನೆರೆಯ ಪ್ರದೇಶದಲ್ಲಿ ಗೋವಿಂದಪಾದಾಚಾರ್ಯರೆಂಬ ಸತ್ಪುರುಷರ ದರ್ಶನವಾಯಿತು. ಅವರಿಂದ ಸಂನ್ಯಾಸದೀಕ್ಷೆಯನ್ನು ಹೊಂದಿದರು. ಬಳಿಕ ಕಾಶಿಗೆ ಹೋಗಿ ಧರ್ಮ–ತತ್ವಜ್ಞಾನಗಳ ಚರ್ಚೆಯಲ್ಲಿ ಅಲ್ಲಿಯ ಪಂಡಿತರನ್ನು ಜಯಿಸಿ ತಮ್ಮ ಮತವನ್ನು ಸಿದ್ಧಮಾಡಿಕೊಟ್ಟರು. ಉಪನಿಷತ್ತು, ಭಗವದ್ಗೀತೆ, ವೇದಾಂತಸೂತ್ರ ಈ ಪ್ರಸ್ಥಾನತ್ರಯಿಗಳಿಗೆ ಟೀಕೆಗಳನ್ನು ಬರೆದರು. ಈ ಗ್ರಂಥಗಳು ಶಾಂಕರ ಭಾಷ್ಯ ಎಂಬ ಹೆಸರಿನಿಂದ ಪ್ರಸಿದ್ಧವಾಗಿರುವವು. ಭಾರತದ ಎಲ್ಲ ಕಡೆಗಳಲ್ಲಿ ಸಂಚರಿಸುತ್ತ, ಪಂಡಿತರಿಂದ ತಮ್ಮ ಹೊಸ ಅಭಿಪ್ರಾಯಕ್ಕೆ ಸಮ್ಮತಿಯನ್ನು ಪಡೆಯುತ್ತ, ಹಿಂದುಧರ್ಮದ ಪುನರುದ್ಧಾರದ ಕಾರ್ಯವನ್ನು ಕುಮಾರಿಲಭಟ್ಟರಿಗಿಂತ ಹೆಚ್ಚು ಚಾತುರ್ಯದಿಂದ ಸಾಗಿಸಿದರು. ಇವರ ಉಪದೇಶದ ಪ್ರಭಾವದಿಂದ ಬೌದ್ಧರೆಲ್ಲ ಹಿಂದುಗಳಾದರು. ಧರ್ಮಜಾಗ್ರತೆಯ ಕಾರ್ಯವು ಅಖಂಡವಾಗಿ ನಡೆಯುವದು

ಅಗತ್ಯವೆಂದು ತಿಳಿದು ಭಾರತದ ನಾಲ್ಕು ದಿಕ್ಕುಗಳಲ್ಲಿ ನಾಲ್ಕು ಮಠಗಳನ್ನು ಸ್ಥಾಪಿಸಿದರು. ಶೃಂಗೇರಿಯ ಮಠವು ಇವುಗಳಲ್ಲಿ ಮುಖ್ಯವು.

ಈ ರೀತಿ ಅಲೌಕಿಕ ಕಾರ್ಯವನ್ನು ಪೂರ್ಣಮಾಡಿ ವಯಸ್ಸಿನ ೩೨ ನೆಯ ವರ್ಷ ಹಿಮಾಲಯದ ಬದರಿಕೇದಾರದ ಕಡೆಗೆ ಹೋದವರು ಮರಳಿ ಬರಲಿಲ್ಲ.

**ಪ್ರ. :— ಬೌದ್ಧಧರ್ಮದ ಮೂಲಕ ಪ್ರಾಚೀನ ಹಿಂದುಧರ್ಮದ ಮೇಲೆ ಆದ ಪರಿಣಾಮವೇನು ?**

**ಉ. :—** ಹಿಂದುಸ್ಥಾನದಲ್ಲಿ ಬೌದ್ಧಧರ್ಮವು ಇಲ್ಲದಂತಾದರೂ ಹಿಂದು ಧರ್ಮದ ಮೇಲೆ ಅದರ ಪರಿಣಾಮಗಳಾಗದೆ ಇರಲಿಲ್ಲ. ಅವುಗಳ ವಿವರ— (೧) ಅಹಿಂಸಾ ತತ್ವವು ಜನಪ್ರಿಯವಾದುದರಿಂದ ಹಿಂಸಾಯುಕ್ತ ವಾದ ಯಜ್ಞಯಾಗಾದಿಗಳು ಕಟ್ಟಾದವು. (೨) ಬುದ್ಧನ ಮೂರ್ತಿಪೂಜೆ ಯನ್ನು ನೋಡಿ ಹಿಂದುಗಳು ಮೂರ್ತಿಯನ್ನು ಸ್ಥಾಪಿಸಿ ಅವುಗಳನ್ನು ಪೂಜಿಸ ಹತ್ತಿದರು. (೩) ಬೌದ್ಧರ ಬುದ್ಧ-ಧರ್ಮ-ಸಂಘಗಳಂತೆ ಬ್ರಹ್ಮ-ವಿಷ್ಣು- ಮಹೇಶರ ಉಪಾಸನೆಗೆ ಆರಂಭವಾಯಿತು. (೪) ಜನಸಾಮಾನ್ಯರಿಗೆ ಸುಲಭವೆನಿಸುವ ಭಕ್ತಿಮಾರ್ಗದ ಉದಯವಾಯಿತು. (೫) ಸಂನ್ಯಾಸ ಮಾರ್ಗಕ್ಕೆ ಹೆಚ್ಚು ಮಹತ್ವವು ಬಂದಿತು.

**ಪ್ರ. .— ರಾಜಪುತ್ರರ ಉದಯದ ಬಗೆಗೂ ಈ ರಾಜಪುತ್ರರು ಮುಂದಿನ ಕಾಲದಲ್ಲಿ ನಿರ್ವಹಿಸಿದ ಹಿಂದುಧರ್ಮರಕ್ಷಣೆಯ ಕಾರ್ಯದ ಬಗೆಗೂ ನಿಮಗೆ ತಿಳಿದಿರುವ ಸಂಗತಿಗಳನ್ನು ಬರೆಯಿರಿ.**

**ಉ. :— ರಾಜಪುತ್ರರ ಉದಯ—** ರಾಜಪುತ್ರರು ಪ್ರಾಚೀನ ಕ್ಷತ್ರಿಯ ವಂಶಜರು. ಬೌದ್ಧಧರ್ಮವು ಭರದಿಂದ ಹಬ್ಬುತ್ತಿರುವಾಗ ಬಹಳ ಜನರು ಆ ಧರ್ಮವನ್ನು ಅಂಗೀಕರಿಸಿದರು. ವರ್ಣಸಂಕರವು ಬೇಡಾದವರಿಗೆ ಇದು ಸರಿಬರಲಿಲ್ಲ. ತಮ್ಮ ಪ್ರಾಚೀನ ಪರಂಪರೆಯನ್ನು ಕಾಯ್ದುಕೊಳ್ಳ ಬೇಕೆಂಬ ಇಚ್ಛೆಯುಳ್ಳವರು ಸ್ಥಾನಾಂತರ ಹೊಂದಿ ಅರವಲಿ ವಿಂಧ್ಯಗಳ ಮಧ್ಯಪ್ರದೇಶವನ್ನು ಆಶ್ರಯಿಸಿದರು. ಇವರೇ ಮುಂದೆ ಶುದ್ಧ ಕ್ಷತ್ರಿಯರೆಂಬ ದನ್ನು ಸೂಚಿಸುವ ರಾಜಪುತ್ರ ಎಂಬ ಹೆಸರನ್ನು ಪಡೆದರು.

**ರಾಜಪುತ್ರರು ನಿರ್ವಹಿಸಿದ ಕಾರ್ಯ :—** ರಾಜಪುತ್ರರು ಒಳ್ಳೆಯ ಶೂರರೂ ಉದಾರರೂ ವಚನ ಪಾಲಿಸುವವರೂ ಆಗಿದ್ದರು. ಯುದ್ಧದಲ್ಲಿ

ಒಂದು ವೇಳೆ ಸಾವು ಬಂದರೂ ಮೋಕ್ಷವು ಲಭಿಸುವದು; ಎಂದು ಅವರು ನಂಬುವರು. ರಾಜಪುತ್ರರು ಶಿವಭಕ್ತರು. ರಾಜಪುತ್ರ ಸ್ತ್ರೀಯರೂ ಶೂರರೇ. ಅನೇಕ ಸ್ತ್ರೀಯರ ಪರಾಕ್ರಮದಿಂದ ಶತ್ರುಗಳೊಡನೆ ಕಾದಿದರು. ಮೀರಿದ ಪ್ರಸಂಗದಲ್ಲಿ ಶತ್ರುಗಳ ಕೈಗೆ ಸಿಗುವದನ್ನು ತಪ್ಪಿಸಲು ಜೋಹರವನ್ನು ಮಾಡುವರು.

ಹರ್ಷಸಾಮ್ರಾಜ್ಯದ ನಂತರ ರಾಜಪುತ್ರರು ಪ್ರಬಲರಾಗಿ ತಮ್ಮ ರಾಜ್ಯಗಳನ್ನು ಸ್ಥಾಪಿಸಿದರು. ಕುಮಾರಿಲಭಟ್ಟರೂ ಶಂಕರಾಚಾರ್ಯರೂ ಹೊಸ ಸ್ವರೂಪದಲ್ಲಿ ವೈದಿಕ ಧರ್ಮವನ್ನು ಮರಳಿ ಸ್ಥಾಪಿಸಿದ ಬಳಿಕ ಅದನ್ನು ಸಂರಕ್ಷಿಸುವ ಕಾರ್ಯವನ್ನು ಕ್ರಿ. ಶ. ೮ ನೆಯ ಶತಕದಿಂದ ಹದಿನೇಳನೆಯ ಶತಕದ ವರೆಗೆ ಈ ರಾಜಪುತ್ರರೇ ಕೈಕೊಂಡರು. ಅಪರಿಮಿತವಾದ ಕಷ್ಟ–ನಷ್ಟಗಳನ್ನು ಸಹಿಸಿ ಮತ್ತು ಅಸಂಖ್ಯ ಪ್ರಾಣಗಳನ್ನು ನೀಡಿ ಈ ವೀರರು ಧರ್ಮರಕ್ಷಣೆಯ ಕೆಲಸವನ್ನು ತಡೆಯಿಲ್ಲದೆ ಸಾಗಿಸಿದರು.

**ಪ್ರ. :—ವೀರಶೈವ ಮತದ ತತ್ತ್ವಗಳಾವವು ? ಮತ್ತು ವೀರಶೈವ ಮತದಿಂದ ಸಮಾಜದ ಮೇಲಾದ ಪರಿಣಾಮಗಳಾವವು ?**

**ಉ: :— ವೀರಶೈವ ಮತದ ತತ್ತ್ವಗಳು**— ವೀರಶೈವರು ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತವನ್ನು ನಂಬುವರು. ಶಿವನೇ ಪರದೈವತವು. ಶುದ್ಧಾಂತಃಕರಣಿಯಾದ ಜೀವನು ಶಿವನಲ್ಲಿ ಐಕ್ಯವನ್ನು ಹೊಂದುವದೇ ಈ ಮತದ ಧ್ಯೇಯವು. ಈ ಧ್ಯೇಯದ ಸಿದ್ಧಿಗೆ ಪಂಚ ಆಚಾರಗಳು, ಷಟ್‌ಸ್ಥಲಗಳು, ಅಷ್ಟ ಆವರಣಗಳು ಸಾಧನಗಳಾಗಿವೆ.

**ವೀರಶೈವ ಮತದಿಂದ ಸಮಾಜದ ಮೇಲೆ ಆದ ಪರಿಣಾಮ**— ಸಮಾನತೆಯ ತತ್ತ್ವದಿಂದ ಸಮಾಜದಲ್ಲಿ ಒಕ್ಕಟ್ಟು ಉಂಟಾಗಲು ಸಹಾಯವಾಯಿತು. ಉದ್ಯೋಗಭೇದದಿಂದ ಉಂಟಾಗುತ್ತಿದ್ದ ಉಚ್ಚ–ನೀಚ ಭಾವನೆಯು ಇಲ್ಲದಂತಾಯಿತು. ಮಠಸಂಸ್ಥೆಗಳ ಮೂಲಕ ಧರ್ಮಾಧಿಕಾರಿಗಳ ವರ್ಚಸ್ಸು ಸಮಾಜದ ಮೇಲೆ ಉಳಿದು ಜನರ ಆಚಾರ–ವಿಚಾರಗಳನ್ನು ಸರಿಯಾಗಿ ಇರಿಸಲು ಅನುಕೂಲವಾಯಿತು. ಪ್ರತಿಯೊಬ್ಬನು ಕಾಯಕವನ್ನು ಮಾಡಿಯೇ ಉಪಜೀವನವನ್ನು ಸಾಗಿಸತಕ್ಕದ್ದು; ಎಂಬ ಈ ನಿಯಮದಿಂದ ಉದ್ಯೋಗದ ಕಡೆಗೆ ಜನರ ಒಲವು ಉಂಟಾಯಿತು. ಜನಸಾಮಾನ್ಯರಿಗೆ ಸುಲಭವಾಗಲೆಂದು ವಚನಶಾಸ್ತ್ರ ಮೊದಲಾದ ಧಾರ್ಮಿಕ ಗ್ರಂಥಗಳು ನಾಡ

ನುಡಿಯಲ್ಲಿ ಎಂದರೆ ಕನ್ನಡದಲ್ಲಿ ರಚಿಸಿದ್ದರಿಂದ ಕನ್ನಡ ಸಾಹಿತ್ಯಕ್ಕೆ ಕಳೆಯುಂಟಾಯಿತು.

ಪ್ರ. :— ಫಾಹ್ಯೆನ, ಹುವೆನ್‌ತ್ಸಾಂಗ, ಮೆಗ್ಯಾಸ್ಥೆನೀಸ ಇವರು ಯಾವ ದೇಶದವರು? ಅವರು ಇಲ್ಲಿ ಯಾವಾಗ ಮತ್ತು ಏಕೆ ಬಂದಿದ್ದರು? ಅವರು ವ್ಯಕ್ತಗೊಳಿಸಿದ ಅಭಿಪ್ರಾಯಗಳನ್ನು ಬರೆಯಿರಿ.

**ಉ. :— ಫಾಹ್ಯೆನ**— ಇವನು ಚೀನದೇಶದವನು. ಬೌದ್ಧಧರ್ಮದ ಯಾತ್ರೆಗಾಗಿ ಈ ದೇಶಕ್ಕೆ ಗುಪ್ತಮನೆತನದ ವಿಕ್ರಮಾದಿತ್ಯನ ಕಾಲದಲ್ಲಿ ಬಂದಿದ್ದನು. ಮತ್ತು ಕ್ರಿ. ಶ. ೪೦೫ ರಿಂದ ೪೧೧ ರ ವರೆಗೆ ಆರು ವರ್ಷ ಈ ದೇಶದಲ್ಲಿ ವಾಸಿಸಿದ್ದನು.

ಇವನ ಅಭಿಪ್ರಾಯ— ಜನರು ಪ್ರಾಮಾಣಿಕರಾಗಿರುವರು. ಹಿಂದುಗಳೂ ಬೌದ್ಧರೂ ಪರಸ್ಪರ ಪ್ರೇಮದಿಂದ ಇರುವರು. ಇವರು ಪ್ರಾಣಿಗಳನ್ನು ಹಿಂಸಿಸುವದಿಲ್ಲ; ಮದ್ಯವನ್ನು ಕುಡಿಯುವದಿಲ್ಲ; ಬೆಳ್ಳುಳ್ಳಿ ತಿನ್ನುವದಿಲ್ಲ. ಧನಿಕರು ದರಿದ್ರರಿಗಾಗಿ ಔಷಧಾಲಯಗಳನ್ನು ಇಡುವರು. ರಾಜರು ಪ್ರಜೆಗಳಿಗೆ ಭಾರವೆನಿಸುವ ಹಾಗೆ ಕರಗಳನ್ನು ಎತ್ತುವದಿಲ್ಲ. ಅಪರಾಧಿಗಳಿಗೆ ಕೊಟ್ಟ ಶಿಕ್ಷೆಗಳು ಹಗುರಾಗಿದ್ದವು. ಮರಣದಂಡನೆಯನ್ನು ಮಾಡುತ್ತಿರಲಿಲ್ಲ. ಅರಸನ ಓಲಗದಲ್ಲಿ ಕವಿಗಳೂ ವಿದ್ವಾಂಸರೂ ಇರುವರು. ಶಾಸ್ತ್ರಕಲೆಗಳು ಅಭಿವೃದ್ಧಿಯಲ್ಲಿ ಇರುವವು.

**ಹೂವೆನ್‌ತ್ಸಾಂಗ**— ಶ್ರೀಹರ್ಷನ ಕಾಲದಲ್ಲಿ ಕ್ರಿ. ಶ. ೬೪೧ ರಲ್ಲಿ ಬಂದ ಚೀನ ದೇಶದ ಯಾತ್ರಿಕನು. ಇವನು ಪುಲಕೇಶಿಯ ರಾಜ್ಯದಲ್ಲಿ ಸಂಚರಿಸಿ ಇವನ ರಾಜ್ಯವೈಭವವನ್ನು ಚೆನ್ನಾಗಿ ಬಣ್ಣಿಸಿರುವನು.

“ಪುಲಕೇಶಿಯ ರಾಜ್ಯವು ಒಂದು ಸಾವಿರ ಮೈಲು ಹಬ್ಬಿದೆ. ಪಟ್ಟಣದ ವಿಸ್ತಾರವು ಹನ್ನೆರಡು ಮೈಲು ಅದೆ. ಭೂಮಿಯು ಬೆಳೆಯುಳ್ಳದ್ದು. ಹವೆಯು ಸೆಕೆಯುಳ್ಳದ್ದು. ಜನರ ನೀತಿನಡೆವಳಿಕೆಗಳು ಮೆಚ್ಚುವಂಥವು. ಪ್ರಾಮಾಣಿಕತನವು ಇವರಲ್ಲಿ ಕಂಡುಬರುವ ಎಲ್ಲಕ್ಕೂ ಹೆಚ್ಚಿನ ಸದ್ಗುಣವು. ಉಪಕಾರ ಮಾಡಿದವರನ್ನು ಎಂದೂ ಮರೆಯುವವರಲ್ಲ. ಅಪಕಾರಮಾಡಿದವರ ಸೇಡು ತೀರಿಸಿಕೊಳ್ಳದೆ ಬಿಡುವವರೂ ಅಲ್ಲ. ಈ ರಾಜನ ಹತ್ತಿರ ಸಾವಿಗಂಜದ ಲಕ್ಷಾವಧಿ ಶೂರರಿರುವರು. ಪುಲಕೇಶಿಯು ದೊಡ್ಡ ಮನಸ್ಸಿನವನೂ ದಯಾಳುವೂ ಆಗಿದ್ದನು. ಪ್ರಜೆಗಳು ಇವನನ್ನು ಒಳ್ಳೆಯ ನಿಷ್ಠೆಯಿಂದ ಕಾಯುವರು.”

ಎಂದು ಹುವೆನ್‌ತ್ಸಾಂಗನು ಅಂದಿರುವನು. ಅಲ್ಲದೆ, ಹುವೆನ್‌ತ್ಸಾಂಗನಿಗೆ ಹರ್ಷನ ಪರಿಚಯವು ವಿಶೇಷವಾಗಿದ್ದಿತು. ಅವನು "ಹರ್ಷನ ರಾಜ್ಯ ಕಾರಭಾರವು ಏಕತಂತ್ರವೂ ಬಲಿಷ್ಠವೂ ಇದ್ದಿತು. ರಾಜನು ಪ್ರಜಾಹಿತದಕ್ಷನಾಗಿದ್ದನು. ಎಲ್ಲ ಖಾತೆಗಳ ವಿಚಾರಣೆಯನ್ನು ಕಟ್ಟಿನಿಂದ ಮಾಡುತ್ತಿದ್ದನು. ಹಿಂದು–ಬೌದ್ಧರಲ್ಲಿ ಪರಸ್ಪರ ದ್ವೇಷ–ಅಸೂಯೆಗಳು ಇದ್ದಿಲ್ಲ. ಜನರು ಸಂತುಷ್ಟರೂ ಸುಖಿಗಳೂ ಆಗಿದ್ದರು. ಕನೋಜ, ಮಥುರಾ ಪಟ್ಟಣಗಳು ಒಳ್ಳೆಯ ಊರ್ಜಿತ ಸ್ಥಿತಿಯಲ್ಲಿದ್ದವು. ಕನೋಜದಲ್ಲಿ ನೂರು ವಿಹಾರಗಳೂ ಎರಡುನೂರಾ ಎಂಬತ್ತು ದೇವಾಲಯಗಳೂ ಇದ್ದವು." ಎಂದಿರುವನು.

ಹೂವೆನ್‌ತ್ಸಾಂಗನು ನಾಲಂದದ ವಿದ್ಯಾಲಯದಲ್ಲಿ ಸಂಸ್ಕೃತದ ಅಧ್ಯಯನಕ್ಕಾಗಿ ಐಯ್ದು ವರ್ಷ ಇದ್ದನು. ಈ ಯಾತ್ರಿಕನು ತನ್ನ ದೇಶಕ್ಕೆ ಹೊರಟಾಗ ಹರ್ಷನು ತನ್ನ ರಾಜ್ಯದ ಮೇರೆಯ ವರೆಗೆ ಉತ್ತಮ ವ್ಯವಸ್ಥೆಯನ್ನಿಟ್ಟಿದ್ದನು.

**ಮೆಗ್ಯಾಸ್ಥೆನೀಸ**— ಅಲೆಕ್ಝಾಂಡರನ ಸೇನಾಪತಿಯಾದ ಸೆಲ್ಯೂಕಸನು ಈ ಮೆಗ್ಯಾಸ್ಥೆನೀಸನನ್ನು ಚಂದ್ರಗುಪ್ತನ ಓಲಗಕ್ಕೆ ವಕೀಲನನ್ನಾಗಿ ಕಳುಹಿದ್ದನು. ಈ ಮೆಗ್ಯಾಸ್ಥೆನೀಸನು ಚಂದ್ರಗುಪ್ತನ ಕಾಲದ ಹಿಂದುಸ್ಥಾನದ ಲೋಕಸ್ಥಿತಿಯನ್ನು ಬರೆದಿಟ್ಟಿರುವನು. "ಪಾಟಲೀಪುತ್ರ ನಗರವು ಗಂಗಾ–ಶೋಣ ನದಿಗಳ ಕತ್ತರಿಯಲ್ಲಿದೆ. ನಗರದ ಸುತ್ತಲೂ ಕಂದಕವೂ ಭದ್ರವಾದ ಗೋಡೆಯೂ ಇದೆ. ೬೪ ಬಾಗಿಲುಗಳಿವೆ. ನಗರದ ವ್ಯವಸ್ಥೆಗಾಗಿ ಮೂವತ್ತು ಜನರದೊಂದು ಮಂಡಲವದೆ. ಅದರಲ್ಲಿಯ ಬೇರೆ ಬೇರೆ ಆರು ವಿಭಾಗಗಳ ಕಡೆಗೆ ಒಂದೊಂದು ಶಾಖೆಯ ವ್ಯವಸ್ಥೆಯು ಒಪ್ಪಿಸಲ್ಪಟ್ಟಿತ್ತು. ಹಳ್ಳಿಗಳ ಕಾರಭಾರವು ಗ್ರಾಮಪಂಚಾಯತಿಗಳ ಕೈಯಲ್ಲಿಯೇ ಇದ್ದಿತು. ಸರಕಾರದ ಕರಗಳನ್ನು ಕೊಟ್ಟರೆ ಆಯಿತು. ಅದು ಊರ ಕಾರಭಾರದಲ್ಲಿ ಕೈಹಾಕುತ್ತಿದ್ದಿಲ್ಲ. ಈ ಹಳ್ಳಿಗಳು ತಮ್ಮ ಜೀವನವನ್ನು ನಿರ್ಭಯವಾಗಿಯೂ ಸುಸೂತ್ರವಾಗಿಯೂ ಸಾಗಿಸುತ್ತಿದ್ದವು.

**ಪ್ರ. :— ಮುಸಲ್ಮಾನೀ ಧರ್ಮದ ಸ್ಥಾಪಕರು ಯಾರು? ಅದು ಎಲ್ಲಿ ಯಾವಾಗ ಸ್ಥಾಪಿಸಲ್ಪಟ್ಟಿತು? ಮತ್ತು ಯಾವ ಯಾವ ದೇಶಗಳು ಪೂರ್ಣವಾಗಿ ಮುಸಲ್ಮಾನೀ ಧರ್ಮಕ್ಕೆ ಸೇರಿದವು?**

**ಉ. :—** ಮಹಮ್ಮದ ಪೈಗಂಬರರು ಮುಸಲ್ಮಾನೀ ಧರ್ಮವನ್ನು

ಸ್ಥಾಪಿಸಿದರು. ಈ ಧರ್ಮವು ಅರಬಸ್ತಾನದಲ್ಲಿ ಕ್ರಿ ಶ. ೬೨೨ ರಲ್ಲಿ ಪ್ರಾರಂಭ ವಾಯಿತು ಸಿರಿಯಾ, ಇರಾಣ, ಇಜಿಪ್ತ, ಅಫಗಾನಿಸ್ತಾನ, ಬಲೂಚಿಸ್ತಾನ, ತುರ್ಕಸ್ತಾನ ಈ ದೇಶಗಳು ಪೂರ್ಣವಾಗಿ ಮುಸಲ್ಮಾನೀ ಧರ್ಮಕ್ಕೆ ಕೂಡಿ ದವು.

**ಪ್ರ. .— ಮುಸಲ್ಮಾನೀ ಧರ್ಮದ ತತ್ತ್ವಗಳಾವವು? ಮುಸಲ್ಮಾನೀ ಧರ್ಮದ ಮಹತ್ವದ ಗ್ರಂಥಗಳಾವವು?**

**ಉ. :— ಮು. ಧರ್ಮದ ತತ್ತ್ವಗಳು**— (೧) ದೇವರು ಒಬ್ಬನೇ. ಆತನನ್ನು ನಿಜಭಕ್ತಿಯಿಂದ ಪ್ರಾರ್ಥಿಸುವದು. (೨) ದುರ್ವ್ಯಸನ-ದುರಾ ಚಾರಗಳಿಂದ ಅಲಿಪ್ತನಾಗಿರುವದು. (೩) ದಾನ ಮಾಡುವದು; ಮಕ್ಕಾ ಯಾತ್ರೆಮಾಡುವದು.

**ಮು. ಧರ್ಮಗ್ರಂಥಗಳು**—(೧) ಕುರಾನ್ ಶರೀಫ್ (ದೇವರ ವಚನ ಸಂಗ್ರಹ) (೨) ಹದೀಸ ಶರೀಫ್ (ಪೈಗಂಬರರ ವಚನಗಳು). (೩) ಫಿಕ್ಕಾ (ಕುರಾನ್ ಮತ್ತು ಹದೀಸ್ ಇವುಗಳ ಆಧಾರದಿಂದ ಒರೆದ ಟೀಕಾಗ್ರಂಥಗಳು ) (೪) ಫತವಾ (ಧಾರ್ಮಿಕ ನಿರ್ಣಯಗಳ ಸಂಗ್ರಹ.)

**ಪ್ರ. :— ಭಾರತದ ಮೇಲೆ ದಾಳಿಮಾಡಿದ ಮೊದಲನೆಯ ಮುಸಲ್ಮಾನ ಸರ ದಾರನು ಯಾರು? ಅವನು ಮಾಡಿದ ದಾಳಿಯ ಬಗೆಗೆ ವಿವರಿಸಿರಿ.**

**ಉ. :—** ಕ್ರಿ. ಶ ೭೧೨ ರಲ್ಲಿ ಖಲೀಫರ ಅಪ್ಪಣೆಯಂತೆ ಮಹಮ್ಮದ ಬಿನ್ ಕಾಶೀಮನೆಂಬ ಸರದಾರನು ೧೨ ಸಾವಿರ ಸೈನ್ಯದೊಂದಿಗೆ ಸಿಂಧದ ಮೇಲೆ ದಾಳಿಮಾಡಿದನು. ಆಗ ಸರಹದ್ದಿನ ಸರದಾರನಾದ ಮಹಮದ ಬಿನ್ ಹಾರೂನನು ೩ ಸಾವಿರ ಸೈನ್ಯದೊಂದಿಗೆ ಬಂದು ಕೂಡಿದನು. ದಾಹರನ ಮಗ ಜಯಸಿಂಹನು ಅರಬರೊಡನೆ ಕಾದಿ ನೋತು ಹತನಾದನು. ದಾಹರನ ಹೆಂಡತಿ ಶೌರ್ಯದಿಂದ ಕಾದಿ ಕೊನೆಗೆ ಜೋಹರ ಮಾಡಿದಳು. ಮಹಮ್ಮದ ಬಿನ್ ಕಾಸೀಮನು ಅಲೋರ ಪಟ್ಟಣವನ್ನು ವಶಮಾಡಿಕೊಂಡು ಸಿಂಧವನ್ನು ಖಲೀಪನ ರಾಜ್ಯಕ್ಕೆ ಕೂಡಿಸಿದನು. ಬಳಿಕ ಮಹಮ್ಮದ ಬಿನ್ ಕಾಸೀಮನು ಮುಲ್ತಾನವನ್ನು ಗೆದ್ದು ಚಿತ್ತೂರ ಮೇಲೆ ಏರಿಹೋದನು. ಅಲ್ಲಿಯ ಬಪ್ಪಾ ರಾವಳನು ಅರಬರನ್ನು ತಡೆದು ಸೋಲಿಸಿದನು. ಆಗ ಮಹಮದ ಬಿನ್ ಕಾಸೀಮನು ಹಿಂದಿರುಗಿ ಸಿಂಧವನ್ನು ಸೇರಿಕೊಂಡನು.

ಪ್ರ. :— ಗಿಝುನೀ ಮಹಮೂದನ ಚರಿತ್ರೆಯನ್ನೂ ಆಳಿಕೆಯನ್ನೂ ಸಂಕ್ಷಿಪ್ತ ವಾಗಿ ವರ್ಣಿಸಿರಿ.

**ಉ.** :— ಗಿಝುನಿಯ ಮಹಮೂದ- ( ಕ್ರಿ ಶ. ೯೯೭—೧೦೩೦ ) ಇವನು ಸಬಕ್ತಗೀನನ ಮಗನು. ಇವನು ಜುಖಾರಾದ ಸುಲ್ತಾನ ಮೇಲೆ ಸಾಗಿ ಎರಡು ವರ್ಷ ಕಾದಿ ಅದನ್ನು ವಶಪಡಿಸಿಕೊಂಡು ತಾನೇ ಸುಲ್ತಾನ ನೆಂದು ಆಳಹತ್ತಿದನು. ಮುಂದೆ ಇವನು ಹಿಂದುಸ್ಥಾನದ ಅರಸರಲ್ಲಿ ಒಕ್ಕಟ್ಟು ಇಲ್ಲದ್ದನ್ನು ತಿಳಿದು ಸಂಪತ್ತುಳ್ಳ ಈ ದೇಶದಿಂದ ಸುಲಿಗೆಯನ್ನು ಒಯ್ಯುವ ನೆವದಿಂದ ೧೭ ಸರತಿ ದಾಳಿ ಮಾಡಿದನು. ಇದರಿಂದ ಅಪಾರವಾದ ಸಂಪ ತ್ತನ್ನು ಕೂಡಹಾಕಿದನು.

ಮುಸಲ್ಮಾನೀ ರಾಷ್ಟ್ರಗಳಲ್ಲಿ ಇವನ ಕೀರ್ತಿಯು ವಿಶೇಷವಾಗಿದ್ದಿತು. ಶೂರನೂ, ಸಮರ್ಥನೂ, ವಿದ್ಯಾಭಿಮಾನಿಯೂ ಆಗಿದ್ದನು. ಫಿರದೂಸಿ, ಅನ್ಸಾರಿ ಈ ಹೆಸರಾದ ಕವಿಗಳು ಇವನ ಆಶ್ರಯದಲ್ಲಿದ್ದರು. ಹಿಂದುಧರ್ಮದ ದ್ವೇಷವು ಇವನಲ್ಲಿದ್ದ ದುರ್ಗುಣವೆನ್ನಲು ಅಡ್ಡಿಯಿಲ್ಲ. ಇವನ ವಿಷಯದ ತಿರಸ್ಕಾರವೇ ಇವನ ಅಧಿಕಾರವು ಮುಂದೆ ಅಲ್ಪಕಾಲದಲ್ಲಿ ಅಳಿದುಹೋಗಲು ಕಾರಣವಾಯಿತು. ಕ್ರಿ. ಶ. ೧೦೩೦ ರಲ್ಲಿ ಇವನು ಮರಣ ಹೊಂದಿದನು.

ಪ್ರ. :— ಮಹಮ್ಮದ ಘೋರಿಯ ಚರಿತ್ರೆಯನ್ನೂ ಅವನ ಆಳಿಕೆಯನ್ನೂ ವಿವರಿಸಿರಿ,

**ಉ.** :— ಮಹಮ್ಮದ (ಶಹಾಬುದ್ದೀನ) ಘೋರಿಯು ಕ್ರಿ. ಶ. ೧೧೭೩ ರಲ್ಲಿ ಸುಲ್ತಾನನೆಂಬ ಹೆಸರಿನಿಂದ ಗಿಝುನಿಯ ಪಟ್ಟವನ್ನು ಆಕ್ರಮಿಸಿ ಆಳಹತ್ತಿದನು. ಮುಂದೆ ಕ್ರಿ. ಶ. ೧೧೯೧ ರ ವರೆಗೆ ಪೇಶಾವರ, ಮುಲ್ತಾನ, ಲಾಹೋರಗಳ ಮೇಲೆ ಸಾಗಿ ಅಲ್ಲಿ ತನ್ನ ಅಧಿಕಾರವನ್ನು ನೆಲೆಸಿ ರಜಪೂತರ ಮೇಲೆ ಸಾಗಿಬಂದನು. ಆಗ ದಿಲ್ಲಿಯ ಪೃಥ್ವೀರಾಜ ಚವ್ಹಾಣನೂ ಕನೋಜದ ಜಯಚಂದ ರಾಠೋಡನೂ ಪ್ರಸಿದ್ಧರಾಗಿದ್ದರು. ಈ ಎರಡೂ ಮನೆತನಗಳಲ್ಲಿ ಹಗೆತನವಿದ್ದಿತು. ಈ ಸಂಗತಿಯನ್ನು ತಿಳಿದು ಮಹಮ್ಮದನು ದಿಲ್ಲಿಯ ಮೇಲೆ ಸಾಗಿ ಬಂದನು. ಅವನಿಗೂ ಪೃಥ್ವೀರಾಜನಿಗೂ ಸ್ಥಾನೇಶ್ವರದ ಬಳಿಯ ತರಾ ಯನ ಎಂಬಲ್ಲಿ ಯುದ್ಧವಾಯಿತು. ಮಹಮ್ಮದನು ಪೃಥ್ವೀರಾಜನ ಕೈಗೆ ಸಿಕ್ಕನು. ಆಗ ಮಹಮ್ಮದನು ಕಪ್ಪುಕಾಣಿಕೆಗಳನ್ನು ಕೊಟ್ಟದ್ದರಿಂದ ಪೃಥ್ವೀ ರಾಜನು ಅವನನ್ನು ಬಿಟ್ಟುಬಿಟ್ಟನು!

ಮಹಮ್ಮದನು ಪೃಥ್ವೀರಾಜನ ಸೇಡು ತೀರಿಸುವದಕ್ಕಾಗಿ ಮರು ವರುಷ ಕ್ರಿ. ಶ. ೧೧೯೨ ರಲ್ಲಿ ೨ ನೆಯ ಸರತಿ ಒಳ್ಳೆಯ ಸಿದ್ಧತೆಯೊಂದಿಗೆ ಅವನ ಮೇಲೆ ಏರಿಬಂದನು. ಜಯಚಂದನು ಮಹಮ್ಮದನಿಗೆ ಸಹಾಯಕನಾದನು. ರಜಪೂತರ ಒಡಕಿನ ಲಾಭ ಮಹಮ್ಮದನಿಗೆ ಸಿಕ್ಕಿತು. ಪೃಥ್ವೀರಾಜನು ಸೋತು ಹತನಾದನು. ಹಿಂದುಗಳ ದುರ್ದಶೆಗೆ ಮೊದಲಾಯಿತು. ಮುಸಲ್ಮಾನರ ರಾಜ್ಯವು ಈ ದೇಶದಲ್ಲಿ ಆರಂಭವಾಯಿತು.

ಮಹಮ್ಮದನು ಇಷ್ಟಕ್ಕೆ ಬಿಡದೆ ಕ್ರಿ. ಶ. ೧೧೯೪ ರಲ್ಲಿ ಕನೋಜದ ಮೇಲೆ ದಾಳಿಮಾಡಿ, ಸಹಾಯಮಾಡಿದ್ದ ಜಯಚಂದನನ್ನು ಸೋಲಿಸಿ, ಕನೋಜವನ್ನು ಸುಲಿದು ಹಾಳುಮಾಡಿದನು. ಮುಂದೆ ಮಹಮ್ಮದನು ಗುಜರಾಥ–ರೋಹಿಲಖಂಡಗಳನ್ನು ವಶಪಡಿಸಿಕೊಂಡು ಎಲ್ಲ ಗೆದ್ದ ಸೀಮೆಗಳ ವ್ಯವಸ್ಥೆಯನ್ನು ತನ್ನ ಗುಲಾಮನಾದ ಕುತುಬುದ್ದೀನನಿಗೆ ಒಪ್ಪಿಸಿದನು. ಕುತುಬುದ್ದೀನನಿಂದ ಆರಂಭವಾದ ಮುಸಲ್ಮಾನರ ಅಧಿಕಾರವು ದಿಲ್ಲಿಯಲ್ಲಿ ಮುಂದೆ ಆರುನೂರು ವರ್ಷ ನಡೆಯಿತು. ಕ್ರಿ. ಶ. ೧೨೦೬ ರಲ್ಲಿ ಮಹಮ್ಮದನ ಅಂತವಾಯಿತು.

---

# ೩ ಮಧ್ಯಕಾಲ

## (ಕ್ರಿ. ಶ, ೧೨೦೬—ಕ್ರಿ. ಶ. ೧೮೧೮)

### (ಅ) ಪಠಾಣರಕಾಲ (ಕ್ರಿ. ಶ. ೧೨೦೬—ಕ್ರಿ. ಶ. ೧೫೨೬)

**ಪ್ರ. :—** **ಮುಸಲ್ಮಾನರ ವಿರುದ್ಧ ಹಿಂದುಗಳಿಗೆ ಅಪಜಯವಾಗಲು ಕಾರಣಗಳಾವವು ?**

**ಉ. :—** (೧) ಬೌದ್ಧಧರ್ಮದ ಏಳ್ಗೆಯ ಕಾಲದಿಂದ ಜನತೆಯು ರಾಜಕಾರಣವನ್ನು ದುರ್ಲಕ್ಷಿಸಹತ್ತಿತು. ಇದರಿಂದ ಅರಸರ ಮೇಲಿನ ಬಿಗಿವು ತಪ್ಪಿ ಅನೇಕ ಅಯೋಗ್ಯ ಅರಸರು ರಾಜ್ಯಾಧಿಕಾರವನ್ನು ಪಡೆದರು. (೨) ರಾಜ್ಯಕ್ಕಿಂತ ಅಥವಾ ರಾಷ್ಟ್ರಕ್ಕಿಂತ ರಾಜನ ಮಹತ್ವವೇ ಬೆಳೆದು ರಾಷ್ಟ್ರೀಯ

ಭಾವನೆಯು ಲೋಪವಾಯಿತು. ಸೈನಿಕರು ರಾಜನಿಗಾಗಿ ಯುದ್ಧ ಮಾಡುವವ ರಾದ್ದರಿಂದ ರಾಜನು ಕಾಣದಂತಾಗಲು ರಣದಿಂದ ಕಾಲ್ತೆಗೆಯುತ್ತಿದ್ದರು. (೩) ಅಹಿಂಸೆ, ಸಂನ್ಯಾಸ ಇವುಗಳ ಅತಿರೇಕದಿಂದ ಕ್ಷಾತ್ರವೃತ್ತಿಯು ಕುಂದ ಹತ್ತಿತು. ಪರಚಕ್ರಗಳು ಬಂದಾಗ ಇಂಥವರು ಸಹಜವಾಗಿ ಜಯಿಸಲ್ಪಟ್ಟರು. (೪) ರಾಜಪುತ್ರರಿಗೆ ಇದಿರಾದ ಮುಸಲ್ಮಾನರ ಸ್ವಭಾವಾದಿಗಳು ಚೆನ್ನಾಗಿ ಗೊತ್ತಿರಲಿಲ್ಲ; ಯುದ್ಧಪತಿದ್ಧಯನ್ನು ಸುಧಾರಿಸಲಿಲ್ಲ. ಶಸ್ತ್ರಾಸ್ತ್ರಗಳಲ್ಲಾದ ಸುಧಾರಣೆಯನ್ನು ಮುಂದಾಗಿ ತಿಳಿದುಕೊಳ್ಳದೆ ಶತ್ರುಗಳು ಉಪಯೋಗಿಸುವ ಅಂಥ ಶಸ್ತ್ರಾಸ್ತ್ರಗಳಿಗೆ ತಾವು ಆಹುತಿಯಾದರು. (೫) ದೇಶದ್ರೋಹಿಗಳಾದ ಧೂರ್ತರಲ್ಲದ ಅನೇಕರು ಶತ್ರುಗಳನ್ನು ಕೂಡಿದ್ದರಿಂದ ಅನಾಯಾಸವಾಗಿ ಶತ್ರುಗಳಿಗೆ ಜಯವಾಯಿತು. (೬) ಮುಸಲ್ಮಾನರು ಅನೇಕ ದೇಶಗಳಲ್ಲಿ ಸಂಚರಿಸಿ, ಹೊಸ ಹೊಸ ಯುದ್ಧಪದ್ಧತಿಗಳನ್ನು ಅರಿತು, ಸುಧಾರಿಸಿದ ಶಸ್ತ್ರಾಸ್ತ್ರಗಳನ್ನು ಉಪಯೋಗಿಸುತ್ತಿದ್ದರು.

**ಪ್ರ. :— ಗುಲಾಮಿ ಮನೆತನದ ಸ್ಥಾಪಕನು ಯಾರು ? ಈ ಮನೆತನವು ಎಷ್ಟು ಕಾಲ ಆಳಿತು ? ಈ ಮನೆತನದ ಸುಲ್ತಾನಾ ರೇಜಿಯಳ ಆಳಿಕೆಯನ್ನು ಸ್ವಲ್ಪದರಲ್ಲಿ ವಿವರಿಸಿರಿ.**

**ಉ. :—** ಕುತುಬುದ್ದೀನನು ಈ ಗುಲಾಮಿ ಮನೆತನದ ಸ್ಥಾಪಕನು. ಈ ಮನೆತನವು ಕ್ರಿ. ಶ. ೧೨೦೬—೧೨೮೮ ರ ವರೆಗೆ ೮೨ ವರ್ಷ ಆಳಿತು.

**ಸುಲ್ತಾನಾ ರೇಜಿಯಾ** (ಕ್ರಿ. ಶ. ೧೨೩೬—೧೨೩೯) ಇಲ್ತಮಸನ ತರುವಾಯ ಇವನ ಮಗನಾದ ರುಕ್ನುದ್ದೀನನು ಆಳಹತ್ತಿದನು. ಇವನು ಅಯೋಗ್ಯನಿದ್ದುದರಿಂದ ಇವನ ತಂಗಿ ಸುಲ್ತಾನಾ ರೇಜಿಯಳು ಇವನನ್ನು ತಳ್ಳಿ ತಾನೇ ಪಟ್ಟಕ್ಕೆ ಬಂದಳು. ಇಲ್ತಮಸನು ಆಳುವಾಗ ಪಲವು ಪ್ರಸಂಗ ಗಳಲ್ಲಿ ಈಕೆಯು ತಂದೆಯ ಕಾರಭಾರವನ್ನು ನೋಡುತ್ತಿದ್ದಳು. ಆಗ ಇಲ್ತ ಮಸು—ನನ್ನ ತರುವಾಯ ಈಕೆಯೇ ರಾಜ್ಯಕ್ಕೆ ತಕ್ಕವಳೆಂದು ಹೇಳುವವನು. ವೀರಪುರುಷರಂತೆ ಈಕೆ ಉಡಿಗೆ—ತೊಡಿಗೆಗಳನ್ನು ಧರಿಸುವಳು. ಚಾತುರ್ಯ ದಿಂದ ಕಾರಭಾರವನ್ನು ಸಾಗಿಸಿ ಹಲವು ಸುಧಾರಣೆಗಳನ್ನು ಮಾಡಿದಳು. ಸ್ತ್ರೀಯಳ ಕೈಕೆಳಗೆ ಇರಲೊಪ್ಪದ ತುರ್ಕಿ ಸರದಾರರು ಬಂಡನ್ನೆಬ್ಬಿಸಿದರು. ಈ ಸರದಾರರ ಮುಖ್ಯನಾದ ಅಲ್ತೋನಿಯು ಈಕೆಯನ್ನು ಸೆರೆಯಲ್ಲಿಟ್ಟನು. ರೇಜಿಯಳು ಅಲ್ತೋನಿಯನ್ನು ಮದುವೆಯಾದಳು. ಸರದಾರರು ರೊಚ್ಚಿನಿಂದ

ಇಬ್ಬರನ್ನೂ ಕೊಂದು ಹಾಕಿದರು. ಹೀಗೆ ರೇಜಿಯಳ ಆಳಿಕೆಯು ಕೊನೆಯಾಯಿತು. ಕ್ರಿ. ಶ. ೧೨೯೦.

**ಪ್ರ. :— ಅಲ್ಲಾಉದ್ದೀನ ಖಿಲಜಿಯ ವಿಜಯಗಳ ಬಗೆಗೂ ಅವನ ಆಡಳಿತದ ಬಗೆಗೂ ವಿವರಗಳನ್ನು ಕೊಡಿರಿ.**

**ಉ. :—** ಅಲ್ಲಾಉದ್ದೀನ ಖಿಲಜಿಯು ಕ್ರಿ. ಶ. ೧೨೯೬ ರಿಂದ ೧೩೧೬ ರ ವರೆಗೆ ಆಳಿದನು. ಇವನು ಖಿಲಜಿ ಮನೆತನದಲ್ಲಿ ಬಹಳ ಪ್ರಸಿದ್ಧನಾಗಿದ್ದನು. ಕಕ್ಕನಾದ ಜಲಾಲುದ್ದೀನನು ಆಳುತ್ತಿರುವಾಗಲೆ ವಿಂಧ್ಯಾದ್ರಿಯನ್ನು ದಾಟಿ ದೇವಗಿರಿಯ ಮೇಲೆ ನಾಗಿ ರಾಮದೇವರಾಯನನ್ನು ನೋಲಿಸಿದನು. ಆಗ ರಾಮದೇವರಾಯನು ಯಲಿಚಪುರ ಕೋಟೆಯನ್ನು ಬಿಟ್ಟುಕೊಟ್ಟದ್ದಲ್ಲದೆ ಪ್ರತಿವರ್ಷ ಕಪ್ಪನ್ನು ಕೊಡಲೊಪ್ಪಿದನು. ಬಳಿಕ ಅಲ್ಲಾಉದ್ದೀನನು ದಿಲ್ಲಿಗೆ ಬಂದು ಸರದಾರರನ್ನು ತನ್ನ ಕಡೆಗೆ ಮಾಡಿಕೊಂಡು ಕಕ್ಕನನು ಕೊಲ್ಲಿಸಿ ಪಟ್ಟಕ್ಕೆ ಬಂದನು. ಮರುವರುಷ ಕ್ರಿ. ಶ. ೧೨೯೭ ರಲ್ಲಿ ಮೊಗಲರ ಮೊದಲನೆಯ ದಾಳಿಯನ್ನು ತಡೆದು ಅವರನ್ನು ಹಿಂದಕ್ಕಟ್ಟಿದನು. ಅಲ್ಲಿಂದ ಮರಳಿ ಗುಜರಾಥದ ಮೇಲೆ ನಾಗಿ ಅದನ್ನು ವಶಪಡಿಸಿಕೊಂಡನು. ಹೀಗೆ ಒಂದೇ ಸವನೆ ವಿಜಯಗಳುಂಟಾಗಲು ಅವನಲ್ಲಿ ಗರ್ವವು ಹೆಚ್ಚಾಯಿತು. ಅವನು ಒಮ್ಮೆ ತಾನು ಪೈಗಂಬರನಾಗಿ ಹೊಸಧರ್ಮವನ್ನು ಸ್ಥಾಪಿಸಬೇಕೆಂದು ಆಶಿಸಿದನು! ಮತ್ತೊಮ್ಮೆ ೨ ನೆಯ ಅಲೆಕ್ಝಾಂಡರನೆನಿಸಿ ಜಗತ್ತನ್ನೇ ಗೆಲ್ಲುವ ಆಲೋಚನೆ ಮಾಡಿದನು!! ನಾಣ್ಯಗಳ ಮೇಲೆ ತನ್ನ ಹೆಸರಿನ ಮುಂದೆ ೨ ನೆಯ ಅಲೆಕ್ಝಾಂಡರನೆಂದು ಬಿರುದನ್ನು ಹಾಕಿಸಿಬಿಟ್ಟನು!!! ಈ ವಿಚಾರಗಳನ್ನು ತಿಳಿದ ಧೀರನೊಬ್ಬನು "ಧರ್ಮವನ್ನು ಸ್ಥಾಪಿಸುವದು ನಿನ್ನ ಕೆಲಸವಲ್ಲ, ಜಗತ್ತನ್ನು ಗೆಲ್ಲುವವನು ಸಮೀಪದಲ್ಲಿದ್ದ ರಾಜಪುತ್ರರನ್ನು ಬಿಗುವಿನಲ್ಲಿಡಬಾರದೇ?" ಎಂದು ಹೇಳಿದನು. ಆಗ ಅಲ್ಲಾಉದ್ದೀನನು ಸಿಟ್ಟಾಗದೆ ಅವನನ್ನು ಮನ್ನಿಸಿದನು. ಕ್ರಿ. ಶ. ೧೩೦೩ ರಲ್ಲಿ ರಾಜಪುತ್ರರ ಕಡೆಗೆ ತಿರುಗಿದನು. ಚಿತ್ತೂರ ರಾಜ್ಯವು ಮುಖ್ಯವಿದ್ದದರಿಂದ ಅವನು ಚಿತ್ತೂರ ಮೇಲೆ ನಾಗಿದನು. ಲಕ್ಷ್ಮಣಸಿಂಗನು ಆಗ ಅಲ್ಲಿ ಆಳುತ್ತಿದ್ದನು. ಅಲ್ಲಾಉದ್ದೀನನು ಲಕ್ಷ್ಮಣಸಿಂಗನ ಕಕ್ಕನಾದ ಭೀಮಸಿಂಗನನ್ನು ಯುಕ್ತಿಯಿಂದ ಸೆರೆಹಿಡಿದು ಹೆಂಡತಿಯಾದ ಪದ್ಮಿನಿಯನ್ನು ಒಪ್ಪಿಸದಿದ್ದರೆ ನಿನ್ನನ್ನು ಬಿಡುವದಿಲ್ಲೆಂದನು. ಈ ಸುದ್ದಿಯನ್ನು ಕೇಳಿ ಪದ್ಮಿನಿಯು "ಪರಿವಾರಸಹಿತ

ಪಾಳಯಕ್ಕೆ ಬರುವೆನು" ಎಂದು ಅಲ್ಲಾಉದ್ದೀನನಿಗೆ ಹೇಳಿ ಕಳುಹಿದಳು. ಬಳಿಕ, ಒಳಗೆ ಶಸ್ತ್ರಾಸ್ತ್ರಗಳಿಂದ ಸಜ್ಜಾಗಿದ್ದ ವೀರರುಳ್ಳ ಬುರುಕೆಹಾಕಿದ ಮೇಣೆಗಳನ್ನು ತನ್ನ ಪರಿವಾರದ ಮೇಣೆಗಳೆಂದು ಹೇಳಿ ಅವನ್ನು ಅಲ್ಲಾ ಉದ್ದೀನನ ಪಾಳಯಕ್ಕೆ ಕಳುಹಿದಳು. ಅಲ್ಲಿ ಹೊತ್ತುಸಾಧಿಸಿ ವೀರರು ಹೊರ ಬಿದ್ದು ಒಮ್ಮೆಲೆ ಕೋಲಾಹಲವನ್ನೆಬ್ಬಿಸಿದರು. ಮತ್ತು ಭೀಮಸಿಂಗನನ್ನು ಸುರಕ್ಷಿತವಾಗಿ ದಾಟಿಸಿದರು. ಅಲ್ಲಾಉದ್ದೀನನು ಪಾರಾಗಿ ದಿಲ್ಲಿಗೆ ಓಡಿ ಹೋಗಿ ಮರುವರುಷ ಹೆಚ್ಚು ಸನ್ನಾಹದೊಂದಿಗೆ ಚಿತ್ತೂರನ್ನು ಮುತ್ತಿದನು. ಚಿತ್ತೂರು ಕೈಬಿಡುವ ಪ್ರಸಂಗ ಬರಲು ರಾಜಪುತ್ರ ಸ್ತ್ರೀಯರೆಲ್ಲ ಜೋಹರ ಮಾಡಿದರು. ವೀರರು ಕಾದುತ್ತ ಮಡಿದರು. ಕ್ರಿ. ಶ. ೧೩೦೩ ರಲ್ಲಿ ಚಿತ್ತೂರು ದಿಲ್ಲಿಯ ರಾಜ್ಯದಲ್ಲಿ ಕೂಡಿತು. ಆದರೆ ಮುಂದೆ ಕ್ರಿ. ಶ. ೧೩೧೩ ರಲ್ಲಿ ಎಂದರೆ ಅಲ್ಲಾಉದ್ದೀನನಿರುವಾಗಲೆ ಹಮೀರನೆಂಬ ವೀರನಿಂದ ಚಿತ್ತೂರಿಗೆ ಮರಳಿ ಸ್ವಾತಂತ್ರ್ಯವು ದೊರೆಯಿತು.

ಆಗಾಗ್ಗೆ ದಾಳಿಮಾಡುವ ಮೊಗಲರನ್ನು ತಡೆಯುವದಕ್ಕಾಗಿ ಅಲ್ಲಾ ಉದ್ದೀನನು ದೀಪಾಲಪುರದ ಕೋಟೆಯನ್ನು ಬಲಪಡಿಸಿ ಅಲ್ಲಿ ಉತ್ತಮವಾದ ಸೈನ್ಯವನ್ನಿಟ್ಟನು. ಕ್ರಿ. ಶ. ೧೩೦೪ ರಲ್ಲಿ ಮೊಗಲರು ಮೂರನೆಯ ದಾಳಿ ಮಾಡಿದಾಗ ಇವನು ಅವರನ್ನು ಹಿಂದಕ್ಕೆ ಅಟ್ಟಿದನು.

**ದಕ್ಷಿಣಹಿಂದುಸ್ಥಾನದ ವಿಜಯುಗಳು**— ಮೊದಲು ಹಿಂದು ಆಗಿದ್ದ ಮಲಿಕಕಾಫರನು ಗುಜರಾಥದ ದಾಳಿಯಲ್ಲಿ ಅಲ್ಲಾಉದ್ದೀನನ ಕೈಸೆರೆ ಯಾದನು. ಇವನ ಪ್ರಾಮಾಣಿಕತನವನ್ನೂ ಪರಾಕ್ರಮವನ್ನೂ ಕಂಡು ಅಲ್ಲಾ ಉದ್ದೀನನು ಇವನನ್ನು ಸೇನಾಪತಿಯನ್ನಾಗಿ ಮಾಡಿದನು. ಮಲಿಕಕಾಫರನು ಕ್ರಿ. ಶ. ೧೩೦೭ ರಲ್ಲಿ ದೇವಗಿರಿಯನ್ನು ಮುತ್ತಿ ರಾಮದೇವನನ್ನು ಸೆರೆಹಿಡಿದು ದಿಲ್ಲಿಗೆ ಕಳುಹಿದನು. ರಾಮದೇವನು ಮಾಂಡಲಿಕನಾಗಿರಲೊಪ್ಪಲು ಅವನನ್ನು ಮರ್ಯಾದೆಯಿಂದ ದೇವಗಿರಿಗೆ ಕಳುಹಿದನು. ಮುಂದೆ ರಾಮದೇವನ ಮಗ ಶಂಕರದೇವನು ಸ್ವತಂತ್ರನಾದದರಿಂದ ಮಲಿಕಕಾಫರನು ಎರಡನೆಯ ಸರತಿ ದೇವಗಿರಿಯನ್ನು ಮುತ್ತಿ ಶಂಕರದೇವನನ್ನು ಅತಿ ಕ್ರೂರತನದಿಂದ ಕೊಲ್ಲಿಸಿ ದನು. ಮಲಿಕಕಾಫರನು ಒರಂಗಲ್ಲು, ದ್ವಾರಸಮುದ್ರಗಳನ್ನು ವಶಮಾಡಿ ಕೊಂಡು ಕನ್ಯಾಕುಮಾರಿಯ ತನಕ ಸಾಗಿ ಅಲ್ಲಲ್ಲಿ ತನ್ನ ಅಧಿಕಾರಿಗಳನ್ನು ನಿಯಮಿಸಿ ಹೇರಳ ಸಂಪತ್ತನ್ನು ತಕ್ಕೊಂಡು ದಿಲ್ಲಿಯ ಕಡೆಗೆ ತಿರುಗಿದನು.

ಅಲ್ಲಾಉದ್ದೀನನಿಗೆ ಹಿಂದುಸ್ಥಾನದಲ್ಲಿ ಇದಿರಾಗಿ ನಿಲ್ಲುವವರು ಯಾರೂ ಉಳಿಯಲಿಲ್ಲ. ಇವನ ಸಾಮ್ರಾಜ್ಯವು ಬಹಳ ವಿಸ್ತಾರವನ್ನು ಹೊಂದಿತು. ಇಷ್ಟು ದೊಡ್ಡ ರಾಜ್ಯವನ್ನು ಹೆಸರಾದ ಮೊಗಲ ಬಾದಶಹನು ಕೂಡ ಆಳಲಿಲ್ಲ. ಸೈನಿಕರನ್ನು ಸಂತೋಷಪಡಿಸುವದಕ್ಕಾಗಿ ನಿಯಮಿತ ಸಂಬಳವನ್ನು ಗೊತ್ತು ಮಾಡಿದ್ದನು ಅವರಿಗೆ ಕಾಳು-ಕಡಿಗಳು ಅಗ್ಗ ದೊರೆ ಯುವಂತೆ ವ್ಯವಸ್ಥೆಯನ್ನಿಟ್ಟಿದ್ದನು. ಗುಪ್ತಚಾರರಿಂದ ಎಲ್ಲ ಕಡೆಯ ಸುದ್ದಿ ಯನ್ನು ತಿಳಿದುಕೊಂಡು ಕೂಡಲೆ ತಕ್ಕ ವ್ಯವಸ್ಥೆಯನ್ನಿಡುತ್ತಿದ್ದನು. ಹಿಂದು ಗಳನ್ನು ಅತಿ ಬಲಾತ್ಕಾರದಿಂದ ನಡೆಯಿಸಿಕೊಳ್ಳುತ್ತಿದ್ದನು. ಅವರನ್ನು ಆರ್ಥಿಕ ತೊಂದರೆಯೊಳಗಿರಿಸುವದೇ ಅವನ ಧೋರಣೆಯಾಗಿದ್ದಿತು. ಇವನು ಶೂರನೂ ಕರ್ತೃತ್ವಶಾಲಿಯೂ ಆಗಿದ್ದಂತೆ ಕ್ರೂರನೂ ಸಂತಾಪಿಯೂ ಕಾಮಾಂಧನೂ ಪರಧರ್ಮ ದ್ವೇಷಿಯೂ ಆಗಿದ್ದನು. ಇವನ ತರುವಾಯ ಇವನ ಸಾಮ್ರಾಜ್ಯವು ತಡವಿಲ್ಲದೆ ಹಾಳಾದುದಕ್ಕೆ ಇವನ ದುರ್ಗುಣ ಗಳಿಂದುಂಟಾದ ಪ್ರಜಾಕ್ಷೋಭವೇ ಕಾರಣವಾಯಿತು.

**ಪ್ರ. :— ತಘಲಖ ಮನೆತನದ ಸ್ಥಾಪಕನು ಯಾರು ? ಇವನು ರಾಜ್ಯವನ್ನು ಹೇಗೆ ಪಡೆದನು ? ಈ ಮನೆತನದಲ್ಲಿ ಹೆಸರಾದ ಅರಸನು ಯಾವನು ? ಅವನ ಆಳಿಕೆಯ ಬಗೆಗೆ ವಿವರಣೆ ಕೊಡಿರಿ.**

**ಉ. :—** ಮೊದಲು ಪಂಜಾಬದ ಸುಭೇದಾರನಾಗಿದ್ದ ಗಯಾಸುದ್ದೀನ ತಘಲಖನು ಖಿಲಜಿ ಮನೆತನವನ್ನು ನಿರ್ಮೂಲಗೊಳಿಸಿದ್ದ ಖುಸುರುಖಾನ ನನ್ನು ಕೊಂದು ಸರದಾರರ ಬೆಂಬಲದಿಂದ ದಿಲ್ಲಿಯ ಪಟ್ಟಕ್ಕೆ ಬಂದನು. ಇವನೇ ತಘಲಖ ಮನೆತನದ ಸ್ಥಾಪಕನು.

ತಘಲಖ ಮನೆತನದಲ್ಲಿ ಫಿರೋಜಶಹ ತಘಲಖನು ಹೆಸರಾದ ಅರಸನು.

ಫಿರೋಜಶಹ ತಘಲಖನ ಆಳಿಕೆ— ( ಕ್ರಿ. ಶ. ೧೩೫೧—೧೩೮೮ ) ಮುಹಮ್ಮದ ತಘಲಖನ ತರುವಾಯ ಅವನ ಕಕ್ಕನ ಮಗನಾದ ಫಿರೋಜನು ಸರದಾರರ ಸಮ್ಮತಿಯಿಂದ ಪಟ್ಟಕ್ಕೆ ಬಂದನು. ಮುಹಮ್ಮದ ತಘಲಖನಿಂದ ನಷ್ಟಹೊಂದಿದವರನ್ನು ಕರೆಯಿಸಿ ಅವರ ಹಾನಿಯನ್ನು ತುಂಬಿಕೊಟ್ಟನು. ಬಡ ರೈತರ ಸಾಲದ ಕತಬಿಗಳನ್ನು ಹರಿದು ಕೊಟ್ಟನು. ಕೈಬಿಟ್ಟ ಪ್ರಾಂತ ಗಳನ್ನು ಗಳಿಸುವದಕ್ಕಿಂತ ಇದ್ದ ಪ್ರಾಂತಗಳನ್ನು ಚೆನ್ನಾಗಿ ಇಟ್ಟುಕೊಳ್ಳುವದು ಹಿತಕರವೆಂದೆಣಿಸಿ ವಾಯುವ್ಯಸೀಮೆ, ಬಹಮನೀರಾಜ್ಯ ಇವುಗಳ ಸ್ವಾತಂತ್ರ್ಯ

ವನ್ನು ಒಪ್ಪಿಕೊಂಡನು. ಸಿಂಧ–ಬಂಗಾಲಗಳ ಸುಭೆದಾರರೊಂದಿಗೆ ಒಪ್ಪಂದ ಮಾಡಿಕೊಂಡನು. ಅವರು ಮಾಂಡಲಿಕರಾದರು. ಇವನು ೧೮೦೦೦೦ ಗುಲಾಮರನ್ನು ಸಾಕಿದ್ದನು.

**ಫಿರೋಜಶಹನ ಸುಧಾರಣೆಗಳು** — ಬೀಳು ಭೂಮಿಗಳನ್ನು ಸಾಗು ಮಾಡಿಸಿ ಯಮುನಾ ಮತ್ತು ಸತಲಜ ನದಿಗಳಿಗೆ ಕಾಲುವೆಗಳನ್ನು ಮಾಡಿಸಿ ದನು. ಕೋಟೆ, ವಾಠಶಾಲೆ, ಔಷಧಾಲಯುಗಳನ್ನು ಕಟ್ಟಿಸಿದನು. ಉಪ್ಪು, ಕಾಯಿಪಲ್ಲೆ, ಹುಲ್ಲುಬನ್ನಿ ಇವುಗಳ ಮೇಲಿನ ಕರವನ್ನು ತೆಗೆದುಬಿಟ್ಟನು. ಹಿಂದುಗಳನ್ನು ಮಾತ್ರ ವಕ್ರದೃಷ್ಟಿಯಿಂದ ನೋಡುವ ಧೋರಣೆಯನ್ನು ಇವನು ಬಿಟ್ಟಿರಲಿಲ್ಲ!

**ಪ್ರ. :— ತೈಮೂರನು ಮಾಡಿದ ದಾಳಿಯ ಬಗೆಗೆ ವಿವರಣೆ ಕೊಡಿರಿ. ಚಂಗೀಜಖಾನನು ಯಾರು? ಅವನ ಬಗೆಗೆ ಟಿಪ್ಪಣಿ ಬರೆಯಿರಿ.**

**ಉ. :— ತೈಮೂರನ ದಾಳಿ** (ಕ್ರಿ. ಶ. ೧೩೯೮)–ಮನುಷ್ಯಜಾತಿಯ ಶತ್ರುಗಳೆನಿಸಿದ ಕ್ರೂರರಲ್ಲಿ ಇವನೊಬ್ಬನು. ಇವನು ೧೩೩೬ ರಲ್ಲಿ ಹುಟ್ಟಿ ೧೭ ವರ್ಷದವನಿರುವಾಗಲೆ ಯುದ್ಧವಾಡಹತ್ತಿದನು. ಯುದ್ಧದಲ್ಲಿ ಗಾಯವಾಗಿ ಇವನ ಕಾಲು ಕುಂಟು ಆಗಿದ್ದಿತು. ಕ್ರಿ. ಶ. ೧೩೬೯ ರಲ್ಲಿ ಸಮರ್ಕಂದದ ಅರಸನಾಗಿ ಬಳಿಕ ತುರ್ಕಸ್ತಾನದಿಂದ ಅಫಗಾಣಿಸ್ತಾನದ ವರೆಗೆ ಪ್ರದೇಶವನ್ನು ಗೆದ್ದ ಬಳಿಕ ಹಿಂದುಸ್ತಾನದ ಮೇಲೆ ದಾಳಿ ಮಾಡಿದನು ಇವನು ಬಿರುಗಾಳಿ ಯಂತೆ ದೇಶವನ್ನು ಹೊಕ್ಕು ಕೊಲೆ–ಸುಲಿಗೆ ಮಾಡುತ್ತ ಪಟ್ಟಣಗಳನ್ನು ಸುಡುತ್ತ ದಿಲ್ಲಿಗೆ ಸಮೀಪವಾಗಿ ೯೦ ಸಾವಿರ ಸೈನ್ಯದೊಂದಿಗೆ ತಳವೂರಿದನು. ಇದಿರಾದ ದಿಲ್ಲಿಯ ಸೈನ್ಯವನ್ನು ಸೋಲಿಸಿ ದಿಲ್ಲಿಯನ್ನು ಸೇರಿ ಘೋರವಾದ ಕೊಲೆಯನ್ನು ಮಾಡಿ ಅಪಾರವಾದ ಸಂಪತ್ತನ್ನು ಸುಲಕೊಂಡನು. ಅಲ್ಲಿಂದ ಮಿರತ, ಹರಿದ್ವಾರ, ನಾಗರಕೋಟ, ಜಮ್ಮು ಇವುಗಳ ಮಾರ್ಗವಾಗಿ ತಿರುಗಿ ಹೊರಟನು. ಸೆರೆಯಾಳುಗಳ ಸಂಖ್ಯೆಯು ಹೆಚ್ಚಾಗಲು ೧೫ ವರ್ಷಗಳ ಮೇಲಿನವರನ್ನು ಕೊಲ್ಲಿಸಿದನು. ಈ ಹೊತ್ತಿಗೆ ಸಮರ್ಕಂದದ ಕಡೆಗೆ ಗೊಂದಲ ವೆದ್ದ ಸುದ್ದಿ ಬಂದದರಿಂದ ಸಯ್ಯದ ಖಿಜರಖಾನನ್ನು ಪಂಜಾಬಕ್ಕೆ ಸುಭೇ ದಾರನನ್ನಾಗಿ ಮಾಡಿ ಅತ್ತ ಸಾಗಿ ಹೋದನು.

**ಚೆಂಗೀಝುಖಾನ**— ಇಲ್ತಮಶಹನು ಆಳುತ್ತಿರುವಾಗ ಅತ್ತ ಮಧ್ಯ ಏಶಿಯದಲ್ಲಿ ಚೆಂಗೀಝುಖಾನನೆಂಬೊಬ್ಬ ಶೂರನು ಹೆಸರಾಗಿದ್ದನು. ಅವನು

ಮೋಂಗಲರೆಂಬ ಕ್ರೂರ ಜನಾಂಗದವನು. ಕಪ್ಪುಸಮುದ್ರದಿಂದ ಚೀನದ ವರೆಗೆ ಪ್ರದೇಶವನ್ನು ವಶಪಡಿಸಿಕೊಂಡದ್ದಲ್ಲದೆ ಗಿಝನಿಗೂ ಒಡೆಯನಾಗಿದ್ದನು. ಹಿಂದುಸ್ಥಾನದ ಮೇಲೂ ಅವನ ದಾಳಿಯಾಗುವ ಸಂಭವವಿದ್ದಿತು. ಇಲ್ತಮಿಷನು ಯುಕ್ತಿಯಿಂದ ಇವನನ್ನು ಹಿಂದಿರುಗಿಸಿದನು. ಚಂಗೀಝಖಾನನು ಅತಿ ಕ್ರೂರನಾಗಿದ್ದು ಇಪತ್ತು ವರ್ಷಗಳಲ್ಲಿ ೧ ಕೋಟಿ ೪೦ ಲಕ್ಷ ಜನರನ್ನು ಸಂಹರಿಸಿದನೆಂದು ಹೇಳುವರು. ಧರ್ಮ-ವಿದ್ಯೆಗಳನ್ನು ದ್ವೇಷಿಸುತ್ತಿದ್ದನು. ಕ್ರಿಸ್ತಿ ಮತ್ತು ಮುಸಲ್ಮಾನೀ ಧರ್ಮಗ್ರಂಥಗಳ ಅವಮಾನಗೊಳಿಸಿದನು. ಈ ನರರಾಕ್ಷಸನು ಕ್ರಿ. ಶ. ೧೨೨೭ ರಲ್ಲಿ ಮರಣ ಹೊಂದಿದನು.

**ಪ್ರ. :— ಬಹಮನಿ ರಾಜ್ಯದ ಸ್ಥಾಪಕನು ಯಾರು ? ಆ ರಾಜ್ಯವು ಎಂದು ಮತ್ತು ಹೇಗೆ ಉಂಟಾಯಿತು ? ಆ ರಾಜ್ಯವು ಮುರಿದು ಉಂಟಾದ ರಾಜ್ಯಗಳೆಷ್ಟು? ಅವು ಯಾವವು ? ಅವುಗಳ ರಾಜಧಾನಿಗಳಾವವು ?**

**ಉ. :—** ಮಹುಮ್ಮದ ತಘಲಖನು ದೌಲತಾಬಾದದಿಂದ ದಿಲ್ಲಿಗೆ ಹೊರಡುವಾಗ ಹಸನ ಉರ್ಫ ಜಾಫರಖಾನನನ್ನು ದಕ್ಷಿಣದ ಅಧಿಕಾರಿಯನ್ನು ಮಾಡಿದ್ದನು. ಮುಂದೆ ಇವನು ಕ್ರಿ. ಶ. ೧೩೪೭ ರಲ್ಲಿ ಸ್ವತಂತ್ರನಾಗಿ ಕಲಬುರ್ಗೆಯಲ್ಲಿ ಆಳಹತ್ತಿದನು. ಇವನೇ ಬಹಮನೀ ರಾಜ್ಯದ ಸ್ಥಾಪಕನು.

ಬಹಮನೀ ರಾಜ್ಯವು ಕ್ರಿ. ಶ. ೧೫೨೬ ರ ವರೆಗೆ ನಡೆದು ಮುಳುಗಿತು. ಈ ರಾಜ್ಯವು ಇಮಾದಶಾಹಿ, ನಿಜಾಮಶಾಹಿ, ಕುತುಬಶಾಹಿ, ಬರೀದಶಾಹಿ, ಆದಿಲಶಾಹಿ ಎಂಬ ಐದು ರಾಜ್ಯಗಳಲ್ಲಿ ಹಂಚಿಹೋಯಿತು.

ಈ ಐದು ರಾಜ್ಯಗಳ ರಾಜಧಾನಿಗಳು ಅನುಕ್ರಮವಾಗಿ ಎಲಿಚಪುರ, ಅಹಮ್ಮದನಗರ, ಗೋವಳಕೊಂಡ, ಬೀದರ, ವಿಜಯಪುರ ಎಂಬವುಗಳಾಗಿದ್ದವು.

**ಪ್ರ. :— ವಿಜಯನಗರದ ಸಾಮ್ರಾಜ್ಯ ಸ್ಥಾಪನೆಯ ಕಾಲದ ಪರಿಸ್ಥಿತಿ ಹೇಗೆ ಇದ್ದಿತು ? ಅದರ ಸ್ಥಾಪನೆಗೆ ಯಾರು ಯಾರು ಹೆಚ್ಚು ಪ್ರಯತ್ನಿಸಿದರು ? ಈ ಸಾಮ್ರಾಜ್ಯದ ವೈಭವವು ಯಾರ ಕಾಲದಲ್ಲಿ ಶಿಖರಕ್ಕೇರಿದ್ದಿತು ? ಹೇಗೆ ?**

**ಉ. :— ವಿಜಯನಗರದ ಸ್ಥಾಪನೆಯ ಮೊದಲಿನ ಸ್ಥಿತಿ—** ಖಿಲಜಿ ಅಲ್ಲಾಉದ್ದೀನನ ಸೇನಾಪತಿಯಾದ ಮಲಿಕಕಾಫರನು ದಕ್ಷಿಣವನ್ನು ಹೊಕ್ಕು ಕ್ರಿ. ಶ. ೧೩೦೬ ರಿಂದ ೧೩೧೦ ರ ವರೆಗೆ ದೇವಗಿರಿ, ಒರಂಗಲ್ಲು, ದ್ವಾರಸಮುದ್ರ ಇವುಗಳನ್ನು ವಶಪಡಿಸಿಕೊಂಡು, ಹಿಂದುಗಳನ್ನು ಹಿಂಸಿಸಿ,

ಕ್ರೂರತನದಿಂದ ಕೊಲೆ-ಸುಲಿಗೆಗಳನ್ನು ಮಾಡಿ, ಹೇರಳ ಸಂಪತ್ತನ್ನು ಸೆಳೆದೊಯ್ದನು. ಹಿಂದಿನ ಅರಸರು ಇದಿರಾಗಿ ನಿಂತವರೊಡನೆ ಯುದ್ಧ ಮಾಡುತ್ತಿದ್ದರೇ ಹೊರತು ಸಾಮಾನ್ಯ ಪ್ರಜೆಗಳ ಗೊಡವೆಗೆ ಹೋಗುತ್ತಿರಲಿಲ್ಲ. ಬಲಾತ್ಕಾರ-ಧರ್ಮಹಿಂಸೆಗಳನ್ನಂತು ಇವರೆಂದೂ ಕಂಡಿರಲಿಲ್ಲ. ಇದೇ ಇಂಥ ಮೊದಲನೆಯ ಪ್ರಸಂಗವು.

ಕಾಫೂರನ ಈ ಭೀಕರ ಆಘಾತದಿಂದ ದಕ್ಷಿಣವು ಹೌಹಾರಿತು. ಜನರು ಉಪಾಯವನ್ನು ಚಿಂತಿಸತೊಡಗಿದ್ದರು.

ವಿಜಯನಗರದ ಸಾಮ್ರಾಜ್ಯಸ್ಥಾಪನೆಗಾಗಿ ಹುಕ್ಕ (ಹರಿಹರ), ಬುಕ್ಕ ಎಂಬ ಇಬ್ಬರು ವೀರರೂ ವಿದ್ಯಾರಣ್ಯರೂ ಮುಖ್ಯವಾಗಿ ಪ್ರಯತ್ನಿಸಿದರು.

ಕ್ರಿ. ಶ. ೧೪೧೯—೧೪೪೬ ರ ವರೆಗೆ ಆಳಿದ ಪ್ರೌಢದೇವರಾಯನ ಕಾಲದಲ್ಲಿ ವಿಜಯನಗರದ ಸಾಮ್ರಾಜ್ಯವು ವೈಭವಶಿಖರವನ್ನು ನಿಲುಕಿದ್ದಿತು. ಇವನು ತುರ್ಕೀ ವೀರರನ್ನು ತನ್ನಲ್ಲಿಟ್ಟು ಅವರಿಂದ ತನ್ನ ಸೈನಿಕರಿಗೆ ಯುದ್ಧ ಕಲೆಯ ಶಿಕ್ಷಣವನ್ನು ಕೊಟ್ಟಿದ್ದನು. ಇವನು ಶೂರನೂ ಚತುರನೂ ಸಮ ದೃಷ್ಟಿಯವನೂ ವಿದ್ಯೆಯ ಅಭಿಮಾನಿಯೂ ಆಗಿದ್ದನು. ವ್ಯಾಪಾರ-ಉದ್ಯೋಗಗಳು ಊರ್ಜಿತಾವಸ್ಥೆಯಲ್ಲಿದ್ದವು. ವಿದ್ಯೆ-ಕಲೆಗಳಿಗೆ ವಿಜಯನಗರವು ತೌರಮನೆಯಾಗಿದ್ದಿತು

ನಿಕೋಲೋ ಕೌಂಟಿಯು—" ವಿಜಯನಗರದ ಸುತ್ತಳತೆ ೬೦ ಮೈಲು ಅದೆ. ಕೋಟೆಯ ಗೋಡೆಗಳು ಬಹಳ ಭದ್ರವಾಗಿವೆ. ರಾಯನಂಥ ಪ್ರತಾಪ ಶಾಲಿಯು ಬೇರೆ ಯಾವನೂ ಇರಲಿಲ್ಲ. ಇಲ್ಲಿ ಜಾತ್ರೆ-ಸಮಾರಂಭಗಳು ಬಹಳ ಸಡಗರದಿಂದ ಜರುಗುತ್ತಿರುವವು " ಅಂದಿರುವನು.

ಮತ್ತು ಅಬ್ದುಲ್ ರಜಾಕನು—" ಈ ರಾಯನ ವಶದಲ್ಲಿ ಮೂರು ನೂರು ಬಂದರಗಳಿರುವವು. ಹನ್ನೊಂದುಲಕ್ಷ ಸೈನಿಕರಿರುವರು. ವಿಜಯ ನಗರವನ್ನು ಹೋಲುವ ನಗರವು ಜಗತ್ತಿನಲ್ಲಿರುವದಿಲ್ಲ! ಈ ಪಟ್ಟಣಕ್ಕೆ ಏಳು ಸುತ್ತಿನ ಬಲವಾದ ಕೋಟೆಯುದೆ. ಪೇಟೆಯ ಬೀದಿಗಳು ಅಗಲಾಗಿಯೂ ಉದ್ದವಾಗಿಯೂ ಅವೆ. ನೋಡಿದತ್ತೆಲ್ಲ ಗುಲಾಬಿಯ ಹೂವುಗಳೇ ಕಾಣುವವು. ಮುತ್ತು ರತ್ನಗಳ ವ್ಯಾಪಾರವು ದಿನಾಲು ಬೈಲಂಗಡಿಗಳಲ್ಲಿಯೇ ನಡೆಯುತ್ತಿರುವದು. ಬೆಳ್ಳಿ-ಬಂಗಾರಗಳಿಂದ ತುಂಬಿದ ನೆಲಮನೆಗಳೆಷ್ಟೋ ಅವೆ. ಅರಮನೆ, ಟಂಕಸಾಲೆ ಮುಂತಾದವುಗಳ ಕಾವಲಿಗಾಗಿ ಹನ್ನೆರಡು ಸಾವಿರ ಕಟ್ಟಾಳು

ಗಳು ಸಜ್ಜಾಗಿರುವರು. ಈ ಪಟ್ಟಣದ ಜನಸಂಖ್ಯೆಯು ಅಪರಿಮಿತವಾಗಿರುವದು." ಎಂದು ಬರೆದಿರುವನು.

**ಪ್ರ. :— ಪಾನಿಪತ್ತದ ಮೊದಲನೆಯ ಯುದ್ಧದಲ್ಲಿ ಮೊಗಲರಿಗೆ ಜಯವಾಗಲು ಕಾರಣಗಳಾವವು.**

**ಉ. :—** ಬಾಬರನು ಬಹುದಿನಗಳಿಂದ ಅನೇಕ ಯುದ್ಧಗಳನ್ನಾಡಿ ಅನುಭವವನ್ನೂ ಗಟ್ಟಿಗತನವನ್ನೂ ಪಡೆದಿದ್ದನು. ಅವನ ಸೈನ್ಯದ ರಚನೆಯೂ ವ್ಯವಸ್ಥೆಯೂ ಯುದ್ಧಪದ್ಧತಿಯೂ ಉತ್ತಮವಾಗಿದ್ದವು. ಅಜಸ್ರವಾದ ತೋಫುಗಳು ಅವನಲ್ಲಿದ್ದವು. ಇಬ್ರಾಹಿಮನ ಸೈನ್ಯದಲ್ಲಿ ಈ ಸುಧಾರಣೆಗಳು ಆಗಿರಲಿಲ್ಲ. ಇಬ್ರಾಹಿಮನು ಶೌರ್ಯದಿಂದ ಕಾದಿದನು. ಆದರೂ ಬಾಬರನು ಸಣ್ಣ ಸೈನ್ಯದಿಂದಲೇ ಇಬ್ರಾಹಿಮನ ದೊಡ್ಡ ಸೈನ್ಯವನ್ನು ಸೋಲಿಸಿದನು.

**ಪ್ರ. :— ಹದಿನಾರನೆಯ ಶತಕದ ಆರಂಭದ ಕಾಲವು ಜಗತ್ತಿನ ಮಹತ್ವದ ಕ್ರಾಂತಿಕಾಲವೆಂದು ತಿಳಿಯುವರು. ಅದು ಹೇಗೆ?**

**ಉ. :—** ಹಿಂದುಸ್ಥಾನದಲ್ಲಿ ಪಠಾಣ ಸಾಮ್ರಾಜ್ಯವು-ಅಳಿದು ಮೊಗಲ ಸಾಮ್ರಾಜ್ಯವು ಆರಂಭವಾಯಿತು. ಇದೇ ಕಾಲಕ್ಕೆ ಭೂಮಿಯು ಗೋಲರೂಪವಾಗಿದೆಯೆಂದು ಶೋಧವಾಯಿತು. ಯುರೋಪದವರಿಗೆ ಅಮೇರಿಕೆಯು ಹೊಸ ಪ್ರದೇಶವು ಗೊತ್ತಾಯಿತು. ಯುರೋಪದಲ್ಲಿಯ ಜನರು ರಾಷ್ಟ್ರಾಭಿಮಾನ, ಉದ್ಯೋಗ, ಸಾಹಸ ಮುಂತಾದ ಗುಣಗಳಿಂದ ಉತ್ಕರ್ಷವನ್ನು ಪಡೆಯ ಹತ್ತಿದರು. ಅಲ್ಲಿಯ ನಾವಿಕರು ಭೂಪ್ರದಕ್ಷಿಣೆಯನ್ನು ಮಾಡಿದರು. ಪೋರ್ತುಗೀಜರು ಹಿಂದುಸ್ಥಾನಕ್ಕೆ ಬರುವ ಜಲಮಾರ್ಗವನ್ನು ಕಂಡುಹಿಡಿದು ಇಲ್ಲಿಗೆ ಬಂದು ವ್ಯಾಪಾರ ಮಾಡಹತ್ತಿದರು.

ಈ ಎಲ್ಲ ಕಾರಣಗಳಿಂದ ೧೬ನೆಯ ಶತಕದ ಪ್ರಾರಂಭವು ಜಗತ್ತಿನ ಮಹತ್ವದ ಕ್ರಾಂತಿಕಾಲವೆಂದು ಹೇಳುವರು.

## (ಬ) ಮೊಗಲರ ಕಾಲ (ಕ್ರಿ. ಶ. ೧೫೨೬—ಕ್ರಿ. ಶ. ೧೭೦೭)

**ಪ್ರ. :— ಮೊಗಲ ಸಾಮ್ರಾಜ್ಯದ ಸ್ಥಾಪನೆಗೆ ಆ ಕಾಲದ ಹಿಂದುಸ್ಥಾನದ ಪರಿಸ್ಥಿತಿಯು ಅನುಕೂಲವಾಗಿದ್ದಿತು; ಎಂಬದನ್ನು ವಿವರಿಸಿರಿ. (೧೯೩೨)**

**ಉ. :—** ಆಗ ದಿಲ್ಲಿಯಲ್ಲಿ ಲೋಡಿ ಮನೆತನದ ಇಬ್ರಾಹಿಮಖಾನನು ರಾಜ್ಯವಾಳುತ್ತಿದ್ದನು. ಇವನ ಆಳಿಕೆಗೆ ಜನರು ಬೇಸರಗೊಂಡಿದ್ದರು.

ಪಂಜಾಬದ ಸುಭೇದಾರನಾದ ದೌಲತಖಾನ ಲೋಡಿಯು ತಾನು ದಿಲ್ಲಿಯ ರಾಜ್ಯವನ್ನು ಪಡೆದುಕೊಳ್ಳಬೇಕೆಂದು ಇಬ್ರಾಹಿಮಖಾನನ ಮೇಲೆ ದಾಳಿ ಮಾಡಲು ಬಾಬರನಿಗೆ ಹೇಳಿ ಕಳುಹಿದನು. ಲಾಹೋರ, ಮಾಳವಾ, ಗುಜರಾಥ, ಬಂಗಾಲ, ಖಾನದೇಶ, ಅಹಮ್ಮದನಗರ, ಗೋವಳಕೊಂಡ, ವಿಜಾಪುರ ಇವು ಸ್ವತಂತ್ರ ಅಫಗಾನ ರಾಜ್ಯಗಳಾಗಿದ್ದವು. ರಾಣಾಸಂಗರಾಜನು ತಾನು ದಿಲ್ಲಿಯ ಒಡೆಯನಾಗಬೇಕೆಂದು ಬಯಸಿ ಇಬ್ರಾಹಿಮ ಲೋಡಿಯ ವಿರುದ್ಧವಾಗಿ ತನಗೆ ನೆರವಾಗಬೇಕೆಂದು ಬಾಬರನಿಗೆ ಪತ್ರಬರೆದನು.

ಪಠಾಣ ಅರಸರ ಕ್ರೂರ ಆಳಿಕೆಯಿಂದ ಜನರು ಸಂತ್ರಸ್ತರಾಗಿದ್ದರು. ಜೀವಿತ-ವಿತ್ತ-ಧರ್ಮಗಳ ರಕ್ಷಣೆಯ ಚಿಂತೆಯು ಹೆಚ್ಚಾಗಿದ್ದಿತು.

ಪರಿಸ್ಥಿತಿಯು ಹೀಗಿರುವಾಗ ಬಾಬರನಿಗೆ ತನ್ನ ಸಾಮ್ರಾಜ್ಯವನ್ನು ಸ್ಥಾಪಿಸಲು ಅನುಕೂಲವಾಗುವದು ಸಹಜ.

**ಪ್ರ.:— ಪಠಾಣರ ಆಳಿಕೆಯ ಸಿಂಹಾವಲೋಕನದ ಬಗೆಗೆ ಟಿಪ್ಪಣಿ ಬರೆಯಿರಿ.**

**ಉ. :—** ಕ್ರಿ. ಶ. ೧೨೦೬–೧೫೨೬ ರ ವರೆಗೆ ಮೂರುನೂರು ಇಪ್ಪತ್ತು ವರ್ಷ ಪಠಾಣರ ಮುಸಲ್ಮಾನೀ ಸಾಮ್ರಾಜ್ಯವು ದಿಲ್ಲಿಯಲ್ಲಿ ನಡೆಯಿತು. ಈ ಪಠಾಣ ಅರಸರು ಹಿಂದಿನ ಮುಸಲ್ಮಾನರಂತೆ ಧರ್ಮಾಭಿಮಾನಿಗಳೂ ಶೂರರೂ ಆಗಿದ್ದರು. ಆದರೆ ಬಹುಶಃ ಎಲ್ಲ ಅರಸರು ಕ್ರೂರರೂ ದುರಾಗ್ರಹಿಗಳೂ ಎನಿಸಿದರು. ಪಠಾಣ ಸರದಾರರ ಒಲವಿನಂತೆಯೇ ಇವರು ನಡೆಯಬೇಕಾಯಿತು. ದಿಲ್ಲಿಯ ಅರಸು ದುರ್ಬಲನು ಇಲ್ಲವೆ ಅಪ್ರಿಯನು ಆಗಲು ಸರದಾರರಲ್ಲಿ ಪ್ರಬಲನಾದವನು ಅವನನ್ನು ತಳ್ಳಿಬಿಡುವನು. ದಿಲ್ಲಿಯ ಅರಸು ಮನೆತನಗಳನ್ನು ಬಹುಶಃ ಪಂಜಾಬದ ಸುಭೇದಾರರೇ ಕೊನೆಗಾಣಿಸುತ್ತ ಬಂದರು. ಹಿಂದುಗಳನ್ನು ಧರ್ಮಸಹಿಷ್ಣುತೆಯಿಂದ ಯಾರೂ ನಡೆಯಿಸಿಕೊಳ್ಳಲಿಲ್ಲ. ಸಾಮಾನ್ಯವಾಗಿ ಆಗಿನ ಮುಸಲ್ಮಾನರ ವಿಶೇಷವಾಗಿ ಅಫಗಾನ ಸರದಾರರ ಒಲವೇ ಹಿಂದುಗಳ ವಿರುದ್ಧವಾಗಿದ್ದದರಿಂದ ಪ್ರಜಾಹಿತದಕ್ಷನೂ ಪಾಪಭೀರುವೂ ಆದ ಫಿರೋಜನು ಸಹ ಹಿಂದುಗಳ ಪ್ರೇಮವನ್ನು ಸಂಪಾದಿಸುವದು ಶಕ್ಯವಾಗಲಿಲ್ಲ.

**ಪ್ರ. :— (ಅ) ಶೇರಶಾಹನು ಮಾಡಿದ ಸುಧಾರಣೆಗಳು ಯಾವವು ?**

(ಆ) ಶೇರಶಾಹನ ಯೋಗ್ಯತೆಯು ಅಕಬರನಿಗಿಂತ ಹೆಚ್ಚಿನ ದೆಂಬದು ಹೇಗೆ?

**ಉ. :—(ಅ) ಸುಧಾರಣೆಗಳು—** ಇವನು ತನ್ನ ಐದೇ ವರ್ಷಗಳ ಆಳಿಕೆಯಲ್ಲಿ ರಾಜ್ಯದ ಬಲಿಕೆಗೂ ಜನರ ಹಿತಕ್ಕೂ ಅನುಕೂಲವಾದ ಹಲವು ಸುಧಾರಣೆಗಳನ್ನು ಮಾಡಿದನು. ಸುಭೆ ಎಂಬ ದೊಡ್ಡ ಭಾಗಗಳನ್ನು ಮುರಿದು ಮೇಲಿಂದಮೇಲೆ ಬಂಡಾಯವನ್ನೆಬ್ಬಿಸುವ ಸುಭೇದಾರರ ಕಾಟವನ್ನು ತಪ್ಪಿಸಿದನು. ಸರಕಾರ ಎಂಬ ವಿಭಾಗಗಳ ಮೇಲೆ ಶಿಕ್ಕೇದಾರ, ಮುನಸೀಫ್, ಪೋತದಾರ, ಕಾರಕೂನ ಮುಂತಾದ ಅಧಿಕಾರಿಗಳನ್ನು ನಿಯಮಿಸಿದನು. ವಿಭಾಗದ ಸಂರಕ್ಷಣೆಯು ಮತ್ತು ಫೌಜದಾರಿ ಪ್ರಕರಣಗಳ ವಿಚಾರಣೆಯು ಇವು ಶಿಕ್ಕೆದಾರನ ಮುಖ್ಯ ಕೆಲಸಗಳು. ಮುನಸೀಫನು ಕೊಡುಕೊಳ್ಳುವ ಮತ್ತು ತೆರಿಗೆಯ ಸಂಬಂಧದ ವ್ಯಾಜ್ಯಗಳನ್ನು ತೀರಿಸುವನು ತೆರಿಗೆ ಎತ್ತುವ ಕೆಲಸಕ್ಕಾಗಿ ದಿಲ್ಲಿಯಿಂದಲೇ ಸ್ವತಂತ್ರ ಅಧಿಕಾರಿಯು ಬರುವನು. ಪೋಲೀಸರು ಕಳವು, ಸುಲಿಗೆ ಮುಂತಾದವುಗಳು ಆಗದಂತೆ ವ್ಯವಸ್ಥೆಯನ್ನಿಡುವರು.

ಭೂಮಿಗಳನ್ನು ಅಳೆದು ನಿಯಮಿತವಾದ ತೆರಿಗೆಯನ್ನು ಗೊತ್ತುಮಾಡಿ ಅದಕ್ಕೆ ರೈತರಿಂದ ಒಪ್ಪಿಗೆ ಬರೆಯಿಸಿಕೊಂಡನು. ಮತ್ತು ಭೂಮಿಗಳ ಅಧಿಕಾರಪತ್ರಗಳನ್ನು ಅವರಿಗೆ ಬರೆದು ಕೊಟ್ಟನು. ರೂಪಾಯಿ ಎಂಬ ಬೆಳ್ಳಿಯ ನಾಣ್ಯಗಳನ್ನು ಸಾಕಷ್ಟು ಮುದ್ರಿಸಿ ವ್ಯವಹಾರಕ್ಕೆ ಅನುಕೂಲ ಮಾಡಿ ಕೊಟ್ಟನು. ರಾಜಮಾರ್ಗಗಳನ್ನು ಮಾಡಿಸಿ ಎಡಬಲಗಳಲ್ಲಿ ನಾಲು ಗಿಡಗಳನ್ನು ಹಚ್ಚಿಸಿದನು. ಅಲ್ಲಲ್ಲಿ ಧರ್ಮಶಾಲೆಗಳನ್ನು ಕಟ್ಟಿಸಿದನು. ಕುದುರೆಗಳ ಮೇಲಿಂದ ಟಪಾಲು ಮುಟ್ಟಿಸುವ ವ್ಯವಸ್ಥೆ ಮಾಡಿಸಿದನು. ಒಂದೇ ಬಗೆಯ ತೂಕ-ಅಳತೆಗಳನ್ನು ಗೊತ್ತು ಮಾಡಿದನು.

ಸೈನ್ಯದ ಅಧಿಕಾರಿಗಳಿಗೆ ಉಂಬಳಿ ಹಾಕಿಕೊಡುವ ಪದ್ಧತಿಯನ್ನು ನಿಲ್ಲಿಸಿದನು. ಅವರ ಸಂಬಳ, ಅದನ್ನು ಹೆಚ್ಚಿಸುವ ಕ್ರಮ, ಭತ್ತೆ ಮುಂತಾದವುಗಳನ್ನು ಸರಿಯಾಗಿ ಗೊತ್ತುಮಾಡಿದನು. ಸೈನಿಕರನ್ನು ಆರಿಸಿಕೊಳ್ಳುವ ಕೆಲಸವನ್ನು ತನ್ನಕಡೆಗೆ ಇಟ್ಟುಕೊಂಡನು. ಕುದುರೆಗಳ ಮೇಲೆ ಬರೆಗಳಿಂದ ಕ್ರಮಾಂಕಗಳನ್ನು ಹಾಕಿಸಿ ಸರಿಯಾಗಿ ಲೆಕ್ಕವನ್ನು ಇಡಿಸಿದನು. ಸೈನಿಕರಿಂದ ಪ್ರಜೆಗಳಿಗೆ ಕಾಟ ತಟ್ಟದಂತೆ ವ್ಯವಸ್ಥೆಯನ್ನಿಟ್ಟನು. ರಾಜ್ಯದಲ್ಲಿ ಅಲ್ಲಲ್ಲಿ ಗುಪ್ತಚಾರರನ್ನಿಟ್ಟನು.

(ಆ) ಶೇರಶಾಹನ ಯೋಗ್ಯತೆ— ಪಠಾಣ ಅರಸರ ಉಗ್ರವಾದ ಆಳಿಕೆಯ ನಂತರ ಮತ್ತು ಅಕಬರನಿಗಿಂತ ಮೊದಲು ಶೇರಶಾಹನು ಉತ್ತಮ ಸುಧಾರಣೆಗಳನ್ನು ಮಾಡಿದ ಸಂಗತಿಯಿಂದ ಇವನ ಯೋಗ್ಯತೆಯು ಹೆಚ್ಚಿನ ದಿತ್ತೆಂದು ತಿಳಿಯುವದು. ಇವನು ಸಮರ್ಥನೆಂದೇ ತಿಳಿದು, ಅಣ್ಣನಾದ ಹುಮಾಯೂನನನ್ನು ಕಾಡಿದ ಕಾಮುರಾನನು ಪಂಜಾಬಪ್ರಾಂತವನ್ನು ತಾನಾಗಿಯೇ ಬಿಟ್ಟುಕೊಟ್ಟನು. ಇವನು ಶೂರನೂ ಸುವಿಚಾರಿಯೂ ನುರಿತ ಸೇನಾಪತಿಯೂ ಅನುಭವಿಕ ಮುತ್ಸದ್ದಿಯೂ ಆಗಿದ್ದನು. ಬೆಳಗಿನಿಂದ ಸಂಜೆಯ ವರೆಗೆ ಬೇಸರಗೊಳ್ಳದೆ ಕೆಲಸಮಾಡುವನು. ಕೈಕೆಳಗಿನ ಅಧಿಕಾರಿಗಳ ಮೇಲೆ ಇವನ ದರ್ಪವಿತ್ತು. ಹಿಂದುಗಳನ್ನು ದ್ವೇಷಿಸದೆ ಅವರಿಗೆ ಧರ್ಮ ಸ್ವಾತಂತ್ರ್ಯವನ್ನು ಕೊಟ್ಟಿದ್ದನು. ಇವೆಲ್ಲ ಸಂಗತಿಗಳಿಂದ ಶೇರಶಾಹನ ಯೋಗ್ಯತೆಯು ಅಕಬರನಿಗಿಂತ ಹೆಚ್ಚಿನದೆಂಬದು ಸ್ಪಷ್ಟವಾಗುವದು.

**ಪ್ರ. :— ಹುಮಾಯೂನನು ತನ್ನ ರಾಜ್ಯವನ್ನು ಹೇಗೆ ಕಳೆದುಕೊಂಡನು? ಮತ್ತು ಅದನ್ನು ಮರಳಿ ಹೇಗೆ ಸಂಪಾದಿಸಿದನು?**

**ಉ. :— ಹುಮಾಯೂನನು ತನ್ನ ರಾಜ್ಯವನ್ನು ಕಳೆದುಕೊಂಡ ರೀತಿ**— ಬಾಬರನು ನಾಲ್ಕೇ ವರುಷ ರಾಜ್ಯವಾಳಿ ಮರಣ ಹೊಂದಲು ಹುಮಾಯೂನನು ಪಟ್ಟಕ್ಕೆ ಬಂದನು. ಆದವಂದ ತಂದೆಯು ಸ್ಥಾಪಿಸಿದ್ದ ರಾಜ್ಯವನ್ನು ಸ್ಥಿರಗೊಳಿಸುವ ಭಾರವು ಇವನ ಮೇಲೆಯೇ ಬಿದ್ದಿತು. ಕಾಮು ರಾನ, ಹಿಂಡಾಲ, ಅಸ್ಕರಿ ಇವರು ಇವನಿಗೆ ಸಹಾಯ ಮಾಡುವ ಬದಲು ಇವನ ವೈರಿಗಳಾದರು. ಕಾಮುರಾನನಂತು ಕಂದಹಾರ, ಪಂಜಾಬ ಪ್ರಾಂತ ಗಳನ್ನು ಹಟದಿಂದ ತೆಗೆದುಕೊಂಡು ಸ್ವತಂತ್ರನಾಗಿ ಆಳಹತ್ತಿದನು. ಹಿಂಡಾಲ, ಅಸ್ಕರಿ ಇವರು ಸಮರ್ಥರಲ್ಲದಿದ್ದರೂ ಬಂಡುಗಾರರಿಗೆ ಸಹಾಯಕರಾಗಿದ್ದರು, ಹೀಗೆ ಮನೆಯಲ್ಲಿಯೇ ವಿರೋಧಿಗಳು ಹುಟ್ಟಿದ್ದರಿಂದ ಶತ್ರುಗಳು ಬಲಗೊಳ್ಳಲು ಅವಕಾಶವುಂಟಾಯಿತು. ಪೂರ್ವಭಾಗದಲ್ಲಿ ಶೇರಖಾನನೆಂಬ ಅಫಗಾನ ಸರ ದಾರನು ಪ್ರಬಲನಾದನು. ಗುಜರಾಥದ ಬಹದ್ದೂರಶಾಹನು ಹೊತ್ತುಸಾಧಿಸಿ ಮಾಳವವನ್ನು ಗೆದ್ದುಕೊಂಡನು. ಅವನಿಗೆ ದಿಲ್ಲಿಯ ರಾಜ್ಯವನ್ನಾಳುವ ಆಶೆ ಯಿದ್ದಿತು.

ಇಷ್ಟು ಹೊತ್ತಿಗೆ ಶೇರಖಾನನು ಜೋನಪುರ ಬಿಹಾರಗಳ ಗಡಿಯ ಲ್ಲಿರುವ ಚುನಾರ ಕೋಟೆಯನ್ನು ವಶಮಾಡಿಕೊಂಡು ಮುಂದಡಿ ಇಡಹತ್ತಿ

ದ್ದನು. ಆಗ ಹುಮಾಯೂನನು ಅವನ ಮೇಲೆ ಸಾಗಿ ಸೋಲಿಸಿದನು. ಷೇರ ಖಾನನು ಶರಣು ಬಂದದ್ದರಿಂದ ಅವನನ್ನು ಕ್ಷಮಿಸಿ ಹುಮಾಯೂನನು ಆ ಕೋಟೆಯನ್ನು ಅವನ ಕಡೆಗೆ ಬಿಟ್ಟು ದಿಲ್ಲಿಗೆ ಮರಳಿ ಬಂದನು. ಬಳಿಕ ಗುಜರಾಥದ ಬಹದ್ದೂರಶಾಹನ ಮೇಲೆ ಸಾಗಿ ಅವನನ್ನೂ ಸೋಲಿಸಿ ಅಸ್ಕರಿಯನ್ನು ಗುಜರಾಥದ ಸುಭೆದಾರನನ್ನಾಗಿ ನಿಯಮಿಸಿದನು. ಹುಮಾಯೂನನು ದಿಲ್ಲಿಯ ಕಡೆಗೆ ಸಾಗುವದೊಂದೇ ತಡ ಬಹದ್ದೂರಶಾಹನು ಮರಳಿ ಬಂದು ಅಸ್ಕರಿಯನ್ನು ಹೊಡೆದೋಡಿಸಿ ಗುಜರಾಥ ಮತ್ತು ಮಾಳವ ಈ ಪ್ರಾಂತಗಳನ್ನು ಕೈವಶ ಮಾಡಿಕೊಂಡನು. ಆದರೆ ಇದೇ ಹೊತ್ತಿಗೆ ಷೇರಖಾನನು ಬಿಹಾರದಲ್ಲಿ ತನ್ನ ಅಧಿಕಾರವನ್ನು ಬಲಿಸಿ ಚುನಾರ ಕೋಟೆಯಲ್ಲಿ ಯುದ್ಧದ ಸಿದ್ಧತೆಯನ್ನು ಮಾಡಿ ಹುಮಾಯೂನನನ್ನು ಇದಿರಿಸಲು ಸಜ್ಜಾಗಿದ್ದನು. ಆಗ ಹುಮಾಯೂನನು ಅವನ ಮೇಲೆ ಸಾಗಿ ಹೋಗಬೇಕಾಯಿತು. ಅವನು ಚುನಾರ ಕೋಟೆಯನ್ನು ವಶಮಾಡಿಕೊಂಡು ಗಂಗೆಯ ದಂಡೆಗುಂಟ ಬಿಹಾರ, ಬಂಗಾಲಗಳಲ್ಲಿ ಪ್ರವೇಶಿಸಿ ಗೌಡಪಟ್ಟಣವನ್ನು ವಶಮಾಡಿಕೊಂಡು ಅಲ್ಲಿ ವಿಲಾಸದಲ್ಲಿ ಕಾಲ ಕಳೆಯಹತ್ತಿದನು. ಷೇರಖಾನನು ಮಾತ್ರ ಹುಮಾಯೂನನು ದಿಲ್ಲಿಯಿಂದ ಬಹುದೂರ ಇರುವ ಹೊತ್ತನ್ನು ಸಾಧಿಸಿ ಬನಾರಸ, ಚುನಾರ, ಕನೋಜಗಳನ್ನು ಆಕ್ರಮಿಸಿ ಹುಮಾಯೂನನಿಗೆ ಇರುವ ದಿಲ್ಲಿಯ ಸಂಬಂಧವನ್ನು ತಪ್ಪಿಸಿದನು. ಇತ್ತ ಅಸ್ಕರಿಯೂ ಕಾಮರಾನನೂ ದಿಲ್ಲಿಯ ಒಡೆತನಕ್ಕಾಗಿ ಜಗಳಾಡ ಹತ್ತಿದ್ದರು. ಆಗ ಹುಮಾಯೂನನಿಗೆ ಎಚ್ಚರ ಹುಟ್ಟಿತು. ಅವನು ದಿಲ್ಲಿಯ ಕಡೆಗೆ ಸಾಗಿ ಬರುವಾಗ ಷೇರಖಾನನು ಅವನನ್ನು ಬಕ್ಸಾರದ ಹತ್ತಿರ ತಡೆದನು. ಯುದ್ಧವಾಡಿ ಹುಮಾಯೂನನು ಸೋತು ಒಬ್ಬನೇ ಒಬ್ಬನು ಒಬ್ಬ ಬಿಸ್ತಿಯ ಸಹಾಯದಿಂದ ಗಂಗೆಯನ್ನು ದಾಟಿ ಆಗ್ರಾಕ್ಕೆ ಬಂದು ಮುಟ್ಟಿದನು. ಕ್ರಿ. ಶ. ೧೫೪೦. ಮರುವರುಷ ಮತ್ತೊಮ್ಮೆ ಷೇರಖಾನನ ಮೇಲೆ ಸಾಗಿ ಸೋತು ನಿರಾಶನಾಗಿ, ನೆರವಿಗಾಗಿ ಕಾಮರಾನನ ಕಡೆಗೆ ಹೋದನು. ಷೇರಖಾನನು ದಿಲ್ಲಿಯ ಒಡೆಯನಾದನು. ಹೀಗೆ ಹುಮಾಯೂನನು ತನ್ನ ಅರಸೊತ್ತಿಗೆಗೆ ಎರವಾದನು.

**ಹುಮಾಯೂನನು ಮರಳಿ ರಾಜ್ಯವನ್ನು ಗಳಿಸಿದ್ದು**— ಹುಮಾಯೂನನು ರಾಜ್ಯವನ್ನು ಕಳೆದುಕೊಂಡ ಬಳಿಕ ನೆರವಿನ ಆಶೆಯಿಂದ ಸಿಂಧ, ಮಾರವಾಡ, ಪಂಜಾಬ, ಅಫಗಾಣಿಸ್ಥಾನಗಳ ಮಾರ್ಗವಾಗಿ ಕಡೆಗೆ ಇರಾ

ಣಕ್ಕೆ ಹೋದನು. ಯಾರೂ ಅವನಿಗೆ ಸಹಾಯ ಮಾಡಲಿಲ್ಲ. ಇರಾಣದ ಅರಸನಾದ ಶಾಹತಾಹಮಾಸ್ಪನು ಶಿಯಾಪಂಥವನ್ನು ಸ್ವೀಕರಿಸುವ ಕರಾರಿನಿಂದ ಸಹಾಯ ಮಾಡಲೊಪ್ಪಿದನು. ಸುನ್ನೀಪಂಥದ ಹುಮಾಯೂನನು ನಿರುಪಾಯನಾಗಿ ಶಿಯಾಪಂಥವನ್ನು ಸ್ವೀಕರಿಸಿದನು. ಬಳಿಕ ಶಹಾನು ಕೊಟ್ಟ ಸೈನ್ಯದೊಂದಿಗೆ ಕಾಬೂಲದ ಮೇಲೆ ಸಾಗಿ ಬಂದು ಕ್ರಿ ಶ. ೧೫೪೫ ರಲ್ಲಿ ಅದನ್ನು ಕೈವಶ ಮಾಡಿಕೊಂಡನು. ದಿಲ್ಲಿಗೆ ಬರುವದು ಆಗ ಅವನಿಗೆ ಸಾಧ್ಯವಾಗಲಿಲ್ಲ. ಮುಂದೆ ಹತ್ತುವರ್ಷಗಳ ಮೇಲೆ ಕ್ರಿ. ಶ. ೧೫೫೫ ರಲ್ಲಿ ಪಂಜಾಬದ ಮೇಲೆ ಸಾಗಿ ಸರಹಿಂದದ ಹತ್ತರ ಷೇರಶಾಹ ಮನೆತನವನ್ನು ಸೋಲಿಸಿ ದಿಲ್ಲಿಯ ಒಡೆಯನಾದನು

**ಪ್ರ.:— ಅಕಬರನ ರಾಜ್ಯಪದ್ಧತಿಯನ್ನು ವಿವರಿಸಿರಿ. ಮತ್ತು ಅದು ಮೊಗಲ ಸಾಮ್ರಾಜ್ಯವನ್ನು ಬಲಗೊಳಿಸಲು ಹೇಗೆ ಕಾರಣವಾಯಿತೆಂಬದನ್ನು ಹೇಳಿರಿ. (೧೯೪೦)**

**ಉ.:— ಅಕಬರನ ರಾಜ್ಯಪದ್ಧತಿ** — (ಅ) ಅಧಿಕಾರಿಗಳು—ಅಕಬರನು ತನ್ನ ವಿಸ್ತಾರವಾದ ರಾಜ್ಯದಲ್ಲಿ ೧೫ ಸುಭೆಗಳನ್ನು ಮಾಡಿ ಪ್ರತಿಯೊಂದು ಸುಭೆಗೆ ಸುಭೇದಾರನೆಂಬ ಅಧಿಕಾರಿಯನ್ನು ನಿಯಮಿಸಿದ್ದನು. ಪ್ರತಿಯೊಂದು ಸುಭೆಯು ಕೆಲವು ಜಿಲ್ಹೆಗಳನ್ನೂ ಜಿಲ್ಹೆಯು ಕೆಲವು ಪರಗಣೆ ಅಥವಾ ಮಹಾಲುಗಳನ್ನೂ ಪರಗಣೆಯು ಕೆಲವು ಗ್ರಾಮಗಳನ್ನೂ ಒಳಗೊಂಡಿದ್ದವು. ಮುಖ್ಯ ಪ್ರಧಾನನು ಆ ಆ ಖಾತೆಗಳ ಮುಖ್ಯಾಧಿಕಾರಿಗಳ ವಿಚಾರದಿಂದಲೂ ಬಾದಶಹನ ಸಮ್ಮತಿಯಿಂದಲೂ ಎಲ್ಲ ಕಾರಭಾರವನ್ನೂ ಸುಭೆಗಳ ಮೇಲ್ವಿಚಾರಣೆಯ ಕೆಲಸವನ್ನೂ ಸಾಗಿಸುವನು. ಸುಭೆಗಳಲ್ಲಿಯೂ ಆ ಆ ಖಾತೆಗಳ ಮುಖ್ಯಾಧಿಕಾರಿಗಳಿದ್ದರು ಅವರು ಸುಭೇದಾರನ ಸಹಾಯಕರಾಗಿದ್ದರು. ಅಕಬರನು ಉಂಬಳಿಯ ಪದ್ಧತಿಯನ್ನು ಸಂಪೂರ್ಣವಾಗಿ ನಿಲ್ಲಿಸಿ ಎಲ್ಲ ನೌಕರರಿಗೆ ಸಂಬಳವನ್ನೇ ಗೊತ್ತು ಮಾಡಿದ್ದನು. (ಬ) **ನ್ಯಾಯ ಪದ್ಧತಿ** — ಪ್ರಜೆಗಳಿಗೆ ಸರಿಯಾದ ನ್ಯಾಯ ದೊರೆಯುವಂತೆ ವ್ಯವಸ್ಥೆ ಮಾಡಿದ್ದನು. ಮಹತ್ವದ ನಿರ್ಣಯಗಳ ಕೊನೆಯ ಅಧಿಕಾರವನ್ನು ತನ್ನ ಕೈಯಲ್ಲಿ ಇಟ್ಟುಕೊಂಡಿದ್ದನು. ಮರಣ ದಂಡನೆಗೆ ಬಾದಶಹನ ಒಪ್ಪಿಗೆಯು ಅವಶ್ಯವಾಗಿದ್ದಿತು. (ಕ) **ಸೈನ್ಯವ್ಯವಸ್ಥೆ**— ಅಕಬರನ ಸೈನ್ಯವು ೪೫ ಸಾವಿರ ಕುದುರೆಯ ಸವಾರರಿಂದಲೂ ೫ ಸಾವಿರ ಆನೆಗಳಿಂದಲೂ ಕೂಡಿದ್ದಿತು.

ಕಾಲಾಳುಗಳ ಸಂಖ್ಯೆಯಂತೂ ಬಹಳ ದೊಡ್ಡದಿದ್ದಿತು. ಮನಸಬದಾರರೆಂಬ ವರು ೧೦ ರಿಂದ ೧೦೦೦೦ ಕುದುರೆಸವಾರರ ಮೇಲಿನ ಅಧಿಕಾರಿಗಳಾಗಿದ್ದರು. ೭ ಸಾವಿರಗಳ ಮೇಲಿನ ಮನಸಬದಾರಿಕೆಯು ಅರಸುಮನೆತನದವರಿಗೂ ನಂಬುಗೆಯ ಸರದಾರರಿಗೂ ದೊರೆಯುತ್ತಿದ್ದವು. ಈ ಸಾಮಾನ್ಯ ಸೈನ್ಯವಲ್ಲದೆ ದಖಿಲಿ, ಅಹಾಡಿ ಎಂಬ ಬೇರೆ ಎರಡು ಸೈನ್ಯಗಳಿದ್ದವು. ಮೊದಲಿನದನ್ನು ಅಕಬರನು ಸ್ವತಃ ತಯಾರಿಸಿ ಮೀಸಲ ಪ್ರಸಂಗಗಳಿಗಾಗಿ ಕಾಯ್ದಿಟ್ಟಿದ್ದನು. ಎರಡನೆಯದು ಪ್ರತಿಷ್ಠಿತರಾದ ನಾಗರಿಕರ ಸೈನ್ಯವಾಗಿದ್ದಿತು ಪ್ರಸಂಗದಲ್ಲಿ ಅದು ರಾಜ್ಯರಕ್ಷಣೆಗೆ ನೆರವಾಗುತ್ತಿದ್ದಿತು. (ಡ) **ಕಂದಾಯ ಪದ್ಧತಿ—** ಮೊದಲು ಷೇರಶಾಹನ ಕೈಯಲ್ಲಿ ಕೆಲಸಮಾಡಿದ ರಾಜಾ–ತೋಡರಮಲ್ಲನು ಕಂದಾಯ ಪದ್ಧತಿಯನ್ನು ಸುಧಾರಿಸಿದನು. ಎಲ್ಲ ಭೂಮಿಗಳನ್ನು ಅಳೆದು ಅವುಗಳಿಗೆ ಮೇರೆಗಳನ್ನು ಹಾಕಿಸಿದನು. ಭೂಮಿಯ ಕಸುವು, ನೀರಿನ ಅನುಕೂಲ ಇವನ್ನು ಲಕ್ಷಿಸಿ ಕಂದಾಯವನ್ನು ಗೊತ್ತುಪಡಿಸಿದನು. ಚೊಕ್ಕ ಉತ್ಪನ್ನದ ಮೂರರಲ್ಲೊಂದು ಪಾಲು ಕಂದಾಯವು ಸರಕಾರಕ್ಕೆ ಸಲ್ಲುತ್ತಿದ್ದಿತು. ರೈತರು ತಮ್ಮ ಇಚ್ಛೆಯಂತೆ ಹಣವನ್ನಾಗಲಿ ಕಾಳುಗಳನ್ನಾಗಲಿ ಕಂದಾಯವೆಂದು ಕೊಡಲು ಅನುಕೂಲವಾಗಿದ್ದಿತು. ಬೀಳು ಭೂಮಿಗಳ ಸಾಗುವಳಿಯವರಿಗೆ ಸಾಲದೊರೆಯುತ್ತಿದ್ದಿತು. (ಇ) **ಪ್ರಜಾಹಿತದ ಕಾರ್ಯಗಳು**— ಸತಿ ಹೋಗುವ ಪದ್ಧತಿಯನ್ನು ಕಾಯದೆಯಿಂದ ಪ್ರತಿಬಂಧಿಸಿದನು. ಜಜಿಯಾ ಕರವನ್ನೂ ಯಾತ್ರಿಕರ ಮೇಲಿನ ತಲೆಪಟ್ಟಿಯನ್ನೂ ಕಿತ್ತಿಹಾಕಿದನು. ಅನೇಕ ಭವ್ಯವಾದ ಕಟ್ಟಡಗಳನ್ನು ಕಟ್ಟಿಸಿ ಶಿಲ್ಪಕಲೆಗೆ ಉತ್ತೇಜನ ಕೊಟ್ಟನು. ಚಿತ್ರಕಲೆಗೆ ಪ್ರೋತ್ಸಾಹ ಕೊಟ್ಟು ಸಿಕ್ರಿಯಲ್ಲಿ ಬಗೆಬಗೆಯ ಸುಂದರವಾದ ಚಿತ್ರಗಳನ್ನು ಬರೆಯಿಸಿದನು. ಒಟ್ಟಿನಲ್ಲಿ ಪ್ರಜೆಗಳೆಲ್ಲರೂ ಸುಖಿಗಳಾಗಿರುವಂತೆ ಯತ್ನಿಸಿದನು. ವಿದ್ವಾಂಸರಿಗೆ ಆಶ್ರಯ ಕೊಟ್ಟನು.

ಈ ಬಗೆಯ ರಾಜಕೀಯ–ಸಾಮಾಜಿಕ ವಿದ್ಯಾವಿಷಯಕ ಕಾರ್ಯಗಳಿಂದ ಇವನ ಸಾಮ್ರಾಜ್ಯವು ಬಲಗೊಂಡು ಸ್ಥಿರವಾಯಿತು. ಇವನ ಉತ್ತಮವಾದ ರಾಜ್ಯವ್ಯವಸ್ಥೆಯನ್ನೂ ಪ್ರಜಾಹಿತ ದಕ್ಷತೆಯನ್ನೂ ಲಕ್ಷಿಸಿದರೆ ಇವುಗಳ ಬಲದಿಂದಲೇ ಇವನ ರಾಜ್ಯವು ಒಳ್ಳೆಯ ಉತ್ಕರ್ಷವನ್ನು ಹೊಂದಿತ್ತೆಂದು ಸ್ಪಷ್ಟವಾಗುವದು.

**ಪ್ರ. :— ಶಹಾಜಹಾನನ ಆಳಿಕೆಯಲ್ಲಿ ಮೊಗಲ ಅರಸರ ವೈಭವವು ಶಿಖರಕ್ಕೆ ಮುಟ್ಟಿತ್ತು; ಎಂಬದನ್ನು ಸಿದ್ಧಮಾಡಿರಿ,**

**ಇಲ್ಲವೆ**

**ಶಹಾಜಹಾನನ ಆಳಿಕೆಗೆ ಮೊಗಲ ಸಾಮ್ರಾಜ್ಯದ ಸುವರ್ಣಯುಗವೆಂದು ಕರೆಯುವರು. ಅದೇಕೆ ? (೧೯೩೭)**

**ಉ. :**— ಅಕಬರನ ಧೋರಣೆ ಮತ್ತು ರಾಜ್ಯಪದ್ಧತಿ ಇವುಗಳ ಮೂಲಕ ಮೊಗಲ ಸಾಮ್ರಾಜ್ಯವು ಒಳ್ಳೆಯ ವೈಭವವನ್ನು ಹೊಂದಲಾರಂಭಿಸಿತ್ತು. ಜಹಾಂಗೀರ ಮತ್ತು ಜಹಾಜಹಾನ ಇವರು ಅಕಬರನ ಧೋರಣೆಯನ್ನೇ ಅನುಸರಿಸುತ್ತ ಬಂದಿದ್ದರು. ಆದದರಿಂದ ಸಾಮ್ರಾಜ್ಯದ ವೈಭವವು ಹೆಚ್ಚುತ್ತಲೆ ನಡೆಯಿತು. ಶಹಾಜಹಾನನು ಕರ್ತೃತ್ವಶಾಲಿಯೂ ಸಹಿಷ್ಣುವೂ ಆಗಿದ್ದದರಿಂದ ರಾಜ್ಯದಲ್ಲಿ ಶಾಂತತೆಯು ನೆಲೆಸಿತು. ಇವನ ಕಾಲದಲ್ಲಿ ಯುದ್ಧದ ಪ್ರಸಂಗಗಳು ಹೆಚ್ಚಾಗಿರಲಿಲ್ಲ. ಉತ್ತರದ ದಾಳಿಗಾರರ ಬಾಧೆಯೂ ಇವನ ಕಾಲದಲ್ಲಿ ತಟ್ಟಲಿಲ್ಲ. ಇವನು ಕಲಾಕೌಶಲ್ಯಗಳಿಗೆ ಉತ್ತೇಜನ ಕೊಟ್ಟು ತಾಜಮಹಾಲ, ಮೋತಿಮಸೀದೆ, ದಿವಾಣ ಈ ಖಾಸ, ದಿವಾಣ ಈ ಆಮ್ ಮೊದಲಾದ ಲೋಕೋತ್ತರವಾದ ಕಟ್ಟಡಗಳನ್ನು ಹೇರಳವಾದ ಹಣ ವೆಚ್ಚ ಮಾಡಿ ಕಟ್ಟಿಸಿದನು. ೩ ಕೋಟಿ ರೂಪಾಯಿ ಬೆಲೆಯ ಮಯೂರಾಸನ ಎಂಬ ಸಿಂಹಾಸನವನ್ನು ಮಾಡಿಸಿದನು. ಇಷ್ಟು ಹಣ ವೆಚ್ಚವಾದ ಮೇಲೆಯೂ ಇವನ ಖಜಾನೆಯಲ್ಲಿ ೨೦ ಕೋಟಿ ರೂಪಾಯಿಗಳು ಶಿಲುಕು ಇದ್ದವು. ದೇಶವು ಸಂಪತ್ತು, ವ್ಯಾಪಾರ, ಉದ್ಯೋಗ ಇವುಗಳಿಂದ ಸಮೃದ್ಧವಾಗಿತ್ತು ಆದದರಿಂದ ಶಹಾಜಹಾನನ ಆಳಿಕೆಯು ಮೊಗಲ ಅರಸರ ಸುವರ್ಣಕಾಲವೆಂಬ ಸಂಗತಿಯು ಸ್ಪಷ್ಟವಾಗುವದು.

**ಪ್ರ. :— ಬಾಬರ, ರಾಣಾಸಂಗರಾಜ, ಶೇರಶಾಹ, ಬಹರಾಮಖಾನ, ಪ್ರತಾಪಸಿಂಹ, ಜಯಮಲ್ಲ, ಮುಮತಾಜಮಹಾಲ, ಮೀರಜುಮ್ಲಾ, ರಾಜಾ ಛತ್ರಸಾಲ, ಸಯ್ಯದ ಬಂಧುಗಳು, ನಾದೀರಶಾಹ, ಗುಲಾಮಕಾದರ, ಗುರು ನಾನಕ, ಗುರುಗೋವಿಂದಸಿಂಗ ಇವರು ಯಾರು ಎಂಬದನ್ನು ಸ್ವಲ್ಪದರಲ್ಲಿ ಹೇಳಿರಿ.**

**ಉ. :**— (೧) **ಬಾಬರ**— ಮೊಗಲ ರಾಜ್ಯವನ್ನು ದಿಲ್ಲಿಯಲ್ಲಿ ಸ್ಥಾಪಿಸಿದನು. (ಕ್ರಿ. ಶ. ೧೫೨೬)

(೨) **ರಾಣಾಸಂಗರಾಜ**— ವೀರ ಪ್ರತಾಪಸಿಂಹನ ಅಜ್ಜನು. ಇವನು ಕ್ರಿ. ಶ. ೧೫೨೭ ರಲ್ಲಿ ಬಾಬರನನ್ನು ಇದಿರಿಸಿ ಕಾದಿ ಮಡಿದನು.

(೩) **ಶೇರಶಾಹ**— ಇವನು ಮೊದಲು ಶೀರಖಾನನು. ಹುಮಾಯೂನನನ್ನು ಸೋಲಿಸಿ ಓಡಿಸಿ, ದಿಲ್ಲಿಯಲ್ಲಿ ಸೂರ ಮನೆತನದ ರಾಜ್ಯವನ್ನು ಸ್ಥಾಪಿಸಿದನು.

(೪) **ಬಹಿರಾಮಖಾನ** — ಅಕಬರನ ಬಾಲ್ಯದಲ್ಲಿ ಅವನ ಸಂರಕ್ಷಕನು; ರಾಜಕಾರಣದಲ್ಲಿ ಬಲ್ಲಿದನು. ಕೊನೆಗೆ ಅಕಬರನಿಂದ ಕಡೆಗಾದನು. ಕೊನೆ ಕ್ರಿ. ಶ. ೧೫೬೧.

(೫) **ಪ್ರತಾಪಸಿಂಹ**— ರಾಣಾಸಂಗನ ಮೊಮ್ಮಗನು. ಪರಾಕ್ರಮಿಯೂ, ಸ್ವಾಭಿಮಾನಿಯೂ ಆಗಿದ್ದನು ಇಪ್ಪತ್ತು ವರ್ಷ ಮೊಗಲರೊಡನೆ ಕಾದಿದನು. ಉದೇಪುರದಲ್ಲಿ ಹೊಸ ರಾಜ್ಯವನ್ನು ಸ್ಥಾಪಿಸಿದನು. ಕೊನೆ ಕ್ರಿ. ಶ. ೧೫೯೭.

(೬) **ಜಯಮಲ್ಲ** — ಉದಯಸಿಂಗನ ನಂಬುಗೆಯ ಶೂರ ಸರದಾರನು. ಕೋಟೆಯನ್ನು ರಕ್ಷಿಸುತ್ತಿರುವಾಗ ಅಕಬರನಿಂದ ಹತನಾದನು. ಕ್ರಿ. ಶ. ೧೫೬೭.

(೭) **ಮುಮತಾಜಮಹಾಲ** — ಶಹಾಜಹಾನನ ಹೆಂಡತಿ. ಈಕೆಯ ನೆನಪಿಗಾಗಿ ಜಗತ್ತಿನಲ್ಲಿ ಅತಿ ಸುಂದರವಾದ ತಾಜಮಹಾಲ ಎಂಬ ಗೋರಿಯನ್ನು ಕಟ್ಟಿಸಿದನು.

(೮) **ಮೀರಜುಮ್ಲಾ**— ಇವನು ಔರಂಗಜೇಬನ ಶೂರ ಸರದಾರನು. ರಾಜ್ಯವನ್ನು ಹಬ್ಬಿಸುವದರಲ್ಲಿ ಔರಂಗಜೇಬನ ಸಹಾಯಕನು. ಕೊನೆ ಕ್ರಿ. ಶ. ೧೬೬೩.

(೯) **ರಾಜಾಛತ್ರಸಾಲ**— ಬುಂದೇಲಖಂಡದ ಅರಸು. ಕೊನೆಯವರೆಗೆ ಮೊಗಲರನ್ನು ವಿರೋಧಿಸಿ ತನ್ನ ರಾಜ್ಯವನ್ನು ಕಾಯ್ದುಕೊಂಡನು.

(೧೦) **ಸಯ್ಯದ ಬಂಧುಗಳು** — ಔರಂಗಜೇಬನ ಸಂಬಂಧಿಕರು. ಇವರ ಬಲದಿಂದಲೇ ನಾಲ್ವರು ಬಾದಶಹರು ಪಟ್ಟಕ್ಕೆ ಬಂದರು. ಸಯ್ಯದ ಬಂಧುಗಳಿಗೆ ಕಿಂಗ್ ಮೇಕರ್ಸ ಎಂದರೆ ಅರಸರನ್ನು ಆರಿಸುವವರು ಎಂಬ ಹೆಸರು.

(೧೧) **ನಾದಿರಶಾಹ**— ಇರಾಣದ ಅರಸನು. ಅತಿ ಕ್ರೂರನು. ಕ್ರಿ. ಶ. ೧೭೩೯ ರಲ್ಲಿ ದಿಲ್ಲಿಯ ಮೇಲೆ ದಾಳಿ ಮಾಡಿ ಭೀಕರವಾದ ಕೊಳ್ಳೆ–ಕೊಲೆ–ಸುಲಿಗೆಗಳನ್ನು ಮಾಡಿದನು.

(೧೨) **ಗುಲಾಮ ಕಾದರ**— ರೋಹಿಲ ಖಂಡದ ನಜೀಬಖಾನನ ಮೊಮ್ಮಗನು. ದಿಲ್ಲಿಯ ಬಾದಶಹನಾದ ೨ ನೆಯ ಶಹಾ ಅಲಮನನ್ನು ಕಾಡಿಸಿ ಕೊನೆಗೆ ಅವನ ಕಣ್ಣುಗಳನ್ನು ಕೀಳಿಸಿದನು.

(೧೩) **ಗುರುನಾನಕ**— ಸೀಖ ಧರ್ಮದ ಸಂಸ್ಥಾಪಕನು. ಹಿಂದು–ಮುಸಲ್ಮಾನರು ಧರ್ಮದ ನೆವದಿಂದ ಕಾದುವದು ಅವನ ಮನಸ್ಸಿಗೆ ಬರಲಿಲ್ಲ. ಎರಡೂ ಧರ್ಮಗಳಲ್ಲಿಯ ಒಳ್ಳೆಯ ವಚನಗಳನ್ನು ಸಂಗ್ರಹಿಸಿ ತನ್ನ ಧರ್ಮವನ್ನು ಬೋಧಿಸಿದನು.

(೧೪) **ಗುರುಗೋವಿಂದ ಸಿಂಹ**— ಇವನು ಸೀಖರ ಒಂಬತ್ತನೆಯ ಗುರುವು ಇವನು ಸೀಖರಲ್ಲಿ ಹೊಸ ಕಳೆಯನ್ನು ಉಂಟುಮಾಡಿದನು. ಆಗಿನಿಂದ ಸೀಖರು ಸಿಂಹ ಅಥವಾ ಸಿಂಗ ಎಂಬ ಶಬ್ದವನ್ನು ತಮ್ಮ ಹೆಸರಿನ ಮುಂದೆ ಕೂಡಿಸಹತ್ತಿದರು. ಮುಂದೆ ಔರಂಗಜೇಬನು ಸೀಖರನ್ನು ಪೀಡಿಸಹತ್ತಿದನು. ಅವನು ಗುರುಗೋವಿಂದ ಸಿಂಗನ ಇಬ್ಬರು ಮಕ್ಕಳನ್ನು ಸರಹಿಂದದಲ್ಲಿ ಸೆರೆಹಿಡಿಸಿ ಹುಗಿಸಿ ಕೊಲ್ಲಿಸಿದನು. ಇದರಿಂದ ಸೀಖರು ರೊಚ್ಚಿಗೆದ್ದರು. ಔರಂಗಜೇಬನು ಇವರೊಡನೆ ಕಾದಿ ಕಾದಿ ನಿರಾಶನಾದನು. ಮುಂದೆ ಗೋವಿಂದ ಸಿಂಗನು ದಕ್ಷಿಣಕ್ಕೆ ಬಂದಿರುವಾಗ ನಾಂದೇಡದಲ್ಲಿ ಅಫಗಾನರಿಂದ ಕೊಲ್ಲಲ್ಪಟ್ಟನು ಕ್ರಿ. ಶ. ೧೭೦೮. ಅವನ ಸ್ಮಾರಕಕ್ಕಾಗಿ ನಾಂದೇಡದಲ್ಲಿ ಪ್ರತಿ ವರ್ಷ ಯಾತ್ರೆಯಾಗುವದು.

**ಪ್ರ.:— ಮೊಗಲ ಸಾಮ್ರಾಜ್ಯದ ಅಳಿಗಾಲದ ಕಾರಣಗಳಾವವು ?**

**ಉ.:—** (೧) ಆಳುತ್ತಿರುವ ಬಾದಶಹನು ಸತ್ತತರುವಾಯ ಇಂಥವರೇ ಪಟ್ಟಕ್ಕೆ ಬರತಕ್ಕದ್ದೆಂಬ ನಿರ್ಬಂಧವಿಲ್ಲದ್ದರಿಂದ ಪಟ್ಟವನ್ನು ಆಕ್ರಮಿಸುವದಕ್ಕಾಗಿ ಉಂಟಾಗುತ್ತಿದ್ದ ಕಲಹಗಳಿಂದ ರಾಜ್ಯದ ಕಸುವು ಕಡಿಮೆಯಾಗಹತ್ತಿತು. (೨) ಔರಂಗಜೇಬನ ಧರ್ಮಾಂಧತೆಯ ಧೋರಣೆಯಿಂದ ಸಿಯಾಪಂಥದ ಮುಸಲ್ಮಾನರು, ಶೀಖರು, ಜಾಟರು, ರಾಜಪುತ್ರರು, ಮರಾಠರು ಮೊಗಲಸಾಮ್ರಾಜ್ಯದ ಹಗೆಗಳಾದರು. (೩) ಔರಂಗಜೇಬನ ತರುವಾಯ ಬಾದಶಹರು ದುರ್ಬಲರಾದುದರಿಂದ ಸುಭೇದಾರರು ಸರದಾರರೂ ಸ್ವತಂತ್ರ

ರಾಗಲು ನಡಿಲು ಸಿಕ್ಕಿತು. (೪) ಹೆಚ್ಚಿನ ಮುತ್ಸದ್ದಿತನ, ಸುಧಾರಿಸಿದ ಯುದ್ಧ ಪದ್ಧತಿ ಇವುಗಳಿಂದ ಒಲಿಷ್ಟರಾದ ಇಂಗ್ಲಿಷರನ್ನು ಇದಿರಿಸುವ ಕಸುವು ಮೊಗಲರಲ್ಲಿ ಉಳಿಯಲಿಲ್ಲ. (೬) ನಾದಿರಶಾಹ, ಅಹಮ್ಮದಶಹಅಬ್ದಾಲಿ ಇವರ ದಾಳಿಗಳಿಂದ ಮೊಗಲ ರಾಜ್ಯದ ಕೀಲಗಳು ಸಡಿಲಾದವು.

**ಪ್ರ. :— ಅಕಬರ-ಔರಂಗಜೇಬ ಇವರಲ್ಲಿಯ ಸಾಮ್ಯ ವೈಷಮ್ಯಗಳನ್ನು ವಿವರಿಸಿರಿ.**

**ಉ. :—** ಸಾಮ್ಯ— ಇಬ್ಬರೂ ದೊಡ್ಡ ಸಾಮ್ರಾಜ್ಯವನ್ನು ಆಳಿದರು. ರಾಜ್ಯಗಳನ್ನು ಗೆದ್ದರು; ಶೂರರೂ ಕರ್ತವ್ಯದಕ್ಷರೂ ಉದ್ಯೋಗಿಗಳೂ ರಾಜ ಕಾರಣದಲ್ಲಿ ನುರಿತವರೂ ಆಗಿದ್ದರು.

ವೈಷಮ್ಯ— ಅಕಬರನು ಪರಧರ್ಮ ಸಹಿಷ್ಣುವಾಗಿದ್ದನು; ಔರಂಗ ಜೇಬನು ಪರಧರ್ಮವನ್ನು ದ್ವೇಷಿಸಿದನು. ಅಕಬರನು ತಂದೆ ಕಳೆದಿದ್ದ ರಾಜ್ಯ ವನ್ನು ಗಳಿಸಿ, ಬೆಳೆಸಿ, ಉಳಿಯುವಂತೆ ಆಳಿದನು. ಔರಂಗಜೇಬನು ಅನಾ ಯಾಸವಾಗಿ ಬಂದ ಸಾಮ್ರಾಜ್ಯವನ್ನು ಬೆಳೆಸಿ, ಅಳಿದುಹೋಗುವಂತೆ ಆಳಿ ದನು. ಅಕಬರನು ಜನಪ್ರಿಯನಾಗಿ ಸುಖಿಯಾಗಿ ಬಾಳಿದನು; ಔರಂಗ ಜೇಬನು ಅಪ್ರಿಯನಾಗಿ ನಿರಾಶನಾಗಿ ಬಳಲಿದನು.

### (ಕ) ಮರಾಠರ ಕಾಲ (ಕ್ರಿ. ಶ. ೧೬೦೭–ಕ್ರಿ. ಶ. ೧೮೧೮)

**ಪ್ರ. :— ಮರಾಠರ ಉತ್ಕರ್ಷದ ಕಾರಣಗಳಾವವು ?**

**ಉ. :—** (೧) ಹಿಂದು ದ್ವೇಷಿಗಳಾದ ಮುಸಲ್ಮಾನರು ನಡೆಸಿದ ಬಲಾತ್ಕಾರ, ಅತ್ಯಾಚಾರಗಳಿಂದ ಸಂತ್ರಸ್ತರಾದ ಹಿಂದುಗಳು ಮುಸಲ್ಮಾನರ ರಾಜಸತ್ತೆಯನ್ನು ಅಡಗಿಸಲು ಬೆಂಬಲವಿತ್ತರು. (೨) ತುಕಾರಾಮ–ರಾಮ ದಾಸರ ಧರ್ಮ–ನೀತಿ–ಧೈರ್ಯ–ಸಾಹಸಗಳ ಉಪದೇಶದಿಂದ ಮರಾಠರಲ್ಲಿ ಹೊಸ ಉತ್ಸಾಹವು ಉಂಟಾಯಿತು. (೩) ದಕ್ಷಿಣದ ಮುಸಲ್ಮಾನೀ ರಾಜ್ಯ ಗಳಲ್ಲಿ ಕೆಲಸಮಾಡಿದ ನುರಿತ ರಾಜಕಾರಣಿಗಳೂ ಶೂರರೂ ಆದ ಜನರು ಸ್ವರಾಜ್ಯ ಸ್ಥಾಪನೆಯ ವಿಚಾರದಲ್ಲಿ ತೊಡಗಿದರು. (೪) ಶಿವಾಜಿಯಂಥ ಮುಂದಾಳುವೂ ತಾನಾಜಿಯಂಥ ತನು–ಮನಗಳಿಂದ ನೆರವಿತ್ತ ವೀರರೂ ರಾಮದಾಸರಂಥ ಮಾರ್ಗದರ್ಶಕರೂ ಒಂದಾಗಿ ದೃಢನಿಶ್ಚಯದಿಂದ ಸ್ವರಾಜ್ಯ ಸಂಸ್ಥಾಪನೆಯ ಕಾರ್ಯವನ್ನು ಕೈಕೊಂಡರು. (೫) ಔರಂಗಜೇಬನು

ವಿಜಾಪುರ–ಗೋವಳಕೊಂಡಗಳ ರಾಜ್ಯಗಳನ್ನು ಮುರಿದದ್ದರಿಂದ ಮರಾಠರಿಗೆ ರಾಜ್ಯವನ್ನು ಹಬ್ಬಿಸಲು ಹೆಚ್ಚು ಅನುಕೂಲವಾಯಿತು.

**ಪ್ರ. :— ಶಿವಾಜಿಯುಬಾಲ್ಯ ಮತ್ತು ಶಿಕ್ಷಣ, ಕೊಂಢಾಣೆಯು (ಸಿಂಹಗಡವು) ಮರಾಠರ ವಶವಾದದ್ದು, ಶಿವಾಜಿಯ ರಾಜ್ಯಪದ್ಧತಿ, ಶಿವಾಜಿಯ ಗುಣ–ಶೀಲ–ಯೋಗ್ಯತೆ ಇವುಗಳ ಬಗೆಗೆ ಟಿಪ್ಪಣೆಗಳನ್ನು ಬರೆಯಿರಿ.**

**ಉ. :—** ಶಿವಾಜಿಯ ಬಾಲ್ಯ ಮತ್ತು ಶಿಕ್ಷಣ— ಶಿವಾಜಿಯು ಕ್ರಿ. ಶ. ೧೬೨೭ ರಲ್ಲಿ ಶಿವನೇರಿ ಕೋಟೆಯಲ್ಲಿ ಹುಟ್ಟಿದನು. ಶಹಾಜಿಯು ಆದಿಲ ಶಾಹಿಯ ಸರದಾರನಾದ ಬಳಿಕ ಜಿಜಾಬಾಯಿಯನ್ನು ವಿಜಾಪುರಕ್ಕೆ ಕರೆಯಿಸಿ ಕೊಂಡನು. ವೀರಕನ್ಯೆಯೂ ವೀರಪತ್ನಿಯೂ ಆದ ಜಿಜಾಬಾಯಿಯು ರಾಮಾಯಣ–ಮಹಾಭಾರತಗಳಲ್ಲಿಯ ವೀರರ ಮತ್ತು ಸತ್ಪುರುಷರ ಕಥೆ ಗಳನ್ನು ಹೇಳಿ, ಆತನಲ್ಲಿ ವೀರವೃತ್ತಿಯನ್ನೂ ನೀತಿಧೈರ್ಯವನ್ನೂ ಉಂಟು ಮಾಡಲು ಪ್ರಯತ್ನಿಸಿದಳು. ಮುಂದೆ ಪುಣೆಗೆ ಬಂದಾಗ ದಾದಾಜಿ ಕೋಂಡ ದೇವನು ಶಿವಾಜಿಯ ಗುರುವಾಗಿ ಯುದ್ಧವಿದ್ಯೆಯನ್ನೂ ರಾಜನೀತಿಯನ್ನೂ ಕಲಿಸಿದನು.

ಕೊಂಢಾಣೆಯು ಮರಾಠರ ವಶವಾದದ್ದು— ಕೊಂಢಾಣೆ ಕೋಟೆ ಯನ್ನು ಮೊಗಲರ ಕಡೆಯ ಉದಯಭಾನು ಎಂಬ ಸರದಾರನು ಕಾಯು ತ್ತಿದ್ದನು ಶಿವಾಜಿಯು ಅದನ್ನು ಗೆಲ್ಲುವ ಕೆಲಸವನ್ನು ತಾನಾಜಿಗೆ ಒಪ್ಪಿಸಿ ದನು. ಕೂಡಲೆ ತಾನಾಜಿಯು ಸುರಿತ ಮಾವಳೆ ಸೈನ್ಯದೊಂದಿಗೆ ಕೊಂಢಾ ಣೆಗೆ ಸಾಗಿ, ಉಡದ ಸಹಾಯದಿಂದ ಕೆಲವು ಜನರೊಂದಿಗೆ ಕೋಟೆಯ ಗೋಡೆಯನ್ನೇರಿ ಹೋದನು. ಮೊಗಲ–ಮರಾಠರಲ್ಲಿ ಘೋರ ಯುದ್ಧ ವಾಯಿತು. ತಾನಾಜಿಯೂ ಉದಯಭಾನುವೂ ಪರಸ್ಪರರ ಹೊಡೆತಗಳಿಂದ ಹತರಾದರು. ಅಷ್ಟರಲ್ಲಿ ತಾನಾಜಿಯ ತಮ್ಮನಾದ ಸೂರ್ಯಾಜಿಯು ತನ್ನವ ರನ್ನು ಹುರಿದುಂಬಿಸಿ ಶೌರ್ಯದಿಂದ ಕಾದಿ ಕೋಟೆಯನ್ನು ಗೆದ್ದುಕೊಂಡನು. ಸಿಂಹನಂಥ ತಾನಾಜಿಯನ್ನು ಕಳೆದುಕೊಂಡದ್ದಕ್ಕೆ ಶಿವಾಜಿಯು ಮಿಡುಕಿ ಅವನಿಗಾಗಿ ಆ ಕೋಟೆಗೆ ಸಿಂಹಗಡ ಎಂಬ ಹೆಸರನ್ನಿಟ್ಟನು.

**ಶಿವಾಜಿಯ ರಾಜ್ಯಪದ್ಧತಿ**— ಇವನು ರಾಜ್ಯಕಾರಭಾರದ ಅನು ಕೂಲತೆಗಾಗಿ ಎಂಟು ಖಾತೆಗಳನ್ನು ಉಂಟುಮಾಡಿದ್ದನು. ಈ ಅಧಿಕಾರಿ ಗಳು ತಮ್ಮ ತಮ್ಮ ಖಾತೆಗಳ ಕಾರಭಾರವನ್ನು ಸ್ವತಂತ್ರವಾಗಿ, ಸಾಗಿಸಿ ಛತ್ರ

ಪತಿಯ ಮೇಲ್ವಿಚಾರಣೆಗೆ ಒಳಗಾಗಿದ್ದರು. ಈ ಎಂಟು ಜನ ಮುಖ್ಯಾಧಿಕಾರಿಗಳಿಗೆ ಅಷ್ಟಪ್ರಧಾನರೆಂಬ ಸಂಜ್ಞೆ.

## ಅಷ್ಟಪ್ರಧಾನರೂ ಅವರ ಕೆಲಸಗಳೂ

| ಪ್ರಧಾನರು | ಪ್ರಧಾನರ ಕೆಲಸಗಳು |
|---|---|
| ೧. ಪಂತಪ್ರಧಾನ (ಪೇಶವೆ) | ಮುಖ್ಯ ಮಂತ್ರಿಯ ಕೆಲಸ, ಅರಸನಿಲ್ಲದಾಗ ಅವನ ಕೆಲಸ ಸಾಗಿಸುವದು. |
| ೨. ಪಂತ ಅಮಾತ್ಯ | ಹಣವನ್ನೆತ್ತುವದು, ಲೆಕ್ಕವನ್ನಿಡುವದು. |
| ೩. ಪಂತಸಚಿವ | ಕಾಗದ ಪತ್ರಗಳನ್ನು ಕಾಯ್ದಿಡುವದು. |
| ೪. ಮಂತ್ರಿ | ಅರಸನ ಸ್ವಂತಪಕಾರಭಾರ |
| ೫. ಸೇನಾಪತಿ | ಸೈನ್ಯದ ವ್ಯವಸ್ಥೆ |
| ೬. ಸುಮಂತ | ಪರರಾಜ್ಯ ವ್ಯವಹಾರ |
| ೭. ನ್ಯಾಯಾಧೀಶ | ನ್ಯಾಯಖಾತೆಯ ಕೊನೆಯ ನಿರ್ಣಯ ಕೊಡುವದು. |
| ೮. ಪಂಡಿತರಾವ | ಧರ್ಮಖಾತೆಯನ್ನು ನಡೆಸುವದು. |

ಈ ಪ್ರಧಾನರೆಲ್ಲ ಒಳ್ಳೆಯ ಯೋಗ್ಯತೆಯವರಾಗಿದ್ದರು. ಕಡೆಯ ಇಬ್ಬರನ್ನು ಬಿಟ್ಟು ಉಳಿದವರು ಯುದ್ಧಕಲೆಯಲ್ಲಿ ಬಲ್ಲಿದರಾಗಿದ್ದರು. ಶಿವಾಜಿಯು ಜಹಗೀರಿನ ಪದ್ಧತಿಯನ್ನು ನಿಲ್ಲಿಸಿ, ಕೆಲಸಗಾರರಿಗೆ ಸಂಬಳವನ್ನು ಗೊತ್ತು ಮಾಡಿ ಅದನ್ನು ಹೊತ್ತಿಗೆ ಸರಿಯಾಗಿ ಮುಟ್ಟಿಸುವನು.

ಭೂಮಿಯ ತೆರಿಗೆಯು ಉತ್ಪನ್ನದ ಎರಡಯ್ದನೆಯ ಅಂಶವಷ್ಟು ಗೊತ್ತಾಗಿದ್ದಿತು. ಒಕ್ಕಲಿಗರ ಹಿತದ ಕಡೆಗೆ ವಿಶೇಷ ಲಕ್ಷವಿದ್ದಿತು. ನ್ಯಾಯ ನಿರ್ಣಯವು ಪಂಚಾಯತಿಯ ಪದ್ಧತಿಯಿಂದ ನಡೆಯುತ್ತಿದ್ದಿತು. ಎಲ್ಲರೂ ತಮ್ಮ ತಮ್ಮ ಧರ್ಮದಂತೆ ನಡೆಯಲು ಅನುಕೂಲತೆ ಇದ್ದಿತು.

**ಶಿವಾಜಿಯ ಗುಣ-ಶೀಲ-ಯೋಗ್ಯತೆ**— ಶಿವಾಜಿಯ ಕಡು ಹಗೆಯಾದ ಔರಂಗಜೇಬನು— "ಶಿವಾಜಿಯು ಹೆಸರಾದ ವೀರನು. ನಾನು ಒಂದೊಂದಾಗಿ ಹಳೆಯ ರಾಜ್ಯಗಳನ್ನು ಮುರಿಯುತ್ತಿರುವಾಗ ಇವನು ಹೊಸ ರಾಜ್ಯಸ್ಥಾಪನೆಯ ಘನಕಾರ್ಯವನ್ನು ನೆರವೇರಿಸಿದನು. ಈಗ ಹತ್ತೊಂಬತ್ತು ವರ್ಷಗಳ ವರೆಗೆ ನಾನು ಇವನೊಡನೆ ಕಾದುತ್ತಿದ್ದರೂ ಇವನ ರಾಜ್ಯವು ಹಬ್ಬುತ್ತಲೆ ನಡೆದಿದೆ. ಸಂಕಟ ಪ್ರಸಂಗಗಳಲ್ಲಿ ಇವನೆಂದೂ ಎದೆಗುಂದಲಿಲ್ಲ"

ಎಂದಿರುವನು. ಇವನು ಪ್ರಸಂಗಾವಧಾನಿಯು. ಯುದ್ಧವನ್ನು ತಪ್ಪಿಸಿಯೇ ಕೆಲಸ ಸಾಧಿಸಲು ಮೊದಲು ಯತ್ನಿಸುವನು. ಮೀರಿದ ಪ್ರಸಂಗದಲ್ಲಿ ಮಲೆತ ಶತ್ರುಗಳನ್ನು ಹಣಿಯಲು ಹಿಂಜರಿಯುತ್ತಿರಲಿಲ್ಲ. ಶಿವಾಜಿಯು ಶುದ್ಧಾಚರಣಿಯೆಂದು ಅವನ ಹಗೆಗಳು ಸಹ ಒಪ್ಪುವರು. ಅವನು ಸ್ವಧರ್ಮದ ಅಭಿಮಾನಿಯಾಗಿದ್ದಂತೆ ಪರಧರ್ಮ ಸಹಿಷ್ಣುವೂ ಆಗಿದ್ದನು. ದೇವಭಕ್ತನೂ ಗುರು-ಹಿರಿಯರನ್ನು ಮನ್ನಿಸುವವನೂ ಆಗಿದ್ದನು.

**ಪ್ರ. :— ಮೊದಲನೆಯ ಪೇಶ್ವೆಯಾದ ಬಾಳಾಜಿಯು ಮೊಗಲ ಬಾದಶಹನೊಡನೆ ಮಾಡಿಕೊಂಡ ಒಪ್ಪಂದದ ಸ್ವರೂಪವನ್ನೂ ಅದರ ಪರಿಣಾಮವನ್ನೂ ವಿವರಿಸಿ, ಬಾಳಾಜಿಯ ಯೋಗ್ಯತೆಯ ಬಗೆಗೆ ಟಿಪ್ಪಣೆ ಬರೆಯಿರಿ.**

**ಉ. :** — ಮರಾಠ-ಮೊಗಲರ ಒಪ್ಪಂದದ ಸ್ವರೂಪ— (೧) ಶಾಹೂ ರಾಜನು ಮರಾಠರ ರಾಜ್ಯದ ಒಡೆಯನೆಂದು ಮೊಗಲರು ಒಪ್ಪಿಕೊಳ್ಳಬೇಕು. (೨) ಮೊಗಲರ ದಕ್ಷಿಣದ ಸುಭೆಗಳಲ್ಲಿ ಚೌಥಾಯಿ-ಸರದೇಶಮುಖಿಗಳನ್ನೆತ್ತುವ ಅಧಿಕಾರವು ಮರಾಠರಿಗೆ ಇರಬೇಕು. (೩) ಮರಾಠರು ೧೫ ಸಾವಿರ ಸೈನ್ಯವನ್ನು ಮೊಗಲರ ನೆರವಿಗೆ ಇಡಬೇಕು. (೪) ದಕ್ಷಿಣದ ಮೊಗಲ-ಸುಭೆಗಳ ರಕ್ಷಣೆಯನ್ನು ಮರಾಠರೇ ಮಾಡಬೇಕು. (೫) ಮರಾಠರು ಪ್ರತಿವರ್ಷ ೧೦ ಲಕ್ಷ ರೂಪಾಯಿಗಳನ್ನು ಬಾದಶಹನಿಗೆ ಕೊಡಬೇಕು. (೬) ಯೇಸೂಬಾಯಿಯನ್ನು ಪರಿವಾರದೊಂದಿಗೆ ಬಿಡುಗಡೆ ಮಾಡಬೇಕು.

ಈ ಒಪ್ಪಂದದ ಪರಿಣಾಮ— ಮರಾಠರ ಅಧಿಕಾರವನ್ನು ಮೊಗಲರು ಒಪ್ಪಬೇಕಾಯಿತು. ಮೊಗಲರ ರಾಜ್ಯದಲ್ಲಿ ಚೌಥಾಯಿ-ಸರದೇಶಮುಖಿಗಳ ಮೂಲಕ ಬಂದ ಹಣದಿಂದಲೆ ಮರಾಠರ ಸೈನ್ಯದ ವೆಚ್ಚವು ಸಾಗಹತ್ತಿತು. ಬೇಕಾದಾಗ ಆ ಸೈನ್ಯವು ತಮಗೂ ಉಪಯೋಗಿಸಲು ಸಾಧ್ಯವಿದ್ದಿತು. ಮುಂದಿನ ಕಾಲದಲ್ಲಿ ವೆಲ್ಲಸ್ಲಿಯು ಕೈಕೊಂಡ ಸಹಾಯಕ ಸೈನ್ಯಪದ್ಧತಿಯೂ ಅದರ ಉದ್ದೇಶವೂ ಬಾಳಾಜಿಯ ಈ ಒಪ್ಪಂದದ ಸ್ವರೂಪವೂ ಇದರ ಉದ್ದೇಶವೂ ಒಂದೇಯಾಗಿರುವದೆಂದು ಸ್ಪಷ್ಟವಾಗುವದು.

**ಬಾಳಾಜಿಯ ಯೋಗ್ಯತೆ—** ಬಾಳಾಜಿಯು ಸಂಭಾಜಿಯ ಕಾಲದಿಂದ ರಾಜ್ಯದಲ್ಲಿ ಉಂಟಾಗಿದ್ದ ಅವ್ಯವಸ್ಥೆಯನ್ನು ಇಲ್ಲದಂತೆ ಮಾಡಿದನು. ಮರಾಠರ ರಾಜ್ಯವನ್ನು ಸ್ಥಿರಗೊಳಿಸಿ, ಬೆಳೆಸಿ ದಿಲ್ಲಿಯವರೆಗೆ ಮರಾಠರ ವರ್ಚ

ಸ್ಸನ್ನು ನೆಲೆಗೊಳಿಸಿದನು. ಇವನು ಛತ್ರಪತಿಯಲ್ಲಿ ಒಳ್ಳೆಯ ನಿಷ್ಠೆಯುಳ್ಳವ ನಿದ್ದನು.

ಪ್ರ. :— ಹಿರಿಯ ಬಾಜೀರಾಯನ ಕಾಲದಲ್ಲಿ ಹೆಸರುಗೊಂಡ ಸರದಾರರು ಯಾರು ಯಾರು ?

**ಉ.** :— (೧) ಮಲ್ಹಾರರಾವ ಹೋಳಕರ— ಇವನು ನೀರಾತೀರದ ಹೋಳ ಎಂಬ ಊರವನು. ಬಾಜೀರಾಯನ ಸೈನ್ಯದಲ್ಲಿ ಸೇರಿ ಖಾನದೇಶದಲ್ಲಿ ಶೂರತನದಿಂದ ಕಾದಿ ಪೇಶ್ವೆಯ ಪ್ರೀತಿಗೆ ಪಾತ್ರನಾದನು. ಆಗ ಪೇಶ್ವೆಯು ಇವನಿಗೆ ೫ ಸಾವಿರ ಕುದುರೆ ಸವಾರರ ಮೇಲೆ ಸರದಾರನನ್ನಾಗಿ ಮಾಡಿದನು. ಮುಂದೆ ಇಂದೂರು ಹೋಳಕರನ ರಾಜಧಾನಿಯಾಯಿತು.

(೨) ರಾಣೋಜಿ ಸಿಂಧೆ— ಇವನ ಪೂರ್ವಜರು ಸಾತಾರೆ ಜಿಲ್ಲೆಯ ಒಂದು ಊರ ಗೌಡರು. ಇವನು ಬಡವನಿದ್ದದರಿಂದ ಬಾಜೀರಾಯನಲ್ಲಿ ಕೆಲಸಕ್ಕೆ ನಿಂತನು. ಆದರೆ ಮುಂದೆ ಇವನ ಪ್ರಾಮಾಣಿಕತನವನ್ನು ಕಂಡು ಬಾಜೀರಾಯನು. ಇವನನ್ನು ದಂಡಿನಲ್ಲಿ ಸೇರಿಸಿ ಹೋಳಕರನೊಡನೆ ಉತ್ತರಕ್ಕೆ ಕಳುಹಿದನು ಮುಂದೆ ಗ್ವಾಲ್ಹೇರವು ಸಿಂಧೆಯ ರಾಜಧಾನಿಯಾಯಿತು.

ಇವರಲ್ಲದೆ ರಘೂಜಿ ಭೊಸಲೆ, ಪಿಲಾಜಿ ಗಾಯಕವಾಡ ಎಂಬ ಸರದಾರರು ನಾಗಪೂರ ಮತ್ತು ಬಡೋದೆಗಳಲ್ಲಿ ಇದ್ದು ಹೆಸರಿಗೆ ಬಂದರು. ಮತ್ತು ಕರ್ನಾಟಕದಲ್ಲಿ ಪಟವರ್ಧನ ಸರದಾರರು ಹೆಸರಿಗೆ ಬಂದರು.

ಪ್ರ. :— ೧ ನೆಯ ಬಾಜೀರಾಯನ ವಿಜಯಗಳನ್ನು ವಿವರಿಸಿರಿ.

**ಉ.** :— ಬಾಜೀರಾಯನು ಕ್ರಿ. ಶ. ೧೭೨೦ ರಲ್ಲಿ ಪೇಶವೆಯಾದ ಬಳಿಕ ತನ್ನ ತಮ್ಮನಾದ ಚಿಮಣಾಜಿಯ ಮತ್ತು ಖಂಡೇರಾವ ಮೊದಲಾದ ಸರದಾರರ ನೆರವಿನಿಂದ ತಂದೆಯಕಾಲದ ರಾಜ್ಯವಿಸ್ತಾರಗೊಳಿಸುವ ಕಾರ್ಯವನ್ನು ಒತ್ತರದಿಂದ ಸಾಗಿಸಿದನು. ಇವನು ಕ್ರಿ. ಶ. ೧೭೨೧–೧೭೨೪ ರ ವರೆಗೆ ಖಾನದೇಶದ ಮೇಲೆಯೂ ಕ್ರಿ. ಶ. ೧೭೨೭ ರಲ್ಲಿ ಕರ್ನಾಟಕದ ಮೇಲೆಯೂ ದಂಡೆತ್ತಿ ಹೋಗಿ ಅಲ್ಲಿ ಚೌಥಾಯಿಯ ಅಧಿಕಾರವನ್ನು ದೊರಕಿಸಿದನು.

ನಿಜಾಮ ಉಲ್ಮುಲ್ಕನು ದಕ್ಷಿಣಕ್ಕೆ ಬಂದು ಸ್ವತಂತ್ರನಾಗಿ ಆಳಹತ್ತಿದನು. ಆಗ ದಿಲ್ಲಿಯ ಮಹಮ್ಮದಶಾಹನು ನಿಜಾಮನ ಮೇಲೆ ದಂಡು ಕಳುಹಿದನು. ಆಗ ನಿಜಾಮನು ಚೌಥಾಯಿ–ಸರದೇಶಮುಖಿ ಎಂಬ ಅಧಿಕಾರ

ಗಳನ್ನು ಪೇಶವೆಗೆ ಕೊಡಲೊಪ್ಪಿ ಅವನ ನೆರವಿನಿಂದ ಬಾದಶಹನ ಸೈನ್ಯವನ್ನು ಹಿಂದಕ್ಕಟ್ಟಿದನು. ಆದರೆ ನಿಜಾಮನು ಸಾಧಿಸಿದಾಗೆಲ್ಲ ಪೇಶವೆಗೆ ಕೊಟ್ಟ ಅಧಿಕಾರಗಳನ್ನು ಅಲ್ಲಗಳೆದು ಅವನನ್ನು ವಿರೋಧಿಸ ಹತ್ತಿದನು. ಇದಕ್ಕಾಗಿ ಪೇಶ್ವೆಯು ನಿಜಾಮನ ಮೇಲೆ ಸಾಗಿ ಪಾಲಖೇಡದಲ್ಲಿ ಅವನನ್ನು ಬಲವಾಗಿ ಮುತ್ತಿದನು. ನಿಜಾಮನು ಸೋತು ಒಪ್ಪಂದ ಮಾಡಿಕೊಂಡನು. ಇದರಿಂದ ಚೌಥಾಯಿ–ಸರದೇಶಮುಖಿಗಳೂ ಕೆಲವು ಕೋಟೆಗಳೂ ಮರಾಠರಿಗೆ ದೊರೆತವು

ಕ್ರಿ. ಶ. ೧೭೨೮ ರಲ್ಲಿ ಚಿಮಣಾಜಿಯು ಮಾಳವದ ಮೇಲೆ ಸಾಗಿ ಅಲ್ಲಿದ್ದ ಮೊಗಲ ಸುಭೇದಾರ ಗಿರಿಧರ ಬಹದ್ದೂರನನ್ನು ಸೋಲಿಸಿ ಬಾದಶಹನಿಂದ ಮಾಳವದ ಸನದನ್ನು ಪಡೆದನು.

ಬುಂದೇಲಖಂಡದ ಅರಸನಾದ ರಾಜಾ ಛತ್ರಸಾಲನ ಮೇಲೆ ಮೊಗಲ ಬಾದಶಹನು ಮಹಮ್ಮದಖಾನ ಬಂಗಷ ಎಂಬ ತನ್ನ ಸರದಾರನನ್ನು ಕಳಿಸಿದನು. ಛತ್ರಸಾಲನು ಬಾಜೀರಾಯನ ನೆರವು ಕೇಳಿದನು. ಆಗ ಬಾಜೀರಾಯನು ಅವನ ನೆರವಿಗೆ ಹೋಗಿ ಜೈತಪುರದ ಹತ್ತಿರ ಮೊಗಲರನ್ನು ಸೋಲಿಸಿದನು. ಛತ್ರಸಾಲನು ಸಂತುಷ್ಟನಾಗಿ ಝಾಂಸಿಯ ನೆರೆಯ ೫೦ ಲಕ್ಷದ ಸೀಮೆಯನ್ನು ಬಾಜೀರಾಯನಿಗೆ ಕೊಟ್ಟನು.

ದಾಭಾಡೆ ಖಂಡೇರಾಯನ ನಂತರ ಅವನ ಮಗ ತ್ರ್ಯಂಬಕರಾಯನು ಖಾನದೇಶದ ಸರದಾರನಾದನು. ಆದರೆ ಅವನು ಪೇಶವೆಯನ್ನು ಅಲಕ್ಷಿಸಿ ಸ್ವತಂತ್ರನಾಗಿ ಆಳಹತ್ತಿದನು. ಆಗ ಬಾಜೀರಾಯನು ಅವನನ್ನು ಇದಿರಿಸಿ ಡಭಯಿ ಎಂಬಲ್ಲಿ ಸೋಲಿಸಿದನು. ತ್ರ್ಯಂಬಕರಾಯನು ಮಡಿದನು. ಆಗ ಅವನ ತಮ್ಮನಾದ ಯಶವಂತರಾಯನು ಸರದಾರನಾದನು. ಈ ಸಂಗತಿ ಶಾಹುರಾಜನಿಗೆ ತಿಳಿಯಲು ಅವನು '' ಗುಜರಾಥದ ಉತ್ಪನ್ನವನ್ನು ದಾಭಾಡೆ ಮತ್ತು ಬಾಜೀರಾಯ ಇವರು ಸರಿಯಾಗಿ ಹಂಚಿಕೊಳ್ಳಬೇಕೆಂದು ಗೊತ್ತು ಮಾಡಿ ಅವರನ್ನು ಸಮಾಧಾನ ಪಡಿಸಿದನು.

ಕ್ರಿ. ಶ. ೧೭೩೬ ರಿಂದ ಕ್ರಿ. ಶ. ೧೭೩೯ ರ ವರೆಗೆ ಬಾಜೀರಾಯನು ಜಂಜಿರೆಯ ಸಿದ್ದಿಯ ಮೇಲೆ ದಾಳಿ ಮಾಡಿದನು. ಆಗ ಸಿದ್ದಿಯು ಒಪ್ಪಂದ ಮಾಡಿಕೊಂಡು ಮರಾಠರ ಮಾಂಡಲಿಕನಾದನು.

ಬಳಿಕ ಬಾಜೀರಾಯನು ಚಿಮಣಾಜಿಯನ್ನು ಪೋರ್ತುಗೀಜರ ಕಡೆಗೆ ಸಾಗಿಸಿ, ತಾನು ದಿಲ್ಲಿಯ ಕಡೆಗೆ ಹೊರಟನು. ಚಿಮಣಾಜಿಯು ವಸಯಿ ಕೋಟೆಯನ್ನೂ ಪೋರ್ತುಗೀಜರ ಕೆಲವು ಠಾಣ್ಯಗಳನ್ನೂ ತೆಗೆದುಕೊಳ್ಳಲು ಅವರು ಆ ಭಾಗವನ್ನೇ ಬಿಟ್ಟು ಹೋದರು.

ಬಾಜೀರಾಯನು ದಿಲ್ಲಿಯ ಕಡೆಗೆ ಹೊರಟನು. ಸಿಂದೆ–ಹೋಳಕರರ ನೆರವಿನಿಂದ ಬಾದಶಹನ ಸೈನ್ಯವನ್ನು ಸೋಲಿಸಲು ಬಾದಶಹನು ೧೫ ಲಕ್ಷ ರೂಪಾಯಿಗಳನ್ನು ಕೊಟ್ಟು ಅವನನ್ನು ಸಮಾಧಾನ ಪಡಿಸಿದನು. ಬಾಜೀರಾಯನು ದಿಲ್ಲಿಯ ಕಡೆಗೆ ಸಾಗಿದ ಸುದ್ದಿಯು ನಿಜಾಮನಿಗೆ ತಿಳಿಯಲು, ಅವನು ಬಾದಶಹನ ಸಹಾಯಕ್ಕೆಂದು ಉತ್ತರಕ್ಕೆ ಸಾಗಿ ಬಂದನು. ಆದರೆ ಬಾಜೀರಾಯನು ಅವನನ್ನು ಭೋಪಾಳದ ಹತ್ತಿರ ತರುಬಿ ಪೂರಾ ಸೋಲಿಸಿದನು. ಕ್ರಿ. ಶ. ೧೭೩೮. ಈ ರೀತಿ ಚಂಬಳಾ ನದಿಯಿಂದ ನರ್ಮದೆಯ ವರೆಗೆ ಇರುವ ಪ್ರದೇಶವನ್ನು ಗೆದ್ದುಕೊಂಡು ಬಾಜೀರಾಯನು ದಕ್ಷಿಣಕ್ಕೆ ಬಂದನು. ಹೀಗೆ ಕೊನೆಯ ವರೆಗೆ ಬಾಜೀರಾಯನ ವಿಜಯ ಪರಂಪರೆಯು ಸರಿಯಾಗಿ ಸಾಗಿತು. ಕ್ರಿ. ಶ. ೧೭೪೦ ರಲ್ಲಿ ಇವನು ಮರಣಹೊಂದಿದನು.

**ಪ್ರ. :— ನಾದಿರಶಹನು ಯಾರು ? ಅವನು ಯಾವಾಗ ಈ ದೇಶದ ಮೇಲೆ ಬಂದಿದ್ದನು ? ಅವನು ಮಾಡಿದ ದಾಳಿಯ ಬಗೆಗೆ ವಿವರಣೆ ಬರೆಯಿರಿ.**

**ಉ. :**— ನಾದಿರಶಹನು ಇರಾಣದ ಅರಸನು. ಇವನು ಕ್ರಿ. ಶ. ೧೭೩೯ ರಲ್ಲಿ ಈ ದೇಶದ ಮೇಲೆ ದಾಳಿ ಮಾಡಿದನು.

ನಾದಿರಶಹನ ದಾಳಿ— ಈ ಶಹನಿಗೂ ದಿಲ್ಲಿಯ ಮಹಮ್ಮದಶಹನಿಗೂ ಮನಸ್ತಾಪವುಂಟಾದ ನೆವದಿಂದ ಇವನು ಕಾಬೂಲ, ಗಝನಿಗಳನ್ನು ಕೈವಶ ಮಾಡಿಕೊಂಡು ಹಿಂದುಸ್ಥಾನದ ಮೇಲೆ ಸಾಗಿ ಬಂದನು. ಬಳಿಕ ಪಂಜಾಬ ಪ್ರಾಂತವನ್ನು ಆಕ್ರಮಿಸಿ ಕರ್ನಾಲದ ಬಳಿಯಲ್ಲಿ ಮೊಗಲ ಸೈನ್ಯವನ್ನು ಸೋಲಿಸಿದನು. ಬಳಿಕ ದಿಲ್ಲಿಯನ್ನು ಸೇರಿ ಬಾದಶಹನನ್ನು ಸೆರೆಹಿಡಿದು ಐದು ದಿನಗಳ ತನಕ ಮನಬಂದಂತೆ ಜನರ ಕೊಲೆ ಮಾಡಿದ ಬಳಿಕ ಮಯೂರಾಸನವನ್ನೂ ಕೋಹಿನೂರ ರತ್ನವನ್ನೂ ೫೫–೩೦ ಕೋಟಿ ರೂಪಾಯಿಗಳನ್ನೂ ಸೆಳೆದುಕೊಂಡು ತನ್ನ ದೇಶಕ್ಕೆ ಹೋದನು. ಈ ದಾಳಿಯಿಂದ ಮೊಗಲರ ಅಧಿಕಾರವು ಕಡಿಮೆಯಾಯಿತು. ಸಿಂಧುನದದ ಆಚೆಯ ಪ್ರದೇಶವು ಇರಾಣದ ರಾಜ್ಯವನ್ನು ಸೇರಿತು. ಪಂಜಾಬದಲ್ಲಿ ಸೀಖರೂ ರೋಹಿಲಖಂಡದಲ್ಲಿ

ರೋಹಿಲರೂ ಅಯೋಧ್ಯೆ–ಬಂಗಾಲಗಳಲ್ಲಿ ನವಾಬರೂ ದಕ್ಷಿಣದಲ್ಲಿ ಮರಾಠರೂ ಬಲಿಷ್ಠರಾದರು.

**ಪ್ರ. :— ೧೭೬೧ ರಲ್ಲಾದ ಪಾನಿಪತ್ತದ ಯುದ್ಧದ ಪರಿಣಾಮಗಳಾವವು ?**

**ಉ. :—** ದಕ್ಷಿಣದಲ್ಲಿಯ ಸುಮಾರು ಒಂದುವರೆ ಲಕ್ಷ ಸೈನಿಕರು ಈ ಪಾನಿಪತ್ತದ ಮೂರನೆಯ ಯುದ್ಧದಲ್ಲಿ ಮಡಿದದರಿಂದ ಮುಂದಿನ ಕಾಲದಲ್ಲಿ ಕರ್ತೃತ್ವಶಾಲಿಗಳ ಕೊರತೆಯೆನಿಸಿತು. ಮರಾಠರ ಸಾಮ್ರಾಜ್ಯವು ಭರದಿಂದ ಬೆಳೆಯುತ್ತಿರುವ ಕಾಲದಲ್ಲಿಯೇ ಈ ಪೆಟ್ಟು ಬಡಿದದರಿಂದ ಅದು ಕಳೆಗುಂದಿತು. ಅಬದಾಲಿಯು ಪಾರಾಗಿ ಹೋಗಬೇಕಾದರೆ ಕಷ್ಟವಾಯಿತು; ಆದದರಿಂದ ಅವನು ಈ ದೇಶದ ಗೊಡವೆಯನ್ನು ಬಿಟ್ಟು ಹೊರಟು ಹೋದನು. ದಿಲ್ಲಿಯ ಸಾಮ್ರಾಜ್ಯವೂ ತೀರ ಬಲಗುಂದಿತು. ಮರಾಠರೂ ಮುಸಲ್ಮಾನರೂ ಕಾದಿ ಕಾದಿ ಹಣ್ಣಾದ ಈ ಸಮಯದಲ್ಲಿ ಇಂಗ್ಲಿಷರು ಫ್ರೆಂಚರನ್ನು ಪೂರ್ಣವಾಗಿ ಸೋಲಿಸಿ ಪ್ರಬಲರಾದರು. ಅವರ ರಾಜ್ಯಸ್ಥಾಪನೆಗೆ ಅನಾಯಾಸವಾಗಿ ಇಂಬು ದೊರೆಯಿತು.

**ಪ್ರ. :— ಮಾಧವರಾಯ ಪೇಶವೆಯ ಆಳಿಕೆಯ ಬಗೆಗೆ ವಿವರಣೆ ಕೊಡಿರಿ.**

**ಉ. :—** ಮಾಧವರಾಯ ಪೇಶವೆ (ಕ್ರಿ. ಶ. ೧೭೬೧ – ೧೭೭೨) ಇವನು ಬಾಳಾಜಿ ಬಾಜೀರಾಯನ ತರುವಾಯ ಪೇಶವೆಯಾದನು. ಆಗ ಇವನು ೧೬ ವರ್ಷದವನಿದ್ದನು. ಆದುದರಿಂದ ಕಾರಭಾರವನ್ನು ರಘುನಾಥರಾಯನು ಸಾಗಿಸಹತ್ತಿದನು. ರಘುನಾಥರಾಯನು ಪರಾಕ್ರಮಿಯಾಗಿದ್ದರೂ ದುರಭಿಮಾನಿಯೂ ಚಂಚಲನೂ ಆಗಿದ್ದನು. ಇಂಥವನು ಕಾರಭಾರ ಸಾಗಿಸುವದು ಹಲವು ಮುತ್ಸದ್ದಿಗಳ ಮನಸ್ಸಿಗೆ ಬರಲಿಲ್ಲ.

ಪಾನೀಪತ್ತದ ಸೋಲಿನ ನಂತರ ಪೇಶವೆಯರ ಹಗೆಗಳು ಮೀರಿನಿಂತರು. ನಿಜಾಮನು ಉದಯಗಿರಿಯ ಕಾಳಗದ ನಂತರ ಕೊಡಲೊಪ್ಪಿದ ಸೀಮೆಯನ್ನು ಕೊಡಲಿಲ್ಲ. ಮಾಳವದ ಆಚೆಗೆ ಪೇಶವೆಯ ಅಧಿಕಾರ ಕಟ್ಟಾಯಿತು. ರೋಹಿಲರು, ಜಾಟನು ಪ್ರಬಲಾದರು. ಜಾನೋಜಿ ಭೋಸಲೆಯು ನಿಜಾಮನೊಡನೆ ಒಳಸಂಚು ನಡೆಸಿದನು. ಆನಂದೀಬಾಯಿಯ ಒತ್ತಾಯದಿಂದ ರಘುನಾಥರಾಯ–ಮಾಧವರಾಯರಲ್ಲಿ ದ್ವೇಷ–ಅಸೂಯೆಗಳು ನೆಲೆಸಿದವು. ನಾನಾ ಫಡಣವೀಸ, ತ್ರ್ಯಂಬಕರಾಯ, ಹರಿಪಂತ ಮೊದಲಾದ ಮುತ್ಸದ್ದಿಗಳು

ರಘುನಾಥರಾಯನನ್ನು ಅಧಿಕಾರದಿಂದ ಬಿಡಿಸಬೇಕೆಂದು ಎಣಿಕೆಯಲ್ಲಿದ್ದರು. ಹೀಗಿರುವಾಗ ಕ್ರಿ. ಶ. ೧೭೬೩ ರಲ್ಲಿ ನಿಜಾಮನು ತನ್ನ ಬಲವನ್ನು ಹೆಚ್ಚಿಸಿ ಕೊಂಡು ಮರಾಠರನ್ನು ಮುರಿಯುವ ಪ್ರಯತ್ನದಲ್ಲಿದ್ದನು. ಆಗ ಪೇಶವೆಯು ಹೋಳಕರನಿಗೆ ೧೦ ಲಕ್ಷದ ಹೊಸ ಜಹಗೀರನ್ನು ಕೊಟ್ಟು ನೆರವಿಗೆ ಕರೆದು ಕೊಂಡನು. ನಿಜಾಮನೊಡನೆ ಇದ್ದ ಭೋಸಲೆಯನ್ನು ತನ್ನ ಕಡೆಗೆ ಮಾಡಿ ಕೊಂಡು ಅವನಿಗೆ ೩೨ ಲಕ್ಷದ ಸೀಮೆಯನ್ನು ಕೊಟ್ಟನು ಬಳಿಕ ರಘುನಾಥ ರಾಯನು ನಿಜಾಮನ ಮೇಲೆ ಸಾಗಿ ಅವನನ್ನು ರಾಕ್ಷಸಭುವನ ಎಂಬಲ್ಲಿ ಪೂರ್ಣವಾಗಿ ಸೋಲಿಸಿದನು. ಆಗ ನಿಜಾಮನು ೮೨ ಲಕ್ಷದ ಸೀಮೆಯನ್ನು ಕೊಟ್ಟು ಒಪ್ಪಂದ ಮಾಡಿಕೊಂಡನು. ಈ ಯುದ್ಧದ ನಂತರ ರಘುನಾಥ ರಾಯನು ಕಾರಭಾರವನ್ನು ಬಿಟ್ಟುಕೊಟ್ಟು ನಾಶಿಕದಲ್ಲಿರಹತ್ತಿದನು.

ಮೈಸೂರು ಪಟ್ಟಣವನ್ನು ಹಿಡಿದುಕೊಂಡ ಬಳಿಕ ಹೈದರನು ಪ್ರಬಲ ನಾಗಿ ತುಂಗಭದ್ರೆಯ ಉತ್ತರಕ್ಕೆ ಧಾರವಾಡದ ವರೆಗೆ ಸೀಮೆಯನ್ನು ತೆಗೆದು ಕೊಂಡನು. ಕ್ರಿ. ಶ. ೧೭೬೪ ರಲ್ಲಿ ಮಾಧವರಾಯನು ಹೈದರನನ್ನು ಸೋಲಿಸಿ, ಅವನಿಂದ ಕೃಷ್ಣಾ–ತುಂಗಭದ್ರೆಗಳ ನಡುವಿನ ಸೀಮೆಯನ್ನೂ ೩೩ ಲಕ್ಷ ರೂಪಾಯಿಗಳನ್ನೂ ತೆಗೆದುಕೊಂಡು ಒಪ್ಪಂದ ಮಾಡಿಕೊಂಡನು.

ರಘುನಾಥರಾಯನು ಸಿಟ್ಟಾಗಿ ಸೈನ್ಯವನ್ನು ಕೂಡಿಸಹತ್ತಿದನು. ನೆರವಿಗೆ ಭೋಸಲೆ–ಗಾಯಕವಾಡರನ್ನು ಕರೆದನು, ಅವರೂ ಒಪ್ಪಿದರು. ಈ ಸುದ್ದಿ ತಿಳಿದಕೂಡಲೆ ಮಾಧವರಾಯನು ರಘುನಾಥರಾಯನನ್ನು ಮುತ್ತಿ ನೆರೆಹಿಡಿದು ಪುಣೆಯಲ್ಲಿ ಅರಮನೆಯಲ್ಲಿ ಕಾವಲಿನಲ್ಲಿಟ್ಟನು. ಬಳಿಕ ಭೋಸಲೆ–ಗಾಯಕ ವಾಡರನ್ನು ದಣಿಸಿ ತನ್ನ ಹೇಳಿಕೆಯಂತೆ ನಡೆಯ ಹಚ್ಚಿದನು.

ಹೈದರನು ಮೂರು ನಾಲ್ಕು ವರ್ಷಗಳ ವರೆಗೆ ಮರಾಠರನ್ನು ತಡೆ ಯುವ ಸಿದ್ಧತೆಯನ್ನು ನಡೆಸಿದ್ದನು. ಮಾಧವರಾಯನು ಇದನ್ನು ತಿಳಿದು ತಾನೇ ಮೈಸೂರ ರಾಜ್ಯವನ್ನು ಹೊಕ್ಕು ಒಂದರ ಹಿಂದೊಂದು ಸೀಮೆಗಳನ್ನು ವಶಮಾಡಿಕೊಳ್ಳುತ್ತ ಶ್ರೀರಂಗಪಟ್ಟಣದ ಕಡೆಗೆ ಸಾಗಿದನು. ಈ ಹೊತ್ತಿಗೆ ಕ್ರಿ. ಶ. ೧೭೭೦ ರಲ್ಲಿ ಮಾಧವರಾಯನಿಗೆ ಜಡ್ಡಾಯಿತು. ಅವನು ಯುದ್ಧದ ಹೊಣೆಯನ್ನು ತ್ರ್ಯಂಬಕರಾಯನಿಗೆ ಒಪ್ಪಿಸಿ ಪುಣೆಗೆ ಬಂದನು. ಅತ್ತ ತ್ರ್ಯಂಬಕರಾಯನಿಗೂ ಹೈದರನಿಗೂ ಯುದ್ಧವಾಯಿತು. ಇಷ್ಟಕ್ಕೆ ಹೈದರನು ಮಣಿಯಲಿಲ್ಲ. ಆದದರಿಂದ ತ್ರ್ಯಂಬಕರಾಯನು ಶ್ರೀರಂಗಪಟ್ಟಣಕ್ಕೆ ಮುತ್ತಿಗೆ

ಹಾಕಿದನು. ಆಗ ಹೈದರನು ಮರಾಠರೊಡನೆ ಒಪ್ಪಂದ ಮಾಡಿಕೊಂಡು ಮರಾಠರ ಸೀಮೆಗಳನ್ನು ಬಿಟ್ಟುಕೊಟ್ಟದ್ದಲ್ಲದೆ ಯುದ್ಧದ ವೆಚ್ಚವೆಂದು ೫೦ ಲಕ್ಷ ರೂಪಾಯಿಗಳನ್ನು ಕೊಟ್ಟನು. ಮತ್ತು ವರ್ಷಕ್ಕೆ ೧೪ ಲಕ್ಷ ರೂಪಾಯಿ ಕಪ್ಪನ್ನು ಕೊಡಲೊಪ್ಪಿದನು ಕ್ರಿ. ಶ ೧೭೭೨.

ಮಾಧವರಾಯನು ಉತ್ತರದ ದಿಗ್ವಿಜಯಕ್ಕಾಗಿ ರಾಮಚಂದ್ರಪಂತ ಮತ್ತು ವಿಸಾಜಿಪಂತ ಎಂಬ ಇಬ್ಬರು ಸೇನಾಪತಿಗಳನ್ನು ಕಳುಹಿದ್ದನು. ಇವರು ಸಿಂಧೆ-ಹೋಳಕರರ ನೆರವಿನಿಂದ ರಜಪೂತರಿಂದಲೂ ಜಾಟರಿಂದಲೂ ಕಪ್ಪನ್ನು ತೆಗೆದುಕೊಂಡರು. ಬಳಿಕ ಆಗ್ರಾಪ್ರಾಂತವನ್ನು ವಶಪಡಿಸಿಕೊಂಡು ಅಬ್ದಾಲಿಗೆ ನೆರವಾಗಿದ್ದ ನಜೀಬಖಾನನನ್ನು ಹಣ್ಣುಮಾಡಿ ಅವನನ್ನು ಕೂಡಿಕೊಂಡು ಅಂತರ್ವೇದಿಯ ಪಠಾಣರನ್ನೂ ಸೋಲಿಸಿದರು. ಆಮೇಲೆ ವಜೀರನ ರಕ್ಷಣೆಗೆ ಒಳಗಾಗಿದ್ದ ಶಹಾಲಮನನ್ನು ದಿಲ್ಲಿಗೆ ಕರೆದೊಯ್ದು ಪಟ್ಟಕ್ಕೆ ಕುಳ್ಳಿರಿಸಿದರು. ಮತ್ತೆ ದಿಲ್ಲಿಯ ಸೂತ್ರಗಳೆಲ್ಲ ಮರಾಠರ ವಶವಾದವು. ರೋಹಿಲರು ಪಾನಿಪತ್ತ ದಲ್ಲಿ ಸುಲಿದುಕೊಂಡಿದ್ದ ಮರಾಠರ ಸಂಪತ್ತನ್ನು ಇವರು ಮರಳಿ ಕಸಿದು ಕೊಂಡರು. ಇಷ್ಟರಲ್ಲಿ ಮಾಧವರಾಯನು ಮರಣಹೊಂದಿದ ಸುದ್ದಿಯು ಬಂದದರಿಂದ ದಕ್ಷಿಣಕ್ಕೆ ತಿರುಗಿ ಬಂದರು. ಕ್ರಿ. ಶ. ೧೭೭೨.

ಮಾಧವರಾಯನು ಸಾಯುವ ಮೊದಲು ರಘುನಾಥರಾಯನನ್ನು ಬಿಡುಗಡೆ ಮಾಡಿ " ನೀವು ನಾರಾಯಣರಾಯನನ್ನು ಪೇಶವೆಯನ್ನು ಮಾಡಿ ನಾನಾ—ಬಾಪೂ ಇವರ ನೆರವಿನಿಂದ ಕಾರಭಾರವನ್ನು ಸಾಗಿಸಬೇಕು;" ಎಂದು ಹೇಳಿ ಅವನಿಂದ ವಚನ ತಕ್ಕೊಂಡಿದ್ದನು.

ಮಾಧವರಾಯನು ಶೂರನೂ ಚತುರನೂ ಸದಾಚರಣಿಯೂ ಆಗಿ ದ್ದನು. ಮನೆಜಗಳಗಳನ್ನು ಯುಕ್ತಿಯಿಂದ ಹತ್ತಿಕ್ಕಿ ರಾಜ್ಯವನ್ನು ಭದ್ರಪಡಿಸಿ ಮರಾಠರ ಸಾಮ್ರಾಜ್ಯಕ್ಕೆ ಪಾನಿಪತ್ತದ ಮೊದಲಿನ ಸುಸ್ಥಿತಿಯನ್ನು ಉಂಟು ಮಾಡಿದನು.

**ಪ್ರ. :— ರಘುನಾಥರಾಯನು ಪೇಶವೆಯಾಗಬೇಕೆಂದು ಯಾವ ಯಾವ ಸಾಹಸಗಳನ್ನು ಮಾಡಿದನು ? ಅದರ ಪರಿಣಾಮವೇನಾಯಿತು ?**

**ಉ. :**— ಮಾಧವರಾಯನ ತರುವಾಯ ನಾರಾಯಣರಾಯನು ಪೇಶವೆಯಾದನು. ಅವನು ಚಿಕ್ಕವನಿದ್ದದರಿಂದ ರಘುನಾಥರಾಯನೇ ಕಾರ ಭಾರವನ್ನು ಸಾಗಮಾಡಿದನು. ಆದರೆ ರಘುನಾಥರಾಯನ ಹೆಂಡತಿ ಆನಂದೀ

ಬಾಯಿಯ ಮನಸ್ಸಿಗೆ ಇದು ಸರಿಬರಲಿಲ್ಲ. ಆಕೆಯು ರಘುನಾಥರಾಯನೇ ಪೇಶವೆಯಾಗಬೇಕೆಂದು ಹಟಹಿಡಿದಳು. ಮುತ್ಸದ್ದಿಗಳಲ್ಲಿ ಸಖಾರಾಮ ಬಾಪು ಚಿಂತೋ ವಿಠ್ಠಲ ಇವರು ರಘುನಾಥರಾಯನ ಪಕ್ಷ ವಹಿಸಿದರು. ರಘುನಾಥ ರಾಯನು ಹೈದರ-ನಿಜಾಮರೊಡನೆ ಒಳಸಂಚು ನಡೆಸಿದನು. ಇದನ್ನು ತಿಳಿದು ನಾರಾಯಣರಾಯನು ರಘುನಾಥರಾಯನನ್ನು ಸೆರೆಯಲ್ಲಿಟ್ಟನು. ಸಖಾರಾಮ ಬಾಪೂ ಮೊದಲಾದವರು ರಘುನಾಥರಾಯನನ್ನು ಬಿಡಿಸಿಕೊಂಡು ನಾರಾ ಯಣರಾಯನನ್ನು ಸೆರೆಹಿಡಿಯುವ ಹಂಚಿಕೆ ಹಾಕಿದರು. ಮತ್ತು ೫ ಲಕ್ಷ ರೂಪಾಯಿಗಳ ಆಶೆಹಚ್ಚಿ ಸುಮೇರಸಿಂಗ ಮೊದಲಾದವರನ್ನು ಸಜ್ಜುಗೊಳಿಸಿ ದರು. ನಾರಾಯಣರಾಯನನ್ನು ಸೆರೆಹಿಡಿಯಬೇಕೆಂಬ ಹುಕುಮನ್ನು ರಘು ನಾಥರಾಯನಿಂದ ಬರೆಯಿಸಿದರು. ಆ ಹುಕುಮು ಮುಟ್ಟುವ ಮೊದಲು ಆನಂದಿಬಾಯಿಯು ಆ ಹುಕುಮಿನಲ್ಲಿಯ ಧರಾವೆ (ಹಿಡಿಯ ಬೇಕು) ಎಂಬ ಶಬ್ದದ ಸ್ಥಳದಲ್ಲಿ ಮಾರಾವೆ (ಹೊಡೆಯ ಬೇಕು) ಎಂಬ ಶಬ್ದವನ್ನು ಹಾಕಿಸಿ ದಳು. ಗಾರ್ದಿಗಳಿಗೆ "ನೀವು ಈ ಕೆಲಸವನ್ನು ಕಡೆಗಾಣಿಸಿರಿ; ನಿಮಗೆ ೫ ಲಕ್ಷ ರೂಪಾಯಿಗಳಲ್ಲದೆ ಸಾಸ್ಟಿ, ಪುರಂದರ, ಅಹಮದನಗರ ಈ ಮೂರು ಕೋಟೆಗಳನ್ನು ಕೊಡುವೆನು;" ಎಂದು ತಿಳಿಸಿದಳು. ಗಾರ್ದಿಗಳು ಅರಮನೆ ಯನ್ನು ಹೊಕ್ಕು ನಾರಾಯಣರಾಯನನ್ನು ಕಡಿದು ಹಾಕಿದರು! ಮನೆ ಜಗಳ ಹೊತ್ತಿತು!!

ರಘುನಾಥರಾಯನು ಪೇಶವೆಯಾಗಿ ಕಾರಭಾರ ಸಾಗಿಸಿದನು. ಆದರೂ ಜನರು "ಕೊಲೆಗಡಿಕ ಪೇಶವೆ" ಎಂದು ಆಡಿಕೊಳ್ಳುತ್ತಿರುವದನ್ನು ಕೇಳುತ್ತ ಪುಣೆಯಲ್ಲಿ ಇರುವದು ಅವನಿಗೆ ಬೇಡೆನಿಸಿತು. ಮನೆಜಗಳದ ಹೊತ್ತುಸಾಧಿಸಿ ನಿಜಾಮನೂ, ಹೈದರನೂ ಮರಾಠರ ಸೀಮೆಯನ್ನು ಆಕ್ರಮಿಸತೊಡಗಿದರು. ಅವರನ್ನು ಹಿಮ್ಮೆಟ್ಟಿಸುವ ನೆವದಿಂದ ರಘುನಾಥರಾಯನು ಪುಣೆಯಿಂದ ಹೊರಟು ಹೈದರನ ಮೇಲೆ ಸಾಗಿ ಹೋದನು.

ನಾರಾಯಣರಾಯನ ಕೊಲೆಯಾಗಲು ಅವನ ಪಕ್ಷದ ಜನರು ಕುದಿಯ ಹತ್ತಿದರು. ಸಖಾರಾಮ ಬಾಪುವು ರಘುನಾಥರಾಯನ ಕೃತಿಗೆ ಹೇಸಿ ಕೊಂಡು ನಾನಾಫಡಣವೀಸನ ಕಡೆಗೆ ಆದನು. ನಾನಾನು ಬಾಪುವಿಗೆ ಹಿರಿಯ ತನವನ್ನು ಒಪ್ಪಿಸಿ, ಹನ್ನೆರಡು ಜನ ಮುತ್ಸದ್ದಿಗಳು ಕೂಡಿ, ಛತ್ರಪತಿಯ ಒಪ್ಪಿಗೆ ಪಡೆದನು ರಘುನಾಥರಾಯನನ್ನು ಪೇಶವೆ ಪದದಿಂದ ತಳ್ಳಿ ನಾರಾಯಣ

ರಾಯನ ಹೆಂಡತಿ ಗಂಗೂಬಾಯಿಯ ಹೆಸರಿನಿಂದ ಕಾರಭಾರವನ್ನು ಸಾಗಿಸ ತೊಡಗಿದರು.

ಈ ಸುದ್ದಿ ಹತ್ತಲು ರಘುನಾಥರಾಯನು ಹೈದರನೊಡನೆ ಒಪ್ಪಂದ ಮಾಡಿಕೊಂಡು ಹಿಂದಿರುಗಿದನು. ಅವನ ಸೈನ್ಯಕ್ಕೂ ಬಾರಾಭಾಯಿಗಳ ಸೈನ್ಯಕ್ಕೂ ಪಂಢರಪುರದ ಬಳಿಯಲ್ಲಿ ಯುದ್ಧವಾಯಿತು. ಅದರಲ್ಲಿ ತ್ರ್ಯಂಬಕ ರಾಯನು ಹತನಾದನು. ಆದರೂ ರಘುನಾಧರಾಯನನ್ನು ಅವರು ಪುಣೆಯ ಕಡೆಗೆ ಬರಗೊಡಲಿಲ್ಲ. ಆಗ ಅವನು ಸಿಂಧೆ–ಹೋಳಕರರ ನೆರವಿನ ಆಶೆಯಿಂದ ಉತ್ತರಕ್ಕೆ ಹೋದನು. ಬಳವಂತರಾಯನು ರಘುನಾಥರಾಯನ ಬೆನ್ನು ಬಿಡ ಲಿಲ್ಲ. ಸಿಂಧೆ- ಹೋಳಕರರ ಸಹಾಯವೂ ಸಿಗಲಿಲ್ಲ; ಆಮೇಲೆ ಅವನು ಗುಜ ರಾಥದಲ್ಲಿ ಅತ್ತಿತ್ತ ಅಲೆದಾಡುತ್ತಿರುವಾಗ ಮಹೀನದಿಯ ತೀರದಲ್ಲಿ ಬಳವಂತ ರಾಯನು ಅವನನ್ನು ಪೂರ್ಣವಾಗಿ ಸೋಲಿಸಿಬಿಟ್ಟನು, ರಘುನಾಧರಾಯನು ಗತಿಯಿಲ್ಲದೆ ಇಂಗ್ಲೀಷರು ಸಹಾಯ ಮಾಡಬಹುದೆಂದು ಸುರತಕ್ಕೆ ಹೋದನು.

ಇತ್ತ ಗಂಗೂಬಾಯಿಯ ಹೆಸರಿನಿಂದ ನಡೆಯುತ್ತಿದ್ದ ಕಾರಭಾರವು ಮುಂದೆ ಬಾಲಪೇಶವೆಯಾದ ಸವಾಯಿ ಮಾಧವರಾಯನ ಹೆಸರಿನಿಂದ ಅವನ ಹುಟ್ಟಿದ ೪೦ ನೆಯ ದಿನದಿಂದ ನಡೆಯ ಹತ್ತಿತು.

ಅತ್ತ ರಘುನಾಥರಾಯನು ಸುರತಕ್ಕೆ ಹೋಗಿ ಇಂಗ್ಲಿಷರೊಡನೆ ಒಪ್ಪಂದ ಮಾಡಿಕೊಂಡನು. ರೆಗ್ಯೂಲೇಟಿಂಗ ಆಕ್ಟಿನಂತೆ ಮುಂಬಯಿ ಗವ್ಹರ್ನರನು ಕಲಕತ್ತೆಯ ಗವ್ಹರ್ನರ ಜನರಲನ ಒಪ್ಪಿಗೆಯಿಂದಲೆ ಯುದ್ಧವನ್ನಾಗಲಿ ಒಪ್ಪಂದವನ್ನಾಗಲಿ ಮಾಡಿಕೊಳ್ಳತಕ್ಕದ್ದು. ಆದರೆ ಅವನು ಸುರತದ ಈ ಒಪ್ಪಂದಕ್ಕೆ ಗ. ಜನರಲನ ಸಮ್ಮತಿ ಪಡೆದಿರಲಿಲ್ಲ ಆದದರಿಂದ ವಾರನ್ ಹೆಸ್ಟಿಂಗ್ಸನು ಮುಂಬಯಿಯ ಗವ್ಹರ್ನರನಿಗೆ ರಘುನಾಥರಾಯನ ಪಕ್ಷವನ್ನು ಬಿಡಬೇಕು; ಎಂದು ತಿಳಿಸಿ, ಆಪ್ಟನ್ ಎಂಬವನನ್ನು ಪುರಂದರಕ್ಕೆ ಕಳುಹಿ, ಪುಣೆಯ ದರಬಾರಿನೊಡನೆ ಒಪ್ಪಂದ ಮಾಡಿಕೊಂಡನು.

ಆದರೆ ಮುಂಬಯಿಯ ಗವ್ಹರ್ನರನು ರಘುನಾಥರಾಯನ ಪಕ್ಷವನ್ನು ಬಿಡಲಿಲ್ಲ. ತಾನು ಮಾಡಿಕೊಂಡ ಒಪ್ಪಂದಕ್ಕೆ ಇಂಗ್ಲಂಡ ಸರಕಾರದ ಒಪ್ಪಿಗೆ ಪಡೆದು ಅವನು ಯುದ್ಧವನ್ನು ಸಾಗಿಸಿದನು. ಸ್ಟುಅರ್ಟನು ಬೋರಘಟ್ಟದ ಮಾರ್ಗವಾಗಿ ಪುಣೆಯ ಕಡೆಗೆ ಸಾಗಿಬಂದನು. ಕಾರ್ಲೆಯ ಹತ್ತಿರ ಆದ ಯುದ್ಧದಲ್ಲಿ ಸ್ಟುಅರ್ಟನು ಹತನಾದನು. ಆದರೂ ಅವನ ಸೈನ್ಯವು ತಳೇಗಾಂ

ವದ ವರೆಗೆ ಸಾಗಿ ಬಂದಿತು. ಆದರೆ ಅಲ್ಲಿ ಅದನ್ನು ಮರಾಠರ ಸೈನ್ಯವು ಮುತ್ತಿದ್ದರಿಂದ ನಿರುಪಾಯರಾಗಿ ಇಂಗ್ಲಿಷರು ವಡಗಾಂವದಲ್ಲಿ ಒಪ್ಪಂದಮಾಡಿಕೊಂಡರು. ಈ ಒಪ್ಪಂದದಿಂದ (೧) ಇಂಗ್ಲಿಷರು ರಘುನಾಥರಾಯನನ್ನು ಮರಾಠರ ಕಡೆಗೆ ಒಪ್ಪಿಸಬೇಕು. (೨) ಸಾಷ್ಟಿಮುಂತಾದ ಎಲ್ಲ ಸ್ಥಾನಗಳನ್ನು ಬಿಟ್ಟುಕೊಡಬೇಕು. ಕಲಕತ್ತೆಯಿಂದ ಬರುತ್ತಿರುವ ಸೈನ್ಯವನ್ನು ಹಿಂದಿರುಗಿಸಬೇಕು. ಈ ಕರಾರುಗಳು ಪೂರ್ಣವಾಗುವ ವರೆಗೆ ಇಬ್ಬರು ಇಂಗ್ಲಿಷ ಅಧಿಕಾರಿಗಳನ್ನು ಮರಾಠರ ವಶಕ್ಕೆ ಕೊಡಬೇಕು.

ಈ ಒಪ್ಪಂದವನ್ನು ಇಂಗ್ಲಿಷರು ಪಾಲಿಸಲಿಲ್ಲ. ಆಗ ನಾನಾಫಡಣವೀಸನು ಹೈದರ ನಿಜಾಮರೊಡನೆ ಒಕ್ಕಟ್ಟು ಮಾಡಿಕೊಂಡು ಇಗ್ಲಿಷರಿಗೆ ಚೆನ್ನಾಗಿ ಕೈ ತೋರಿಸಬೇಕೆಂದು ನಿಶ್ಚಯಮಾಡಿದನು. ಹೈದರ–ನಿಜಾಮರು ಮದ್ರಾಸದ ಮೇಲೆ, ಸಿಂಧೆ–ಭೋಸಲೆಯವರು ಬಂಗಾಲದ ಮೇಲೆ ಪೇಶವೆಯವರು ಮುಂಬಯಿಯ ಮೇಲೆ ಸಾಗಬೇಕೆಂದು ಗೊತ್ತುಮಾಡಿಕೊಂಡರು. ಮುಂದೆ ಗುಂಟೂರ ಪ್ರಾಂತವನ್ನು ಮರಳಿ ಕೊಟ್ಟಿದ್ದರಿಂದ ನಿಜಾಮನೂ ೧೬ ಲಕ್ಷ ರೂಪಾಯಿಗಳನ್ನು ಕೊಟ್ಟಿದ್ದರಿಂದ ಭೋಸಲೆಯೂ ತಟಸ್ಥರಾಗಿ ಉಳಿದರು.

ಉತ್ತರದಲ್ಲಿ ಪೋಫ್ಯಾಮನು ಗ್ವಾಲೇರ ಕೋಟೆಯನ್ನು ತೆಗೆದುಕೊಂಡು ಮಾಳವದ ಕಡೆಗೆ ಸಾಗಿ ಬಂದನು. ಗಾಡರ್ಡನು ಗುಜರಾತದಿಂದ ಹೊರಟು ಮುಂಬಯಿಯ ಸೈನ್ಯವನ್ನು ಕೂಡಿಕೊಂಡು ಪುಣೆಯ ಕಡೆಗೆ ಬರಹತ್ತಿದನು. ಪೋಫ್ಯಾಮನ ಸೈನ್ಯವನ್ನು ಸಿಂಧೆಯು ಹಿಮ್ಮೆಟ್ಟಿಸಿದನು. ಗಾಡರ್ಡನ ಸೈನ್ಯದ ಒಂದು ಕಡೆಯಿಂದ ಹೋಳಕರನೂ ಇನ್ನೊಂದು ಕಡೆಯಿಂದ ಹರಿಪಂತನೂ ಮುತ್ತಿದರು. ಮುಂಬಯಿಯ ನೆರವು ಕಟ್ಟಾದದರಿಂದ ಗಾಡರ್ಡನು ಹಿಂದಿರುಗಿ ಪಾರಾಗಿ ಮುಂಬಯಿಗೆ ನಿಲುಕಿದನು.

ಆದದರಿಂದ ವಾರನ್ ಹೇಸ್ಟಿಂಗ್ಸನು ಮಹಾದಾಜಿಯ ದಿಲ್ಲಿಯ ಮೇಲಿನ ವರ್ಚಸ್ಸಿಗೆ ಸಮ್ಮತಿ ಕೊಟ್ಟು ಅವನ ಸಹಾಯದಿಂದ ಪೇಶವೆಯರೊಡನೆ ಸಾಲಬಾಯಿ ಎಂಬಲ್ಲಿ ಒಪ್ಪಂದ ಮಾಡಿಕೊಂಡನು. ಕ್ರಿ. ಶ. ೧೭೮೨. (೧) ಇಂಗ್ಲಿಷರು ರಘುನಾಥರಾಯನ ಪಕ್ಷವನ್ನು ಬಿಡಬೇಕು. ಅವನು ವರ್ಷಕ್ಕೆ ೩ ಲಕ್ಷ ರೂ. ವೇತನವನ್ನು ಹೊಂದಿ ಕೋಪರಗಾವದಲ್ಲಿ ಇರತಕ್ಕದ್ದು. (೨) ಸಾಷ್ಟಿ ಒಂದನ್ನು ಇಟ್ಟುಕೊಂಡು ಉಳಿದ ಸೀಮೆಯನ್ನು ಬಿಟ್ಟುಕೊಡಬೇಕು. (೩) ಗಾಯಕವಾಡನು ಪೇಶವೆಗೆ ಕಪ್ಪನ್ನು ಕೊಟ್ಟು

ತನ್ನ ಸೀಮೆಯನ್ನು ತನ್ನ ಕಡೆಗೆ ಇಟ್ಟುಕೊಳ್ಳಬೇಕು. (೪) ಒಬ್ಬರ ಶತ್ರು ಗಳಿಗೆ ಇನ್ನೊಬ್ಬರು ನೆರವಾಗಬಾರದು.

ಇಲ್ಲಿಗೆ ರಘುನಾಥರಾಯನು ಪೇಶವೆಯಾಗುವ ಆಶೆಯನ್ನು ಬಿಟ್ಟುಬಿಡ ಬೇಕಾಯಿತು. ಬಾರಾಭಾಯಿಗಳ ನಿಶ್ಚಯ–ಧೈರ್ಯ–ಸಾಹಸಗಳಿಂದಲೇ ಮರಾಠರ ರಾಜ್ಯವು ಈ ಮನೆಜಗಳದ ಕುತ್ತಿನಿಂದ ಪಾರಾಯಿತು. ಆದರೆ ಮಾಧವರಾಯನಂತಹ ಸಮರ್ಥ ಪೇಶವೆಯು ಲಭಿಸದೆ ಇದ್ದದರಿಂದ ಮುಂದಿನ ಕಾಲದಲ್ಲಿ ಮರಾಠರ ವರ್ಚಸ್ಸು ಕಡಿಮೆಯಾಯಿತು!

**ಪ್ರ.:— ಕೆಳಗೆ ಕೆಲವು ವ್ಯಕ್ತಿಗಳ ಹೆಸರುಗಳೂ ಅವರ ವಿಶೇಷಣಗಳೂ ಕೊಟ್ಟಿವೆ. ವ್ಯಕ್ತಿಗಳಿಗೆ ತಕ್ಕನಾದ ವಿಶೇಷಣಗಳನ್ನು ಆ ಆ ವ್ಯಕ್ತಿಗಳ ಹೆಸರಿನ ಮೊದಲಲ್ಲಿ ಬರೆಯಿರಿ.**

**ವ್ಯಕ್ತಿಗಳು— ಸಂಭಾಜಿ, ನಾನಾಫಡಣವೀಸ, ಅಹಲ್ಯಾಬಾಯಿ, ಆನಂದೀ ಬಾಯಿ, ಖಂಡೋಬಲ್ಲಾಳ, ಸೂರ್ಯಾಜಿ ಪಿಸಾಳ.**

**ವಿಶೇಷಣಗಳು— ಮುತ್ಸದ್ದಿಯಾದ, ಧರ್ಮಾಭಿಮಾನಿ, ಸ್ವಾಮಿನಿಷ್ಠ, ಕಾರಸ್ಥಾನಿ, ದೇಶದ್ರೋಹಿ, ಸಾಧ್ವಿ.**

**ಉ. :—** ಧರ್ಮಾಭಿಮಾನಿ ಸಂಭಾಜಿ, ಮುತ್ಸದ್ದಿಯಾದ ನಾನಾ ಫಡಣವೀಸ, ಸಾಧ್ವಿಯಾದ ಅಹಲ್ಯಾಬಾಯಿ, ಕಾರಸ್ಥಾನಿ ಆನಂದೀ ಬಾಯಿ, ಸ್ವಾಮಿನಿಷ್ಠ ಖಂಡೋ ಬಲ್ಲಾಳ, ದೇಶದ್ರೋಹಿ ಸೂರ್ಯಾಜಿ ಪಿಸಾಳ

**ಪ್ರ.:— ಸವಾಯಿ ಮಾಧವರಾಯನ ಮತ್ತು ೨ ನೆಯ ಬಾಜೀರಾಯನ ಆಳಿಕೆಯನ್ನು ಸಂಕ್ಷಿಪ್ತದಲ್ಲಿ ವಿವರಿಸಿರಿ.**

**ಉ.** — ಸವಾಯಿ ಮಾಧವರಾಯನ ಆಳಿಕೆ (ಕ್ರಿ. ಶ. ೧೭೭೪–೧೭೯೫) ಸಾಲಬಾಯಿ ಒಪ್ಪಂದದ ನಂತರ ರಘುನಾಥರಾಯನ ವಿರೋಧವು ಇಲ್ಲ ದಂತಾಗಲು ಸವಾಯಿ ಮಾಧವರಾಯನ ಆಳಿಕೆಯು ಸರಳವಾಗಿ ನಡೆಯ ಹತ್ತಿತು. ನಾನಾನ ಮುತ್ಸದ್ದಿತನ ಮತ್ತು ಮಹದಾಜಿಯ ಪರಾಕ್ರಮ ಇವು ಗಳ ಬಲದಿಂದ ರಾಜ್ಯವು ದಿನದಿನಕ್ಕೆ ಬಲಿಯಹತ್ತಿತು. ಮನೆಜಗಳದ ಕಾಲ ದಲ್ಲಿ ಕೈಬಿಟ್ಟ ಸೀಮೆಗಳು ಮರಳಿ ವಶವಾದವು. ಕ್ರಿ. ಶ. ೧೭೮೪–೮೭ ರ ವರೆಗೆ ಟೀಪುವಿನೊಡನೆ ಮರಾಠರ ಯುದ್ಧವಾಯಿತು. ಕಡೆಗೆ ಅವನು ಮರಾಠ ರೊಡನೆ ಒಪ್ಪಂದ ಮಾಡಿಕೊಂಡು ಅವರ ಸೀಮೆಗಳನ್ನು ಬಿಟ್ಟದ್ದಲ್ಲದೆ ೩೭

ಲಕ್ಷ ರೂಪಾಯಿಗಳನ್ನು ಕೊಟ್ಟನು. ಕ್ರಿ. ಶ. ೧೭೯೦-೯೨ ರ ವರೆಗೆ ಟೀಪು ವಿನ ಸಂಗಡ ಮಾಡಿದ ಯುದ್ಧದಿಂದ ತುಂಗಭದ್ರೆಯಿಂದ ಮಲಪ್ರಭೆಯ ವರೆಗಿನ ಸೀಮೆಯು ಮರಾಠರಿಗೆ ದೊರೆಯಿತು. ಮಹದಾಜಿಯು ಡಿಬಾ ಯಿನ್ ಎಂಬ ಫ್ರೆಂಚ ಸೇನಾಪತಿಯಿಂದ ತನ್ನ ಸೈನ್ಯವನ್ನು ಸುಧಾರಿಸಿ ಕೊಂಡನು. ಮತ್ತು ಪುಣೆಯಿಂದಲೂ ಸೈನ್ಯವನ್ನು ತರಿಸಿಕೊಂಡು ದಿಲ್ಲಿಯ ಕಡೆಗೆ ಸಾಗಿ ಇಸ್ಮಾಯಿಲ ಬೇಗನನ್ನು ಸೋಲಿಸಿ ಬಾದಶಹನಿಂದ ಸನದು ಪಡೆದನು. ಮತ್ತು ಮಾಂಡಲಿಕರಿಂದ ಕಪ್ಪನ್ನೆತ್ತಿಕೊಟ್ಟು ಬಾದಶಹನ ವರ್ಚ ಸ್ಸನ್ನು ನೆಲೆಗೊಳಿಸಿದನು. ಬಾದಶಹ ಕಣ್ಣು ಕೀಳಿಸಿದ ಗುಲಾಮಕಾದರ ನನ್ನು ಹಿಡಿಸಿ ಕೊಲ್ಲಿಸಿದನು. ಮತ್ತು ಪುಣೆಗೆ ಬಂದು ಬಾದಶಹನಿಂದ ದೊರೆತ ವಕೀಲ-ಈ-ಮುತಾಲೀಕ ಎಂಬ ಪದವಿಯನ್ನು ಸ. ಮಾಧವರಾಯನಿಗೆ ಸಲ್ಲಿಸಿದನು. ಪೇಶವೆಯೂ ಮಹದಾಜಿಯನ್ನು ಪ್ರೀತಿಯಿಂದ ಸನ್ಮಾನಿಸಿದನು !

ದಿಲ್ಲಿಯಲ್ಲಿ ಮರಾಠರಿಗೆ ದೊರೆತ ಕೀರ್ತಿಯಿಂದ ನಿಜಾಮನು ಕಸವಿಸಿ ಗೊಂಡನು. ಮರಾಠರೊಡನೆ ಇದಿರು ಹೂಡಿ, ಕೊಡತಕ್ಕ ಹಣವನ್ನು ಕೊಡ ದಾದನು. ಆಗ ಸ. ಮಾಧವರಾಯನು ನಿಜಾಮನ ಮೇಲೆ ಸಾಗಿದನು. ಖರಡೆ ಎಂಬಲ್ಲಿ ಭೀಕರ ಕಾಳಗವಾಯಿತು ನಿಜಾಮನು ಒಪ್ಪಂದ ಮಾಡಿ ಕೊಂಡನು. ಅವನು ೩೭ ಲಕ್ಷದ ಸೀಮೆಯನ್ನೂ ದೌಲತಾಬಾದ ಕೋಟೆ ಯನ್ನೂ ೩ ಕೋಟಿ ರೂಪಾಯಿಗಳನ್ನೂ ಕೊಡಲೊಪ್ಪಿದನು.

ಕ್ರಿ. ಶ. ೧೭೯೫ ರಲ್ಲಿ ಸ. ಮಾಧವರಾಯನು ಮರಣ ಹೊಂದಿದನು. ಕ್ರಿ. ಶ. ೧೭೯೪ ರಿಂದ ಮುಂದೆ ೪-೫ ವರ್ಷಗಳಲ್ಲಿಯೆ ಮರಾಠರ ರಾಜ್ಯಕ್ಕೆ ಆಧಾರರೆನಿಸಿದ್ದ ಮಹದಾಜಿ ಸಿಂದೆ, ರಾಮಶಾಸ್ತ್ರೀ, ಅಹಲ್ಯಾಬಾಯಿ, ಹರಿ ಪಂತ, ಪರಶುರಾಮ ಭಾವು, ತುಕೋಜಿ ಹೋಳಕರ ಇವರು ಮರಣ ಹೊಂದಿದರು.

೨ ನೆಯ ಬಾಜೀರಾಯನ ಆಳಿಕೆ— (ಕ್ರಿ. ಶ. ೧೭೯೫-೧೮೧೮) ಸ. ಮಾಧವರಾಯನಿಗೆ ಮಕ್ಕಳಿಲ್ಲದ್ದರಿಂದ ರಘುನಾಥರಾಯನ ಮಗನಾದ ೨ ನೆಯ ಬಾಜೀರಾಯನು ಪೇಶವೆಯಾದನು. ಪಟ್ಟಕ್ಕೆ ಬಂದ ಕೂಡಲೆ ಇವನು ಸಿಂದೆ ದೌಲತರಾಯನಿಗೆ ೨ ಕೋಟಿ ರೂಪಾಯಿ ಕೊಡುವೆನೆಂದು ಹೇಳಿ ಅವನಿಂದ ನಾನಾನನ್ನೇ ಸೆರೆಹಿಡಿಸಿ ಅಹಮ್ಮದನಗರದಲ್ಲಿಟ್ಟನು. ಮುಂದೆ ದೌಲತರಾಯನಿಗೂ ಬಾಜೀರಾಯನಿಗೂ ವೈರವುಂಟಾಯಿತು. ಬಾಜೀ

ರಾಯನನ್ನು ದಾರಿಗೆ ತರಬೇಕೆಂದು ದೌಲತರಾಯನು ನಾನಾನನ್ನು ಬಿಟ್ಟು ಬಿಟ್ಟನು. ಆಗ ನಾನಾನನ್ನೇ ಕರೆದು ಬಾಜೀರಾಯನು ಅವನನ್ನೇ ಅಧಿಕಾರಿ ಯನ್ನು ಮಾಡಿದನು. ಆದರೆ ನಾನಾನಿಗೆ ಹುರುಳಿನಿಸಲಿಲ್ಲ! ಉದಾಸೀನ ನಾಗಿಯೇ ಕಾಲ ಕಳೆಯಹತ್ತಿರಲು ಅವನು ಕ್ರಿ. ಶ. ೧೮೦೦ ರಲ್ಲಿ ಮರಣ ಹೊಂದಿದನು. ಹದಗೇಡಿ ಪೇಶವೆಯು ರಾಜ್ಯವನ್ನು ಮುಳುಗಿಸುವನೆಂದು ಅವನಿಗೆ ಎನಿಸಿತ್ತು. ರಾಜ್ಯಕ್ಕೆ ಮಾರ್ಗದರ್ಶಕರು ಇಲ್ಲದಂತಾಯಿತು. ದೌಲತ ರಾಯನು ೨ ಕೋಟಿ ರೂಪಾಯಿ ಬೇಡಹತ್ತಲು ಅವನಿಂದ ಪುಣೆಯ ಶ್ರೀಮಂತರನ್ನು ಸುಲಿಗೆ ಮಾಡಿಸಿದನು. ಹೋಳಕರ ಯಶವಂತರಾಯನ ತಮ್ಮ ವಿಠೋಜಿಯನ್ನು ಆನೆಯ ಕಾಲಿಗೆ ಹಾಕಿಸಿ ಕೊಲ್ಲಿಸಿದನು. ತಮ್ಮನ ಕೊಲೆಯ ಸುದ್ದಿ ಕೇಳಿ ಯಶವಂತರಾಯನು ಸಿಂದೆ–ಪೇಶವೆಯರ ಮೇಲೆ ಸಿಟ್ಟಾಗಿ ಸಿಂದೆಯ ಉಜ್ಜಯಿನಿ ಪಟ್ಟಣವನ್ನು ಸುಲಿದು ಪುಣೆಯ ಮೇಲೆ ಸಾಗಿ ಬಂದನು. ಹೋಳಕರನು ಸಿಂದೆ–ಪೇಶವೆಯರ ಸೈನ್ಯವನ್ನು ಸೋಲಿಸಿ ಪುಣೆಗೆ ಬಂದನು. ಬಾಜೀರಾಯನು ಇಂಗ್ಲಿಷರ ನೆರವಿಗಾಗಿ ವಸಯಿಗೆ ಹೋದನು.

ಬಾಜೀರಾಯನು ವಸಯಿ ಒಪ್ಪಂದದಿಂದ ತನ್ನ ಸ್ವಾತಂತ್ರ್ಯವನ್ನು ಕಳೆದುಕೊಂಡು ಇಂಗ್ಲಿಷರ ಮಾಂಡಲಿಕನಾದನು. ಈ ಒಪ್ಪಂದವು ಕ್ರಿ. ಶ. ೧೮೦೨ ರಲ್ಲಾಯಿತು. ಇದರ ಕರಾರುಗಳು (೧) ಇಂಗ್ಲಿಷರು ಬಾಜೀರಾಯ ನಿಗೆ ಪೇಶವೆ ಪದವನ್ನು ಕೊಡಿನಬೇಕು. (೨) ಪೇಶವೆಯು ೨೬ ಲಕ್ಷ ಉತ್ಪನ್ನದ ಸೀಮೆಯನ್ನು ಇಂಗ್ಲಿಷರಿಗೆ ಕೊಟ್ಟು ಸಹಾಯಕ ಸೈನ್ಯವನ್ನಿಟ್ಟು ಕೊಳ್ಳಬೇಕು.

ಈ ಒಪ್ಪಂದವಾದ ಕೂಡಲೆ ಬಾಜೀರಾಯನು ಅರ್ಥರ ವೆಲ್ಲಸ್ಲಿಯೊಡನೆ ಪುಣೆಗೆ ಬಂದು ಪೇಶವೆಯಾದನು. ಕ್ರಿ. ಶ. ೧೮೦೭ ರಿಂದ ಕ್ರಿ. ಶ. ೧೮೧೫ ರ ವರೆಗೆ ಇಂಗ್ಲಿಷರು ಈ ದೇಶದ್ದ ಅರಸರ ಕಾರಭಾರದಲ್ಲಿ ಕೈಹಾಕಲಿಲ್ಲ. ಇದ ರಿಂದ ಈ ಕಾಲವು ಬಾಜೀರಾಯನಿಗೆ ನಿಶ್ಚಿಂತೆಯದಾಗಿದ್ದಿತು. ಈ ಕಾಲ ದಲ್ಲಿಯೂ ಅವನು ರಾಜ್ಯವನ್ನು ಸರಿಯಾಗಿ ಆಳಲಿಲ್ಲ. ರಾಜ್ಯದಲ್ಲಿ ಅವ್ಯವಸ್ಥೆ ಗಂತೂ ನೆಲೆಯಿರಲಿಲ್ಲ. ತಾನಾಗಿಯೆ ಇಂಗ್ಲಿಷರ ಅಧೀನನಾಗಿ ಹಿಂದಿನಿಂದ ಅವರನ್ನು ದ್ವೇಷಿಸ ಹತ್ತಿದನು. ಮತ್ತು ಗುಪ್ತರೀತಿಯಿಂದ ಯುದ್ಧದ ಸಿದ್ಧತೆ

ನಡೆಯಿಸಿದನು. ಮೇಲೆ ಮೇಲೆ ಮಿತ್ರನಂತೆ ನಡೆಯುವನು. ಇದು ಇಂಗ್ಲಿಷರಿಗೆ ತಿಳಿಯದೆ ಇರಲಿಲ್ಲ

ಕ್ರಿ. ಶ. ೧೮೧೫ ರಲ್ಲಿ ಯುರೋಪದಲ್ಲಿ ನೆಪೋಲಿಯನ್ನನೊಡನೆ ನಡೆದ ಯುದ್ಧವು ಮುಗಿಯಲು ಇಂಗ್ಲಿಷರು ಈ ದೇಶದ ರಾಜ್ಯವಿಸ್ತಾರದ ಕೆಲಸಕ್ಕೆ ಕೈಹಾಕಿದರು. ಅವರು ಬಾಜೀರಾಯನ ಇತಿಶ್ರೀಯನ್ನು ಹೇಳಿಸುವ ಸಿದ್ಧತೆಯನ್ನು ಮಾಡಿ ಪುಣೆಯ ಕಡೆಗೆ ಸೈನ್ಯವನ್ನು ಸಾಗಿಸಿದರು. ಖಡಕಿ, ಕೋರೆಗಾವ, ಅಷ್ಟೇ ಈ ಮೂರು ಯುದ್ಧಗಳ ನಂತರ ಮರಾಠರ ಸೈನ್ಯವು ಪೂರ್ಣವಾಗಿ ಸೋತಿತು. ಇದನ್ನು ಕೇಳಿ ಬಾಜೀರಾಯನು ಸಿಂದೆ-ಹೋಳಕರರ ನೆರವಿಗೆಂದು ಉತ್ತರಕ್ಕೆ ಸಾಗಿ ದಾರಿಯಲ್ಲಿ ಇಂಗ್ಲಿಷರ ಕೈಗೆ ಸಿಕ್ಕನು.

ಅತ್ತ ಹೋಳಕರನು ಮಹಿದಪುರದ ಹತ್ತಿರ ಮತ್ತು ಭೋಸಲೆಯು ಸೀತಾಬರ್ಡಿಯ ಹತ್ತಿರ ಸೋತು ಸಹಾಯಕ ಸೈನ್ಯವನ್ನು ಇಟ್ಟುಕೊಳ್ಳಲು ಒಪ್ಪಿಕೊಂಡರು.

ಬಾಜೀರಾಯನಿಗೆ ವರ್ಷಕ್ಕೆ ೮ ಲಕ್ಷ ಉಂಬಳಿ ಗೊತ್ತುಮಾಡಿ ಇಂಗ್ಲಿಷರು ಅವನನ್ನು ಬಿರೂರದಲ್ಲಿಟ್ಟರು. ಸಾತಾರೆಯ ಪ್ರತಾಪಸಿಂಹನಿಗೆ ೧೩ ಲಕ್ಷದ ಜಹಗೀರನ್ನು ಉಳಿಸಿ, ಉಳಿದರಾಜ್ಯವನ್ನು ತಮ್ಮ ರಾಜ್ಯಕ್ಕೆ ಕೂಡಿಸಿಕೊಂಡರು.

**ಪ್ರ. :—ಜಿಜಾಬಾಯಿ, ಸಂತಾಜಿ-ಧನಾಜಿ, ಸದಾಶಿವರಾವ, ರಘುನಾಥರಾವ, ಅಹಲ್ಯಾಬಾಯಿ, ನಾನಾಫಡಣವೀಸ, ಮಹಾದಾಜಿ ಸಿಂದೆ, ಕಾನ್ಹೋಜಿ ಆಂಗ್ರೆ, ಬಾಪೂ ಗೋಖಲೆ, ರಘೂಜಿ ಭೋಸಲೆ, ದೌಲತರಾವ ಸಿಂದೆ, ರಾಮಶಾಸ್ತ್ರೀ ಪ್ರಭುಣೆ ಇವರ ಬಗೆಗೆ ಟಿಪ್ಪಣೆಗಳನ್ನು ಬರೆಯಿರಿ.**

**ಉ. : — (೧) ಜಿಜಾಬಾಯಿ** —ಈಕೆಯು ಶಿವಾಜಿಯ ತಾಯಿಯು. ತನ್ನ ಮಗನಿಗೆ ಚಿಕ್ಕಂದಿನಲ್ಲಿ ರಾಮಾಯಣ-ಮಹಾಭಾರತಗಳಲ್ಲಿಯ ಆದರ್ಶ ಸ್ತ್ರೀಪುರುಷರ ಚರಿತ್ರೆಗಳನ್ನು ಉಪದೇಶಿಸಿದಳು. ಶಿವಾಜಿಯ ಕರ್ತೃತ್ವಕ್ಕೆ ಜಿಜಾಭಾಯಿಯ ಶಿಕ್ಷಣವು ಬಹುಮಟ್ಟಿಗೆ ಕಾರಣವೆನ್ನಲು ಅಡ್ಡಿಯಿಲ್ಲ. ಕ್ರಿ. ಶ. ೧೬೭೪ ರಲ್ಲಿ ಶಿವಾಜಿಯ ಪಟ್ಟಾಭಿಷೇಕ ಸಮಾರಂಭವನ್ನು ಕಣ್ಣು ತುಂಬ ನೋಡಿ ಸಮಾಧಾನ ಹೊಂದಿದಳು. ಆದರ್ಶಚರಿತೆಯೂ ವೀರಮಾತೆಯೂ ಎಂದು ಇತಿಹಾಸದಲ್ಲಿ ಜಿಜಾಬಾಯಿಯ ಹೆಸರು ಸ್ಥಿರವಾಗಿರುವದು.

**(೨) ಸಂತಾಜಿ ಮತ್ತು ಧನಾಜಿ**— ರಾಜಾರಾಮನ ಕಾಲದ

ಶೂರರೂ ಮರಾಠಾರಾಜ್ಯದ ಅಭಿಮಾನಿಗಳೂ ಆದ ಸೇನಾಪತಿಗಳು. ಮೊಗಲರ ಕೂಡ ಶೌರ್ಯದಿಂದ ಕಾದಿ ಮರಾಠರ ರಾಜ್ಯವನ್ನು ಕುತ್ತಿನಿಂದ ಉಳಿಸಿದರು.

(೩) **ಸದಾಶಿವರಾವ**—೧ನೆಯ ಬಾಜೀರಾಯನ ಮಗನಾದ **ಚಿಮಾಜಿ** ಅಪ್ಪಾಸ ಮಗನು. ಪಾನಿಪತದ ೩ನೆಯ ಯುದ್ಧದಲ್ಲಿ ಪೇಶವೆಯರ ಸೇನಾಪತಿಯಾಗಿದ್ದನು.

(೪) **ರಘುನಾಥರಾವ**— ಹಿರಿಯ ಬಾಜೀರಾಯನ ಚಿಕ್ಕ ಮಗನು. ಇವನು ಮರಾಠರ ರಾಜ್ಯವನ್ನು ಅಟಕದ ವರೆಗೆ ವಿಸ್ತರಿಸಿ, ಅಲ್ಲಿ ಮರಾಠರ ಧ್ವಜವನ್ನು ನಿಲ್ಲಿಸಿದನು. ಆದರೆ ಮುಂದೆ ಹೆಂಡತಿಯಾದ ಆನಂದಿಬಾಯಿಯ ಆಗ್ರಹಕ್ಕೆ ಮನಸೋತು ನಾರಾಯಣರಾಯನ ಕೊಲೆಗೆ ಕಾರಣನಾದನು. ಇವನಿಂದ ಮರಾಠರ ರಾಜ್ಯದಲ್ಲಿ ಕೈಚಾಚಲು ಇಂಗ್ಲಿಷರಿಗೆ ಅನುಕೂಲ ವಾಯಿತು.

(೫) **ಅಹಲ್ಯಾಬಾಯಿ**— ಈಕೆಯು ಇಂದೂರ ಸಂಸ್ಥಾನದ ಮಲ್ಹಾರರಾವ ಹೋಳಕರನ ಸೊಸೆಯು. ರಾಜ್ಯಕಾರಭಾರವನ್ನು ಉತ್ತಮರೀತಿಯಿಂದ ಸಾಗಿಸಿದ್ದಳು. ಮಹಾ ಸಾಧ್ವಿ ಎಂದು ಭಾರತದಲ್ಲೆಲ್ಲ ಹೆಸರಾಗಿದ್ದಳು. ಮೈಸೂರ ಟೀಪುಸುಲ್ತಾನನು ಈಕೆಯ ವಿಷಯದಲ್ಲಿ ಪೂಜ್ಯಭಾವನೆಯನ್ನು ತಳೆದಿದ್ದನು. ಕ್ರಿ. ಶ. ೧೭೯೫ ರಲ್ಲಿ ಈಕೆಯು ಮರಣಹೊಂದಿದಳು.

(೬) **ನಾನಾಫಡಣವೀಸ**—ಪೇಶವೆಯರ ಹೆಸರಾದ ಮುತ್ಸದ್ದಿಯು. ನಾರಾಯಣರಾಯನ ತರುವಾಯ ರಘುನಾಥರಾಯನಿಗೆ ಪಟ್ಟವು ದೊರೆಯದಂತೆ ಯತ್ನಿಸಿದವರಲ್ಲಿ ಇವನು ಮುಖ್ಯನು. ಸವಾಯಿ ಮಾಧವರಾಯನನ್ನು ಪಟ್ಟಗಟ್ಟಿದ ಬಳಿಕ ಇವನೇ ಕಾರಭಾರವನ್ನು ಸಾಗಿಸುತ್ತಿದ್ದನು. ೧೭೯೮ ರಲ್ಲಿ ಸವಾಯಿ ಮಾಧವರಾಯನು ಸಾಯಲು ರಘುನಾಥರಾಯನ ಮಗನಾದ ೨ನೆಯ ಬಾಜೀರಾಯನು ಪೇಶವೆಯಾದನು. ಕ್ರಿ. ಶ. ೧೮೦೦ ರಲ್ಲಿ ನಾನಾ ಫಡಣವೀಸನು ಮರಣಹೊಂದಿದನು.

(೭) **ಮಹಾದಾಜಿ ಸಿಂದೆ**— ಇವನು ರಾಣೋಜಿ ಸಿಂದೆಯ ಮಗನು. ೧೭೬೧ ರಲ್ಲಾದ ಪಾನಿಪತದ ಯುದ್ಧದ ನಂತರ ಮರಾಠ ರಾಜ್ಯವನ್ನು ಮತ್ತೆ ಬಲಪಡಿಸುವ ಕಾರ್ಯದ ಶ್ರೇಯಸ್ಸು ಮಹಾದಾಜಿಯದೇ ಆಗಿದೆ. ಇವನು ಉತ್ತರಹಿಂದುಸ್ಥಾನದಲ್ಲಿ ಎಲ್ಲ ಕಡೆಗೆ ತನ್ನ ವರ್ಚಸ್ಸನ್ನು ನೆಲೆಗೊಳಿಸಿ ದಿಲ್ಲಿಯ ಬಾದಶಹನಿಂದ ದಿವಾಣ–ಈ–ಮುಲ್ಲಕ (ವ್ಯಾಯಿಸ

ರಾಯ) ಎಂಬ ಪದವಿಯನ್ನು ವೇಶವೆಗೆ ಕೊಡಿಸಿದನು. ಮತ್ತು ವೇಶ್ವೆಯ ಪ್ರತಿನಿಧಿಯಾಗಿ ದಿಲ್ಲಿಯ ಕಾರಭಾರವನ್ನು ಸಾಗಿಸ ಹತ್ತಿದನು. ಯುದ್ಧಕಲೆಯ ಶಿಕ್ಷಣವನ್ನು ಪಡೆದ ಸೈನ್ಯದ ಮಹತ್ತ್ವವು ಇವನಿಗೆ ಹೊಳೆಯದೆ ಇರಲಿಲ್ಲ. ಆದದರಿಂದ ಇವನು ಡಿಬಾಯಿನ್ ಎಂಬ ಫ್ರೆಂಚ ಸರದಾರನ ನಿರೀಕ್ಷಣೆಯಲ್ಲಿ ದೊಡ್ಡ ಸೈನ್ಯವನ್ನು ಸಜ್ಜುಗೊಳಿಸಿಕೊಂಡಿದ್ದನು. ಆಗ್ರಾದಲ್ಲಿ ಮದ್ದುಗುಂಡು ಗಳ ಕಾರಖಾನೆಯನ್ನು ನಡೆಯಿಸಿದ್ದನು. ಹೀಗೆ ಪರಾಕ್ರಮಿಯೂ ಮುತ್ಸದ್ದಿಯೂ ಆದ ಇವನು ಕ್ರಿ. ಶ. ೧೭೯೪ ರಲ್ಲಿ ಮರಣಹೊಂದಿದನು.

(೮) **ಕಾನ್ಹೊಜಿ ಆಂಗ್ರೆ**— ಇವನು ಶಿವಾಜಿಯ ಕಾಲದಲ್ಲಿಯ ಮರಾಠರ ಹಡಗುಪಡೆಯ ಮುಖ್ಯಾಧಿಕಾರಿಯು. ಇವನು ಮರಾಠರು ನಡೆಯಿಸಿದ ಸ್ವಾತಂತ್ರ್ಯಯುದ್ಧದ ಕಾಲದಲ್ಲಿ ಕೊಂಕಣದ ಹಡಗುಪಡೆಯನ್ನು ಚೆನ್ನಾಗಿ ರಕ್ಷಿಸಿದನು. ಕುಲಾಬಾ, ಸುವರ್ಣದುರ್ಗ, ವಿಜಯದುರ್ಗ ಇವು ಆಗಿನ ಹಡಗುಪಡೆಯ ಮುಖ್ಯ ಠಾಣ್ಯಗಳಾಗಿದ್ದವು. ಇವನಿರುವವರೆಗೆ ಹಬಸಿ, ಪೋರ್ತುಗೀಜ, ಇಂಗ್ಲಿಷ ಇವರ ಆಟವು ನಡೆಯಲಿಲ್ಲ. ತನ್ನ ಅರವತ್ತು ಹಡಗಗಳ ಬಲದಿಂದ ಇವನು ಮುಂಬಯಿಯಿಂದ ಗೋವೆಯ ವರೆಗೆ ತನ್ನ ವರ್ಚಸ್ಸನ್ನು ನೆಲೆಗೊಳಿಸಿದ್ದನು. ವ್ಯಾಪಾರದ ಹಡಗಗಳ ಮೇಲೆ ಚೌಥಾಯಿಯನ್ನೆತ್ತಿ ಅದರ ಬಲದಿಂದ ಹೊಸ ಹಡಗಗಳನ್ನು ಕಟ್ಟಿಸುತ್ತಿದ್ದನು. ಈ ನೌಕಾಸೇನಾನಿಯು ಕ್ರಿ. ಶ. ೧೭೨೯ ರಲ್ಲಿ ಮರಣ ಹೊಂದಿದನು.

(೯) **ಬಾಪೂ ಗೋಖಲೆ**— (ಕ್ರಿ. ಶ. ೧೭೭೮–೧೮೧೮) ಇವನು ಸವಾಯಿ ಮಾಧವರಾಯನ ಕಾಲದಲ್ಲಿ ಕೊಂಕಣವನ್ನು ಬಿಟ್ಟುಬಂದು ಪರಾಕ್ರಮದಿಂದ ಹೆಸರಿಗೆ ಬಂದನು. ಕರ್ನಾಟಕದಲ್ಲಿಯ ಬಂಡಾಯಗಳನ್ನು ಮುರಿದನು. ಧೋಂಡಜಿ ವಾಘನ ಉಪಟಳವನ್ನು ಅಡಗಿಸಿದನು. ಇವನ ಶೌರ್ಯ–ಸಾಹಸಗಳನ್ನು ಮೆಚ್ಚಿ ೨ ನೆಯ ಬಾಜೀರಾಯನು ಇವನನ್ನು ತನ್ನ ಮುಖ್ಯ ಸೇನಾಪತಿಯನ್ನು ಮಾಡಿದನು. ಇಂಗ್ಲಿಷ–ಮರಾಠರ ಯುದ್ಧದಲ್ಲಿ ಅತಿ ಪರಾಕ್ರಮದಿಂದ ಕಾದಿದನು. ಆದರೆ ಕೊನೆಗೆ ಹತನಾದನು. ಕ್ರಿ. ಶ. ೧೮೧೮.

(೧೦) **ರಘೂಜಿ ಭೋಸಲೆ**— ಇವನು ಶೂರ ಪರಸೋಜಿ ಭೋಸಲೆಯ ತಮ್ಮನ ಮಗನು. ವರ್ಹಾಡ ಪ್ರಾಂತದ ಅಧಿಕಾರಿಯಾಗಿದ್ದನು. ಇವನು ಪರಾಕ್ರಮದಿಂದ ಬಂಗಾಲ, ಬಿಹಾರ, ಒಡಿಸಾ ಪ್ರಾಂತಗಳ ಮೇಲೆ ಮರಾ

ಠರ ವರ್ಚಸ್ಸನ್ನು ಸ್ಥಾಪಿಸಿದನು. ಇವನು ಪೇಶವೆಯ ವಿರುದ್ಧ ನಡೆಯಹತ್ತಲು ಶಾಹೂರಾಜನು ಇವನಿಗೆ ಕೆಲವು ಪ್ರಾಂತಗಳ ಮೇಲಿನ ಸ್ವತಂತ್ರ ಅಧಿಕಾರ ಕೊಟ್ಟು ಸಮಾಧಾನ ಪಡಿಸಿದನು. ಕ್ರಿ. ಶ. ೧೭೫೫ ರಲ್ಲಿ ಇವನು ಮರಣ ಹೊಂದಿದನು.

**(೧೧) ದೌಲತರಾವ ಸಿಂದೆ**— (ಕ್ರಿ. ಶ. ೧೭೯೪-೧೮೨೭) ಇವನು ಮಹಾದಾಜಿ ಸಿಂದೆಯ ತಮ್ಮನ ಮಗನು. ಮಹಾದಾಜಿಗೆ ಮಕ್ಕಳಿಲ್ಲದ್ದರಿಂದ ಅವನು ಈ ದೌಲತರಾಯನನ್ನು ದತ್ತಕ ತೆಗೆದುಕೊಂಡಿದ್ದನು. ಮಹಾದಾಜಿಯ ತರುವಾಯ ಇವನು ಅಧಿಕಾರಿಯಾದನು ಇವನು ಒಳ್ಳೆಯ ಕರ್ತೃತ್ವಶಾಲಿಯಾಗಿದ್ದನು. ಇವನು ನಾನಾಫಡಣವೀಸನ ವಿರುದ್ಧವಾಗಿ ೨ನೆಯ ಬಾಜೀರಾಯನಿಗೆ ನೆರವಾಗಿ ನಾನಾನನ್ನು ಸೆರೆಹಿಡಿದನು. ಮುಂದೆ ಬಾಜೀರಾಯನನ್ನು ದಾರಿಗೆ ತರುವದಕ್ಕಾಗಿ ನಾನಾನನ್ನು ಬಿಟ್ಟುಬಿಟ್ಟನು. ಬಾಜೀರಾಯನು ಕೊಡಲೊಪ್ಪಿದ ೨ ಕೋಟಿ ರೂಪಾಯಿಗಳನ್ನು ಪುಣೆಯ ಶ್ರೀಮಂತರಿಂದ ಸುಲಿದುಕೊಂಡನು ಇದೇ ಕಾಲಕ್ಕೆ ಬಾಜೀರಾಯನು ಯಶವಂತರಾವ ಹೋಳಕರನ ತಮ್ಮನಾದ ಪರಸೋಜಿಯನ್ನು ಆನೆಯ ಕಾಲಿಗೆ ಹಾಕಿಸಿ ಕೊಲ್ಲಿಸಿದನು. ಇದರಿಂದ ಯಶವಂತರಾಯನು ಉಜ್ಜಯನಿಯನ್ನು ಸುಲಿದು ಪುಣೆಗೆ ಸಾಗಿಬಂದು ಸಿಂದೆ-ಪೇಶವೆಯರನ್ನು ಸೋಲಿಸಿದನು. ಬಾಜೀರಾಯನು ಓಡಿಹೋಗಿ ಇಂಗ್ಲಿಷರ ಮೊರೆಹೊಕ್ಕನು. ಮುಂದೆ ಇಂಗ್ಲಿಷರಿಂದ ಸೋಲಿಸಲ್ಪಟ್ಟು ಸಹಾಯಕ ಸೈನ್ಯ ಪದ್ಧತಿಯನ್ನೊಪ್ಪಿದನು. ಕ್ರಿ. ಶ. ೧೮೨೭ ರಲ್ಲಿ ಮರಣ ಹೊಂದಿದನು.

**(೧೨) ರಾಮಶಾಸ್ತ್ರೀ ಪ್ರಭುಣೆ**— ಇವನ ಊರು ಮಾಹುಲಿ. ಬಡ ಕುಟುಂಬದಲ್ಲಿ ಹುಟ್ಟಿದನು. ಮುಂದೆ ಸಾಹಸದಿಂದ ಕಾಶಿಗೆ ಹೋಗಿ ವಿದ್ಯಾಭ್ಯಾಸಮಾಡಿ ಬಲ್ಲಿದನೆನಿಸಿದನು. ಆತನ ಶೀಲ-ವಿದ್ವತ್ತೆ-ಯೋಗ್ಯತೆಗಳನ್ನು ಕಂಡು ಪೇಶವೆಯು ಇವನನ್ನು ಮುಖ್ಯ ನ್ಯಾಯಾಧೀಶನನ್ನು ಮಾಡಿದನು. ನ್ಯಾಯ ತೀರಿಸುವಲ್ಲಿ ಹೆಸರಾದವನು, ಮಾಧವರಾಯ ಪೇಶವೆಗೆ ಕೂಡ ಯೋಗ್ಯ ಸಲಹೆಗಳನ್ನು ಕೊಡುವಲ್ಲಿ ಹಿಂದೆ-ಮುಂದೆ ನೋಡುತ್ತಿರಲಿಲ್ಲ. ನಾರಾಯಣರಾಯನ ಕೊಲೆಗಾಗಿ ನಿಮಗೆ ಮರಣ ದಂಡನೆಯೇ ತಕ್ಕದ್ದು; ಎಂದು ರಘುನಾಥರಾಯನಿಗೆ ಸ್ಪಷ್ಟವಾಗಿ ಹೇಳಿದನು. ಪೇಶವೆಯರ ರಾಜ್ಯಕ್ಕೆ ಭೂಷಣನೆನಿಸಿದ್ದ ಇವನು ಕ್ರಿ ಶ. ೧೭೮೯ ರಲ್ಲಿ ಮರಣ ಹೊಂದಿದನು.

**ಪ್ರ. : — ನಾನಾಫಡಣವೀಸನು ಮರಾಠ ಸರದಾರರ ಮಂಡಲದ ಮೆದುಳು; ಎಂದು ಕರೆಯುವರು. ಇದನ್ನು ಕಾರಣದೊಂದಿಗೆ ಸ್ಪಷ್ಟಗೊಳಿಸಿರಿ. (೧೯೪೯)**

**ಉ. :** — ನಾನಾಫಡಣವೀಸನು ಪೇಶ್ವೆಯ ರಾಜ್ಯದಲ್ಲಿಯ ಹೆಸರಾದ ಮುತ್ಸದ್ದಿಯು. ಹಿರಿಯ ಮಾಧವರಾಯನ ತರುವಾಯ ಮರಾಠರ ರಾಜ್ಯವನ್ನು ಹಲವು ಕುತ್ತುಗಳಿಂದ ಉಳಿಸಿ, ಮರಾಠಸರದಾರರಲ್ಲಿ ಒಕ್ಕಟ್ಟನ್ನು ಉಂಟುಮಾಡಿ, ತುಂಗಭದ್ರೆಯಿಂದ ದಿಲ್ಲಿಯ ತನಕ ಮರಾಠರ ವರ್ಚಸ್ಸನ್ನು ಸ್ಥಾಪಿಸಿದ ಶ್ರೇಯಸ್ಸಿನ ಬಹಳ ಭಾಗವು ನಾನಾನದೇ ಆಗಿದೆ; ಎಂದು ಹೇಳಬಹುದು. ರಾಜ್ಯಕಾರಭಾರದಲ್ಲಿಯ ಇವನ ಧೋರಣ, ಅಚ್ಚುಕಟ್ಟುತನ, ರಾಜ್ಯಪದ್ಧತಿ ಇವು ಒಳ್ಳೆಯ ಅನುಸರಣೀಯವಾಗಿದ್ದವು. ಇವೆಲ್ಲ ಸಂಗತಿಗಳನ್ನು ವಿಚಾರಿಸಿಯೇ “ ನಾನಾಫಡಣವೀಸನು ಮರಾಠ ಸರದಾರರ ಮಂಡಲದ ಮೆದುಳು;” ಎಂದು ಕರೆಯುವರು.

**ಪ್ರ. :— ಮರಾಠರ ರಾಜ್ಯದ ಅಳಿಗಾಲದ ಕಾರಣಗಳಾವವು ?**

**ಉ. :**— ಮರಾಠರ ರಾಜ್ಯದ ಅಳಿಗಾಲದ ಕಾರಣಗಳು—(೧) ಶಿವಾಜಿ ಮಹಾರಾಜನಲ್ಲಿದ್ದ ರಾಷ್ಟ್ರಾಭಿಮಾನ, ಸ್ವಾರ್ಥತ್ಯಾಗ, ರಾಜಕೀಯ ಧೋರಣೆ ಇವು ಮುಂದಿನ ಅರಸರಲ್ಲಿ, ಪೇಶವೆಯರಲ್ಲಿ ಸರದಾರರಲ್ಲಿ ಉಳಿಯಲಿಲ್ಲ (೨) ಸರಂಜಾಮುಗಳನ್ನು ಪಡೆದ ಸರದಾರರು ಸ್ವಂತದ ಹೊನ್ನು ಮಣ್ಣುಗಳನ್ನು ಹೆಚ್ಚಿಸುವ ಅಬ್ಬರದಲ್ಲಿ ಜನಹಿತವನ್ನೂ ಮಧ್ಯವರ್ತಿ ಸರಕಾರದ ಹಿತಾಹಿತಗಳನ್ನೂ ಲೆಕ್ಕಿಸಲಿಲ್ಲ. (೩) ಸ್ವಾರ್ಥ, ಮತ್ಸರ ಇವುಗಳ ಮೂಲಕ ಸರದಾರರು ತಮ್ಮತಮ್ಮೊಳಗೂ ಪೇಶ್ವೆಯವರೊಡನೆಯೂ ಜಗಳಾಡುತ್ತಿದ್ದದರಿಂದ ರಾಜ್ಯದ ಕಸುವು ಕಡಿಮೆಯಾಯಿತು. (೪) ಪಾನಿಪತ್ತದ ಯುದ್ಧದಲ್ಲಿ ಲಕ್ಷಾಂತರ ವೀರರು ಮಡಿದದರಿಂದ ಶಾರೀರಿಕ-ಬೌದ್ಧಿಕ ಶಕ್ತಿಗಳ ಕೊರತೆಯುಂಟಾಯಿತು. (೫) ಮಾಧವರಾಯನ ನಂತರ ಸಮರ್ಥರಾದವರು ಪೇಶ್ವೆಯ ಪಟ್ಟಕ್ಕೆ ಬರಲಿಲ್ಲ. (೬) ಮರಾಠರ ರಾಜ್ಯವು ಸಾವರಿಸಿತೆನ್ನುವಷ್ಟರಲ್ಲಿ ಸವಾಯಿ ಮಾಧವರಾಯನೂ ವೀರರೂ ಮುತ್ಸದ್ದಿಗಳೂ ಗತಿಸಿದ್ದು. (೭) ಹಡಗು ಪಡೆ, ಭೂಸೈನ್ಯ, ಶಸ್ತ್ರಾಸ್ತ್ರಗಳು ಇವುಗಳ ಬಗೆಗೆ ತಕ್ಕ ಶಿಕ್ಷಣವನ್ನು ಮುಂದಾಗಿ ಕೊಡದೆ ಪೆಟ್ಟುಬಿದ್ದ ಬಳಿಕ ಎಚ್ಚರಾಗಿ ಪರಕೀಯರಾದ ಫ್ರೆಂಚ ಮೊದಲಾದವರಿಂದ ಸೈನ್ಯವನ್ನು ತಿದ್ದಲು ಯತ್ನಿಸಿದರು. ಈ ಸರಾವ

ಲಂಬನವು ಪ್ರಸಂಗದಲ್ಲಿ ಮುಳುಗಿಹಾಯಿತು. (೮) ಅವಿವೇಕಿಯೂ ದುರ್ಬಲನೂ ಆದ ೨ನೆಯ ಬಾಜೀರಾಯನು ಪೇಶ್ವೆಯಾದದರಿಂದ, ತಡೆದುನಿಲ್ಲಬಹುದಾಗಿದ್ದ ರಾಜ್ಯವು ಬೇಗ ಮುಳುಗಿ ಹೋಯಿತು.

---

## ಇಂಗ್ಲಿಷರ ಕಾಲ

**ಪ್ರ. :— ಪ್ರಾಚೀನ ಕಾಲದಲ್ಲಿ ಹಿಂದುಸ್ಥಾನ-ಯುರೋಪಗಳ ವ್ಯಾಪಾರವು ಯಾವ ಮಾರ್ಗವಾಗಿ ನಡೆದಿದ್ದಿತು ? ಈ ವ್ಯಾಪಾರವು ಯಾರ ಕೈಯೊಳಗೆ ಇದ್ದಿತು ? ;ಈ ವ್ಯಾಪಾರವು ಎಂದಿನಂತೆ ನಡೆಯಲು ಉಂಟಾದ ತೊಂದರೆ ಯಾವದು ? ಇದಕ್ಕೆ ಯುರೋಪದವರು ಏನು ಹಂಚಿಕೆ ಹಾಕಿದರು ?**

**ಉ. :—** ಪ್ರಾಚೀನ ಕಾಲದಲ್ಲಿ ಯುರೋಪ-ಹಿಂದುಸ್ಥಾನಗಳಲ್ಲಿ ತುರ್ಕಸ್ಥಾನ, ಏಶಿಯಾಮಾಯನರ; ಇರಾಣ ಇಲ್ಲಿಯ ವರೆಗೆ ಭೂಮಾರ್ಗವಾಗಿ, ಬಳಿಕ ಇರಾಣಿ ಆಖಾತ, ಅರಬೀಸಮುದ್ರ ಈ ಜಲಮಾರ್ಗವಾಗಿ ನಡೆಯುತ್ತಲಿದ್ದಿತು.

ಈ ವ್ಯಾಪಾರವು ಮುಖ್ಯವಾಗಿ ಆಗಿನ ಕಾಲದ ಪ್ರಸಿದ್ಧ ಪಟ್ಟಣಗಳಾದ ವ್ಹೇನಿಸ, ಜಿನೋವಾ ಇಲ್ಲಿಯ ವ್ಯಾಪಾರಸ್ಥರ ವಶದಲ್ಲಿದ್ದಿತು. ಅವರೇ ಹಿಂದುಸ್ಥಾನಕ್ಕೆ ಬಂದು ಇಲ್ಲಿಯ ಸರಕುಗಳನ್ನು ಒಯ್ಯುತ್ತಿದ್ದರು.

ಕ್ರಿ. ಶ. ೧೪೫೩ ರಲ್ಲಿ ಕಾನಸ್ಟಾಂಟಿನೋಪಲ ಪಟ್ಟಣವು ಮುಸಲ್ಮಾನರ ವಶವಾಯಿತು. ಇಟಲಿಯ ಪೂರ್ವದಿಂದ ಇರಾಣದ ವರೆಗೆ ಎಲ್ಲ ದೇಶಗಳು ಮುಸಲ್ಮಾನರ ಒಡೆತನಕ್ಕೆ ಒಳಗಾದವು. ಆಗಿನಿಂದ ವ್ಹೇನಿಸ, ಜಿನೋವಾ ಪಟ್ಟಣಗಳ ವ್ಯಾಪಾರವು ಮೊದಲಿನ ಮಾರ್ಗದಿಂದ ಸಾಗುವದು ಕಟ್ಟಾಯಿತು

ಈ ತೊಂದರೆಯುಂಟಾಗಲು ಯುರೋಪದವರು ಹಿಂದುಸ್ಥಾನಕ್ಕೆ ಬರುವ ಜಲಮಾರ್ಗವನ್ನು ಹುಡುಕುವ ಪ್ರಯತ್ನ ಮಾಡಹತ್ತಿದರು.

**ಪ್ರ. :— ಜಲಮಾರ್ಗವನ್ನು ಗೊತ್ತುಮಾಡಿಕೊಂಡು ಹಿಂದುಸ್ಥಾನದೊಡನೆ ವ್ಯಾಪಾರ ಮಾಡುವ ಅವಶ್ಯಕತೆಯು ಯುರೋಪದವರಿಗೆ ಏಕೆ ಇದ್ದಿತು ? ಮೊದಲು ಜಲಮಾರ್ಗವನ್ನು ಯಾರು ಕಂಡುಹಿಡಿದರು ? ಎಂದು ?**

**ಉ. :—** ಹಿಂದುಸ್ಥಾನದಲ್ಲಿ ಹುಟ್ಟುವ ಬಟ್ಟೆ, ಸಕ್ಕರೆ, ಹರಳು, ಮಸಾಲೆ ಮುಂತಾದ ಪದಾರ್ಥಗಳು ಪ್ರಾಚೀನಕಾಲದಿಂದಲೂ ಯುರೋಪ ಖಂಡಕ್ಕೆ ಹೋಗುತ್ತಿದ್ದವು. ಈ ಸರಕುಗಳು ಯುರೋಪದವರಿಗೆ ಅವಶ್ಯವಾಗಿ ಬೇಕಾಗಿದ್ದವು. ಇವುಗಳಿಗಾಗಿ ಭೂಮಾರ್ಗವು ಕಟ್ಟಾದ ಮೇಲೆ ಜಲಮಾರ್ಗ ವನ್ನು ಹುಡುಕುವದು ಅಗತ್ಯವೆನಿಸಿತು.

ವಾಸ್ಕೋ–ಡಿ–ಗಾಮಾ ಎಂಬ ಪೋರ್ತುಗೀಜ ನಾವಿಕನು ಆಫ್ರಿಕಾ ಖಂಡವನ್ನು ಸುತ್ತುವರಿದು ಕ್ರಿ. ಶ. ೧೪೯೮ ರಲ್ಲಿ ಹಿಂದುಸ್ಥಾನದ ಪಶ್ಚಿಮ ತೀರದಲ್ಲಿರುವ ಕಲ್ಲೀಕೋಟೆ (ಕಾಲಿಕತ) ಎಂಬ ಬಂದರಕ್ಕೆ ಬಂದಿಳಿದನು.

**ಪ್ರ. :— ಹಿಂದುಸ್ಥಾನದಲ್ಲಿ ಪೋರ್ತುಗೀಜ, ಡಚ್ಚ, ಫ್ರೆಂಚ, ಇಂಗ್ಲಿಷ ಇವರು ಮಾಡಿದ ರಾಜ್ಯಸ್ಥಾಪನೆಯ ಪ್ರಯತ್ನಗಳಲ್ಲಿ ಯಾರ ಪ್ರಯತ್ನಗಳು ನಿಷ್ಫಲ ವಾದವು? ಯಾರ ಪ್ರಯತ್ನಗಳು ಸಫಲವಾದವು? ಕಾರಣಗಳನ್ನು ಕೊಡಿರಿ.**

**ಉ. :—** ಪೋರ್ತುಗೀಜ, ಡಚ್ಚ, ಫ್ರೆಂಚ ಮತ್ತು ಇಂಗ್ಲಿಷರು. ಇವ ರಲ್ಲಿ ಮೊದಲಿನ ಮೂವರ ಪ್ರಯತ್ನಗಳು ನಿಷ್ಫಲವಾದವು. ಇಂಗ್ಲಿಷರ ಪ್ರಯ ಗಳು ಮಾತ್ರ ಸಫಲವಾದವು.

**ಪೋರ್ತುಗೀಜರ ಪ್ರಯತ್ನಗಳು ನಿಷ್ಫಲವಾದ ಕಾರಣಗಳು—** ಪೋರ್ತುಗಾಲವು ಸ್ಪೇನದ ವಶವಾಗಿದ್ದ ಕಾಲದಲ್ಲಿ ಹಿಂದುಸ್ಥಾನದಲ್ಲಿಯ ಪೋರ್ತುಗೀಜರಿಗೆ ಅವರ ದೇಶದ ಸಹಾಯವು ಸರಿಯಾಗಿ ಸಿಗಲಿಲ್ಲ. ಅಲ್ಬು ಕರ್ಕನ ತರುವಾಯ ಸಮರ್ಥರಾದ ಗವ್ಹರ್ನರರು ಬರಲಿಲ್ಲ. ಪೋರ್ತುಗೀಜರು ಧರ್ಮಪ್ರಸಾರಕ್ಕಾಗಿ ಒತ್ತಾಯ–ಮೋಸಗಳಿಂದ ಪ್ರಯತ್ನ ಮಾಡಿದ್ದರಿಂದ ಈ ದೇಶದವರು ಅವರನ್ನು ದ್ವೇಷಿಸ ಹತ್ತಿದರು. ೧೬೦೫ ರಲ್ಲಿ ಪೋರ್ತುಗೀಜರ ಅಂಬೋಯಿನಾ ದ್ವೀಪವನ್ನು ಕಸಿದುಕೊಂಡದ್ದರಿಂದ ಪೋರ್ತುಗೀಜರ ಅತ್ತ ಕಡೆಯ ವ್ಯಾಪಾರವು ಕುಗ್ಗಿತು. ಹಡಗುಪಡೆಯ ಸಾಮರ್ಥ್ಯದ ಸೊಕ್ಕಿನಿಂದ ಪೋರ್ತುಗೀಜರು ಜಹಂಗೀರನ ಸಂಬಂಧವುಳ್ಳ ಒಂದು ಹಡಗವನ್ನು ಸುಲಿದು ಕೊಂಡದ್ದರಿಂದ ಅವನು ಸಿಟ್ಟಾಗಿ ಇವರನ್ನು ಮುರಿಯುವ ಪ್ರಯತ್ನವನ್ನು ಮಾಡಹತ್ತಿದನು. ೧೬೧೨ ರಲ್ಲಿ ಇಂಗ್ಲಿಷರು ಸುವಾಲಿ ಎಂಬಲ್ಲಿ ಪೋರ್ತುಗೀಜ ರನ್ನು ಸೋಲಿಸಿದ್ದರಿಂದ ಅಂದಿನಿಂದ ಪೋರ್ತುಗೀಜರ ಸ್ಥಾನಗಳು ಕೈಬಿಡ ಹತ್ತಿದವು. ೧೬೭೯ ರಲ್ಲಿ ಸಾಷ್ಟಿ ದ್ವೀಪವನ್ನು ಪೇಶವೆಯರು ಕಸಿದುಕೊಂಡ ದ್ದರಿಂದ ಪೋರ್ತುಗೀಜರು ಉತ್ತರ ಕೊಂಕಣದಿಂದ ಕಾಲ್ತೆಗೆಯಬೇಕಾ

ಯಿತು. ಗೋವೆ, ದೀವ, ದಮನ ಇವು ಇನ್ನೂ ಪೋರ್ತುಗೀಜರ ವಶದಲ್ಲಿಯೇ ಅವೆ.

**ಡಚ್ಚರ ಪ್ರಯತ್ನಗಳು ವಿಫಲವಾದ ಕಾರಣಗಳು**— ಕ್ರಿ. ಶ. ೧೬೫೨ ರ ವರೆಗೆ ಡಚ್ಚರು ಪ್ರಗತಿಯನ್ನು ಹೊಂದುತ್ತಲಿದ್ದರು. ಆದರೆ ಆ ವರ್ಷ ಇಂಗ್ಲಿಷರು ಯುರೋಪದಲ್ಲಿ ಡಚ್ಚರನ್ನು ಸೋಲಿಸಿದರು. ಅಂದಿನಿಂದ ಡಚ್ಚರ ಬಲವು ಕುಂದ ಹತ್ತಿತು. ಹಿಂದುಸ್ಥಾನದಲ್ಲಿಯ ಡಚ್ಚರ ಸ್ಥಾನಗಳೆಲ್ಲ ಇಂಗ್ಲಿಷರ ವಶವಾದವು.

**ಫ್ರೇಂಚರ ಪ್ರಯತ್ನಗಳು ಸಫಲವಾಗದಿರುವ ಕಾರಣಗಳು**— ಫ್ರೇಂಚ ಕಂಪನಿಯವರು ವ್ಯಾಪಾರಕ್ಕಿಂತ ರಾಜಕಾರಣಕ್ಕೆ ಹೆಚ್ಚು ಲಕ್ಷ್ಯ ಗೊಟ್ಟರು. ಇದರಿಂದ ಹಣದ ಕೊರತೆಯಾಗಿ ಅವರು ಹೆಚ್ಚಾಗಿ ಫ್ರೇಂಚ ಸರಕಾರವನ್ನು ಅವಲಂಬಿಸಬೇಕಾಯಿತು. ಆ ಸರಕಾರವು ಯುರೋಪದ ರಾಜಕಾರಣದಲ್ಲಿ ತೊಡಗಿದ್ದರಿಂದ ತಮ್ಮ ಕಂಪನಿಯವರಿಗೆ ಹೊತ್ತಿಗೆ ನೆರ ವಾಗಲಿಲ್ಲ. ವ್ಯವಸ್ಥಾಪಕರು ಯೋಗ್ಯ ಜನರನ್ನು ಆರಿಸಿ ಕಳಿಸುತ್ತಿರಲಿಲ್ಲ. ದುರಾಗ್ರಹ, ಅಸೂಯೆ ಇವುಗಳ ಮೂಲಕ ಕೆಲಸಗಾರರಲ್ಲಿ ಒಕ್ಕಟ್ಟು ಇಲ್ಲ ದಂತಾದದರಿಂದ ಶತ್ರುಗಳಿಗೆ ಸಡಿಲು ಸಿಕ್ಕಿತು. ಲಾಲಿಯು ಉತ್ತರಸರಕಾರ ದಲ್ಲಿದ್ದ ಬುಸಿಯನ್ನು ಕರೆಯಿಸಿಕೊಂಡದ್ದರಿಂದ ಆ ಪ್ರಾಂತವು ಕೈಬಿಟ್ಟಿತು. ಫ್ರೇಂಚ ಹಡಗುಪಡೆಯು ಇಂಗ್ಲಿಷರಿಗಿಂತ ಕಡಿಮೆಯದಿದ್ದದರಿಂದ ಇಂಗ್ಲಿಷ ರನ್ನು ಇದಿರಿಸುವದು ಅವರಿಂದಾಗಲಿಲ್ಲ.

**ಇಂಗ್ಲಿಷರ ಪ್ರಯತ್ನಗಳು ಸಫಲವಾದುದರ ಕಾರಣಗಳು**— ಇಂಗ್ಲಿಷ ಕಂಪನಿಯವರು ವ್ಯಾಪಾರದ ಹೆಚ್ಚಳಕ್ಕೆ ವಿಶೇಷ ಮನಸ್ಸು ಹಾಕು ತ್ತಿದ್ದರು. ರಾಜಕಾರಣದಲ್ಲಿಯೂ ವ್ಯಾಪಾರದ ಬೆಳೆವಣಿಗೆಯೆ ಮುಖ್ಯ ಉದ್ದೇಶವಾಗಿರುತ್ತಿದ್ದಿತು. ಆದದರಿಂದ ಹಣದ ತೊಂದರೆಯ ಪ್ರಸಂಗಗಳು ಹೆಚ್ಚಾಗಿ ಬರಲಿಲ್ಲ. ಇಂಗ್ಲಂಡದ ಸರಕಾರವು ತಮ್ಮ ಕಂಪನಿಯವರಿಗೆ ಎಲ್ಲ ಬಗೆಯಿಂದ ನೆರವಾಗುತ್ತಿದ್ದಿತು. ರೋ, ಹ್ಯಾಮಿಲ್ಟನ್, ಹಾಕಿನ್ಸ, ಕ್ಲೈವ, ವೆಲ್ಲಸ್ಲಿ, ಹೆಸ್ಟಿಂಗ್ಸ ಮೊದಲಾದ ಕೆಲಸಗಾರರು ತಮ್ಮ ದೇಶದ ಕಂಪನಿಯ ಏಳ್ಗೆಗಾಗಿ ಮನಮುಟ್ಟಿ ದುಡಿದರು. ಇಂಗ್ಲಂಡದ ಹಡಗುಪಡೆಯು ಹೆಚ್ಚಿನ ದಿದ್ದದರಿಂದ ಹಿಂದುಸ್ಥಾನದಲ್ಲಿ ಫ್ರೇಂಚರನ್ನು ಹಿಮ್ಮೆಟ್ಟಿಸುವದು ಸುಲಭ ವಾಯಿತು.

ಪ್ರ. :— ಹಿಂದುಸ್ಥಾನದಲ್ಲಿ ಇಂಗ್ಲಿಷ-ಫ್ರೇಂಚರಲ್ಲಾದ ಯುದ್ಧಗಳನ್ನು ಸಂಕ್ಷಿಪ್ತವಾಗಿ ವಿವರಿಸಿರಿ. ಅವುಗಳ ಪರಿಣಾಮವೇನಾಯಿತೆಂಬದನ್ನು ಬರೆಯಿರಿ.

**ಉ.** :— ಹಿಂದುಸ್ಥಾನದಲ್ಲಿ ಇಂಗ್ಲಿಷ-ಫ್ರೇಂಚರ ನಡುವೆ ಮೂರು ಯುದ್ಧಗಳಾದವು. **೧ ನೆಯ ಯುದ್ಧ** (ಕ್ರಿ. ಶ. ೧೭೪೬-೪೮)-ಯುರೋಪ ದಲ್ಲಿ ಇಂಗ್ಲಿಷ-ಫ್ರೇಂಚರಲ್ಲಿ ಯುದ್ಧವಾರಂಭವಾಯಿತು. ಕ್ರಿ. ಶ ೧೭೪೬. ಕೂಡಲೆ ಫ್ರೇಂಚರು ಲಾಬಡೋರ್ನೆ ಎಂಬ ಸೇನಾಪತಿಯನ್ನು ಬಲವಾದ ಹಡಗುಪಡೆಯೊಡನೆ ಹಿಂದುಸ್ಥಾನಕ್ಕೆ ಕಳುಹಿದರು. ಅವನು ಬಂದೊಡನೆ ಮದ್ರಾಸದ ಮೇಲೆ ಸಾಗಿ ಅದನ್ನು ವಶಮಾಡಿಕೊಂಡನು. ಅಷ್ಟರಲ್ಲಿ ಯುರೋಪದಲ್ಲಿ ಉಭಯತರಲ್ಲಿ ಎಕ್ಸಲಾಶಾಪೆಲ ಎಂಬಲ್ಲಿ ಒಪ್ಪಂದವಾಗಿ ಈ ದೇಶದಲ್ಲಿಯ ಯುದ್ಧವೂ ನಿಂತಿತು. ಮದ್ರಾಸವು ಇಂಗ್ಲಿಷರಿಗೆ ಮರಳಿ ದೊರೆಯಿತು **೨ ನೆಯ ಯುದ್ಧ** (ಕ್ರಿ. ಶ. ೧೭೫೧-೧೭೫೫)— ಇಂಗ್ಲಿಷ ಫ್ರೇಂಚರಲ್ಲಿಯ ಯುದ್ಧವು ನಿಂತರೂ ಈ ದೇಶದಲ್ಲಿಯ ಎರಡೂ ಕಂಪನಿಗಳ ನಡುವೆ ಹಗೆತನವು ತಪ್ಪಲಿಲ್ಲ ಅವರು ಒಬ್ಬರನ್ನೊಬ್ಬರು ನಾಶಗೊಳಿಸುವ ಪ್ರಸಂಗವನ್ನು ಕಾಯುತ್ತಿದ್ದರು. ಇಂಥ ಸಮಯದಲ್ಲಿ ಹೈದರಾಬಾದ-ಅರ್ಕಾಟಗಳಲ್ಲಿ ಪಟ್ಟದ ಸಲುವಾಗಿ ಜಗಳಗಳು ಉಂಟಾದವು. ಕ್ರಿ. ಶ ೧೭೪೮ ರಲ್ಲಿ ನಿಜಾಮ ಉಲ್ಮುಲ್ಕನು ಸಾಯಲು ಅವನ ಮಗನಾದ ನಾಸಿರಜಂಗ ನಿಗೂ ಅಣ್ಣನ ಮಗನಾದ ಸಲಾಬತ ಜಂಗನಿಗೂ ಪಟ್ಟದ ಸಲುವಾಗಿ ಜಗಳ ಹತ್ತಿತು. ಅತ್ತ ಅರ್ಕಾಟದ ಪಟ್ಟದ ಸಲುವಾಗಿ ಅನುವರುದ್ದೀನ-ಚಂದಾ ಸಾಹೇಬರಲ್ಲಿ ಜಗಳ ಹತ್ತಿತು. ಆಗ ಇಂಗ್ಲಿಷರು ನಾಸಿರಜಂಗ ಮತ್ತು ಅನುವ ರುದ್ದೀನ ಇವರ ಪಕ್ಷವನ್ನೂ ಫ್ರೇಂಚರು ಮುಜಫರಜಂಗ-ಚಂದಾಸಾಹೇಬ ಇವರ ಪಕ್ಷವನ್ನೂ ಹಿಡಿದರು. ಫ್ರೇಂಚರು ಮುಜಫರಜಂಗ-ಚಂದಾಸಾಹೇಬ ರನ್ನು ಕೂಡಿಕೊಂಡು ಅನುವರುದ್ದೀನನ ಮೇಲೆ ಸಾಗಿದರು. ಕ್ರಿ. ಶ. ೧೭೪೯ ರಲ್ಲಿ ಅಂಬೂರ ಎಂಬಲ್ಲಿ ಯುದ್ಧವಾಗಿ ನವಾಬನು ಸೋತು ಹತನಾದನು. ಅವನ ಮಗ ಮಹಮ್ಮದ ಅಲಿಯು ತ್ರಿಚನಾಪಳ್ಳಿಗೆ ಓಡಿಹೋದನು. ಚಂದಾ ಸಾಹೇಬನು ಅರ್ಕಾಟದ ನವಾಬನಾದನು. ಮುಂದೆ ಮುಜಫರಜಂಗನೂ ಫ್ರೇಂಚರೂ ಹೈದರಾಬಾದದ ಕಡೆಗೆ ನಡೆದರು. ಅಷ್ಟರಲ್ಲಿ ನಾಸಿರಜಂಗನು ಕೊಲ್ಲಲ್ಪಟ್ಟದ್ದರಿಂದ ಮುಜಫರಜಂಗನಿಗೆ ಅನಾಯಾಸವಾಗಿ ಪಟ್ಟದೊರೆ ಯುವ ಹಾಗೆ ಇದ್ದಿತು. ಆದರೆ ದಾರಿಯಲ್ಲಿ ಬುಸಿಯು ಹಿಂದೆ ಉಳಿದ ಹೊತ್ತು

ಸಾಧಿಸಿ ಕಡಪೆಯ ನವಾಬನು ಮುಜಫರಜಂಗನನ್ನು ಕೊಲ್ಲಿಸಿದನು. ಬುಸಿಯು ಹೈದರಾಬಾದಕ್ಕೆ ಹೋಗಿ ನಿಜಾಮ ಉಲ್ಮುಲ್ಕನ ಇನ್ನೊಬ್ಬ ಮಗನಾದ ಸಲಾಬತೆಜಂಗನನ್ನು ಪಟ್ಟಕ್ಕೆಕುಳ್ಳಿರಿಸಿ, ಅಲ್ಲಿ ಏಳು ವರ್ಷಗಳವರೆಗೆ ನಿಂತು ಫ್ರೇಂಚರ ವರ್ಚಸ್ಸನ್ನು ನೆಲೆಗೊಳಿಸಿದನು.

ಇತ್ತ ಚಂದಾಸಾಹೇಬನು ಕ್ರಿ. ಶ. ೧೭೫೧ ರಲ್ಲಿ ತ್ರಿಚಿನಾಪಲ್ಲಿಯನ್ನು ಮುತ್ತಿದನು. ತ್ರಿಚನಾಪಳ್ಳಿಯೊಂದು ಕೈಸೇರಿದರೆ ಅರ್ಕಾಟಪ್ರಾಂತವೇ ಫ್ರೇಂಚರ ಆಧೀನವಾಗುವದೆಂದು ನೆನೆದು ಇಂಗ್ಲಿಷರ ಕಡೆಯ ಕ್ಯಾಪ್ಟನ್ ಕ್ಲೈವನು—"ಈಗ ನಾವು ಅರ್ಕಾಟವನ್ನು ಮುತ್ತಿದರೆ ಅದನ್ನು ಉಳಿಸಿ ಕೊಳ್ಳುವದಕ್ಕಾಗಿ ಚಂದಾಸಾಹೇಬನು ತ್ರಿಚನಾಪಳ್ಳಿಯನ್ನು ಬಿಟ್ಟು ಬರು ವನು; ಇದರಿಂದ ಸಹಜವಾಗಿ ಮಹಮ್ಮದ ಅಲಿಯ ಬಿಡುಗಡೆ ಯಾಗುವದು; ಅಪ್ಪಣೆಯಾದರೆ ಈ ಕೆಲಸಕ್ಕೆ ಸಿದ್ಧನಿರುವೆನು" ಎಂದು ಗವ್ಹರ್ನರನಿಗೆ ತಿಳಿಸಿ ದನು ಕ್ಲೈವನ ನೀರು ಗೊತ್ತಿದ್ದದರಿಂದ ಗವ್ಹರ್ನರನು ಅದಕ್ಕೆ ಒಪ್ಪಿದನು. ಕ್ಲೈವನು ೫೦೦ ಜನ ರಾಹುತರೊಂದಿಗೆ ಸಾಗಿ ಅರ್ಕಾಟದ ಮೇಲೆ ಬಿದ್ದು ಅದನ್ನು ವಶಮಾಡಿಕೊಂಡನು. ಅರ್ಕಾಟವು ಇಂಗ್ಲಿಷರ ವಶವಾಗಲು, ಅದನ್ನು ಉಳಿಸಿಕೊಳ್ಳುವದಕ್ಕಾಗಿ ಚಂದಾಸಾಹೇಬನು ತನ್ನ ಮಗನಾದ ರಾಜೇ ಸಾಹೇಬನನ್ನು ದೊಡ್ಡ ದಂಡಿನೊಡನೆ ಕಳುಹಿದನು. ರಾಜೇಸಾಹೇಬನು ಅರ್ಕಾಟವನ್ನು ಮುತ್ತಿದನು. ಈ ಮುತ್ತಿಗೆಯನ್ನು ೫೩ ದಿವಸಗಳ ವರೆಗೆ ಕ್ಲೈವನು ಧೈರ್ಯದಿಂದ ತಡೆದನು. ಆಗ ನಿರಾಶನಾಗಿ ರಾಜೇಸಾಹೆಬನು ಹೊರಟುಹೋದನು. ಮದ್ರಾಸದ ಹೊಸ ದಂಡು ಬರಲು ಕ್ಲೈವನು ರಾಜೇ ಸಾಹೇಬನ ಮೇಲೆ ಸಾಗಿ ಆರಣಿಯ ಹತ್ತಿರ ಅವನನ್ನು ಸೋಲಿಸಿ ಕಾಂಜೀ ವರಮುವನ್ನು ತೆಗೆದುಕೊಂಡನು. ಮುಂದೆ ರಾಜೇಸಾಹೇಬನು ಮದ್ರಾಸದ ಮೇಲೆ ಸಾಗಿರಲು ಕ್ಲೈವನು ಕವರಪಾಕದ ಹತ್ತಿರ ಮತ್ತೊಮ್ಮೆ ಅವನನ್ನು ಸೋಲಿಸಿದನು. ಬಳಿಕ ಕ್ಲೈವನೂ ಮೇಜರ ಲಾರೆನ್ಸನೂ ತ್ರಿಚನಾಪಳ್ಳಿಗೆ ಹೋಗಿ ಚಂದಾಸಾಹೇಬನನ್ನು ಸೋಲಿಸಿದನು. ಕಡೆಗೆ ಬಾಹೂರ ಎಂಬಲ್ಲಿ ಇಂಗ್ಲಿಷ ಫ್ರೇಂಚರಲ್ಲಿ ಯುದ್ಧವಾಗಿ ಫ್ರೇಂಚರು ಸೋತರು. ಮಹಮ್ಮದ ಅಲಿಯು ನವಾಬನಾದನು ಕ್ರಿ. ಶ. ೧೭೫೨.

ಈ ಯುದ್ಧದ ಪ್ರಸಂಗದಿಂದ ಫ್ರೇಂಚರ ಬೊಕ್ಕಸವು ಬರಿದಾಯ್ತು. ಇಚ್ಛೆಯಂತೆ ಫ್ರೇಂಚ ಸರಕಾರವು ನೆರವಾಗಲಿಲ್ಲ; ಇಷ್ಟೇ ಅಲ್ಲ; ಅಪ್ಪಣೆ

ಯಿಲ್ಲದೆ ಯುದ್ಧಮಾಡಿದನೆಂದು ತಪ್ಪು ಹೊರಿಸಿ ಡೂಪ್ಲೆಯನ್ನು ಫ್ರಾನ್ಸಕ್ಕೆ ಕರೆಯಿಸಿಕೊಂಡು ಗೊಡೆಹು ಎಂಬವನನ್ನು ಗವ್ಹರ್ನರನನ್ನಾಗಿ ಕಳುಹಿದರು. ಅವನು ಬಂದು ಇಂಗ್ಲಿಷರೊಡನೆ ಪಾಂಡಿಚೇರಿಯಲ್ಲಿ ಒಪ್ಪಂದ ಮಾಡಿಕೊಂಡನು. ಕ್ರಿ. ಶ. ೧೭೫೪.

**ಇಂಗ್ಲಿಷ-ಫ್ರೇಂಚರ ೩ನೆಯ ಮತ್ತು ಕೊನೆಯ ಯುದ್ಧ—** (ಕ್ರಿ. ಶ. ೧೭೫೮–೧೭೬೧) —ಕ್ರಿ. ಶ. ೧೭೫೬ ರಲ್ಲಿ ಯುರೋಪದಲ್ಲಿ ಇಂಗ್ಲಿಷ –ಫ್ರೇಂಚರಲ್ಲಿ ಯುದ್ಧವು ಆರಂಭವಾಗಲು ಫ್ರೇಂಚರು ಕೌಂಟ ಲಾಲಿ ಎಂಬವನನ್ನು ದೊಡ್ಡ ಹಡಗುಪಡೆಯೊಂದಿಗೆ ಹಿಂದುಸ್ಥಾನಕ್ಕೆ ಕಳುಹಿದರು. ಅವನು ಈ ದೇಶಕ್ಕೆ ಬಂದಕೂಡಲೆ ಫೋರ್ಟಸೆಂಟ ಡೆವ್ಹಿಡನನ್ನು ವಶಮಾಡಿಕೊಂಡ ಬಳಿಕ ಉತ್ತರ ಸರಕಾರದಲ್ಲಿದ್ದ ಬುಸಿಯನ್ನು ಸಹಾಯಕ್ಕೆ ಕರೆದುಕೊಂಡು ಮದ್ರಾಸದಮೇಲೆ ಸಾಗಿದನು. ಅಷ್ಟರಲ್ಲಿ ಇಂಗ್ಲಿಷರ ಕಡೆಯ ಸರ್ ಆಯರ ಕೂಟನೆಂಬ ಸೇನಾಪತಿಯು ಅವನನ್ನು ತಡೆದನು. ಎರಡೂ ಸೈನ್ಯಗಳಲ್ಲಿ ವಾಂಡಿವಾಷ ಎಂಬಲ್ಲಾದ ಯುದ್ಧದಲ್ಲಿ ಲಾಲಿಯು ಸೋತು ಪಾಂಡಿಚೇರಿಗೆ ಬಂದನು. ಆದರೆ ಕೂಟನು ಅಲ್ಲಿಯೂ ಬೆನ್ನಟ್ಟಿ ಬಂದು ಪಾಂಡಿಚೇರಿಯನ್ನು ವಶಮಾಡಿಕೊಂಡನು. ಕ್ರಿ. ಶ. ೧೭೬೧. ಲಾಲಿಯು ಸೆರೆಸಿಕ್ಕು ಇಂಗ್ಲಂಡಕ್ಕೆ ಕಳುಹಲ್ಪಟ್ಟನು. ಅತ್ತ ಕರ್ನಲ್ ಫೋರ್ಡನು ಉತ್ತರ ಸರಕಾರವನ್ನೂ ಕ್ಲೈವನು ಚಂದ್ರನಗರವನ್ನೂ ಹಿಡಿದುಕೊಂಡರು. ಪಾಂಡಿಚೇರಿ ಕೈಬಿಟ್ಟದ್ದಕ್ಕೆ ಫ್ರೇಂಚರ ಕಸುವು ಕುಂದಿತು. ಕ್ರಿ. ಶ. ೧೭೬೩ ರಲ್ಲಿ ಪಾರೀಸದ ಒಪ್ಪಂದದಿಂದ ಯುರೋಪದಲ್ಲಿಯ ಇಂಗ್ಲಿಷ ಫ್ರೇಂಚರ ಯುದ್ಧವು ನಿಂತಿತು. ಪಾಂಡಿಚೇರಿ–ಚಂದ್ರನಗರಗಳು ಮರಳಿ ಫ್ರೇಂಚರಿಗೆ ದೊರೆತವು. ಆಗಿನಿಂದ ಫ್ರೇಂಚ ಕಂಪನಿಯವರು ರಾಜ್ಯದಾಶೆ ಬಿಟ್ಟು ವ್ಯಾಪಾರವನ್ನೇ ಮಾಡಹತ್ತಿದರು.

**ಕ್ರಿ. ಶ. ೧೭೬೧ ನೆಯ ವರ್ಷದ ಮಹತ್ವ—** ಕ್ರಿ. ಶ. ೧೭೦೫ ರಿಂದ ೧೭೬೧ ರ ವರೆಗೆ ಮರಾಠರು ಒಂದೇಸವನೆ ಪ್ರಬಲರಾಗುತ್ತ ಅವರು ಸಾಮ್ರಾಜ್ಯಸ್ಥಾಪನೆಗೆ ತೀರ ಸಮೀಪಿಸಿದ್ದರು. ಪಾಣಿಪತ್ತದಲ್ಲಿ ಅಬ್ದಾಲಿಯ ವಿರುದ್ಧ ಮರಾಠರಿಗೆ ಪೂರ್ಣ ಜಯದೊರೆತಿದ್ದರೆ ಅವರೇ ದಿಲ್ಲಿಯಲ್ಲಿ ಪೂರ್ಣ ಅಧಿಕಾರವನ್ನು ಸ್ಥಾಪಿಸುತ್ತಿದ್ದರು. ಅಬ್ದಾಲಿಗೂ ದೇಶಬಿಟ್ಟು ಹೋಗುವಷ್ಟು ಪೆಟ್ಟು ತಾಗಿತು. ಮರಾಠರಿಗೂ ದೊಡ್ಡ ಹಾನಿಯಾಯಿತು. ಈ ಪ್ರಸಂಗದಲ್ಲಿ ಪಾಂಡಿ

ವಾಷದಲ್ಲಿ ಯಾರಿಗೆ ಜಯವೋ ಅವರೇ ಬಲಿಷ್ಠರಾಗುವವರಿದ್ದರು. ಇಂಗ್ಲಿಷ ರಿಗೆ ಜಯ ದೊರೆತದರಿಂದ ಅವರೇ ಮುಂದುವರಿಯಲು ಅನುಕೂಲವಾಯಿತು. ಅವರು ಸಾಧಿಸಿದಾಗೆಲ್ಲ ಮರಾಠರ ರಾಜ್ಯದಲ್ಲಿ ಕೈ ಹಾಕುತ್ತ ಮದ್ರಾಸ ಬಂಗಾಲಗಳಲ್ಲಿ ತಮ್ಮ ವರ್ಚಸ್ಸನ್ನು ನೆಲೆಗೊಳಿಸುತ್ತ ಕ್ರಿ. ಶ. ೧೮೦೦ ನೆಯ ಇಸವಿಗೆ ಬಂದು ನಿಲುಕಿದರು. ಅಲ್ಲಿಂದ ಮುಂದೆ ವಸಯಿ ಒಪ್ಪಂದದಿಂದ ದೇಶವೆಯೂ ಇಂಗ್ಲಿಷರ ಕೈಗೊಂಬೆಯಾದದರಿಂದ ಅವರ ರಾಜ್ಯ ವಿಸ್ತಾರಕ್ಕೆ ಪೂರ್ಣ ಅವಕಾಶ ಉಂಟಾಯಿತು. ಅಂದು ಇಂಗ್ಲಿಷರೇ ಈ ದೇಶವನ್ನು ಆಳು ವರೆಂದು ಒಡೆದು ಕಾಣಿಸಿತು !

**ಪ್ರ :— ಬಂಗಾಲದಲ್ಲಿ ಇಂಗ್ಲಿಷರ ಅಧಿಕಾರವು ಹೇಗೆ ಸ್ಥಿರವಾಯಿತೆಂಬದನ್ನು ಸಂಕ್ಷಿಪ್ತವಾಗಿ ವಿವರಿಸಿರಿ.**

**ಉ. :—** ಅಲಿವರ್ದಿಖಾನನು ಮೊದಲು ಬಂಗಾಲದ ಮೊಗಲ ಸುಭೇ ದಾರನಾಗಿದ್ದನು ಮುಂದೆ ಅಲ್ಲಿಯ ಬಾದಶಹರು ದುರ್ಬಲರಾದ ಹೊತ್ತು ಸಾಧಿಸಿ ಸ್ವತಂತ್ರನಾಗಿ ನವಾಬನೆನಿಸಿದನು. ಇವನು ದಕ್ಷತೆಯಿಂದ ಕಾರಭಾರ ಸಾಗಿಸಿದ್ದನು. ಡಚ್ಚ, ಫ್ರೇಂಚ, ಇಂಗ್ಲಿಷ ಈ ಯುರೋಪಿಯನರ ಸ್ಥಾನ ಗಳು ಇವನ ರಾಜ್ಯದಲ್ಲಿದ್ದವು. ಈ ಪರಕೀಯರನ್ನು ಬಲಿಯಗೊಟ್ಟರೆ ರಾಜ್ಯಕ್ಕೆ ಅಪಾಯವಾಗುವದೆಂದು ತಿಳಿದು ಇವರ ಸುಳಿದಾಟದ ಮೇಲೆ ಕಣ್ಣಿಟ್ಟಿದ್ದನು. ಇಂಗ್ಲಿಷರ ಮೇಲಂತು ಇವನ ಲಕ್ಷವು ಹೆಚ್ಚಾಗಿದ್ದಿತು. ಅಪ್ಪಣೆಯಿಲ್ಲದೆ ಕೋಟೆ–ಕೊತ್ತಳಗಳನ್ನು ಕಟ್ಟಗೊಡುತ್ತಿರಲಿಲ್ಲ. ಕಂಪನಿಯ ಸರಕಿಗೆ ಸುಂಕ ವಿರಲಿಲ್ಲ; ಅದರ ಜೊತೆಗೆ ಕಂಪನಿಯ ಕೆಲಸಗಾರರೂ ತಮ್ಮ ಸ್ವಂತದ ಸರಕುಗಳನ್ನು ಸುಂಕವಿಲ್ಲದೆ ಒಯ್ಯುತ್ತಿದ್ದರು. ಇದನ್ನು ನವಾಬನು ತಡೆಯು ತ್ತಿದ್ದನು. ಹೀರಗಿಲು ಕ್ರಿ. ಶ. ೧೭೫೬ ರಲ್ಲಿ ಅಲಿವರ್ದಿಖಾನನು ಮರಣ ಹೊಂದಿದನು. ಆಗ ಇವನ ಮೊಮ್ಮಗನಾದ ಸಿರಾಜ ಉದ್ದೌಲನು ನವಾಬ ನಾದನು. ಸಿರಾಜ ಉದ್ದೌಲನು ಇಂಗ್ಲಿಷರನ್ನು ಸೇರುತ್ತಿರಲಿಲ್ಲ. ಕಿಸನದಾಸ ನೆಂಬ ಸಾವುಕಾರನು ತನ್ನ ಬದುಕನ್ನೆಲ್ಲ ಕಟ್ಟಿಕೊಂಡು ಕಲಕತ್ತೆಯಲ್ಲಿ ಇರ ಹತ್ತಿದನು. ಕಲಕತ್ತೆಯ ಗವ್ಹರ್ನರನಾದ ಡ್ರೇಕನು ನವಾಬನ ಒಪ್ಪಿಗೆಯಿಲ್ಲದೆ ಕೋಟೆಯನ್ನು ಭದ್ರಪಡಿಸಹತ್ತಿದನು. ಆಗ ನವಾಬನು—“ಕಿಸನದಾಸ ನನ್ನು ನಮ್ಮ ವಶಕ್ಕೆ ಕೊಡಬೇಕು; ಕೋಟೆಯ ಹೊಸದಾಗಿ ಕಟ್ಟಿಸಿದ ಭಾಗ ವನ್ನು ಕೆಡವಿಸಬೇಕು;” ಎಂದು ಡ್ರೇಕನಿಗೆ ತಿಳಿಸಿದನು. ಆಗ ಡ್ರೇಕನು

ಕಿನನದಾನನ ವಿಷಯವನ್ನೇ ಕೈಬಿಟ್ಟು, "ಫ್ರೇಂಚರು ಏರಿಬರುವ ಸಂಭವ ವಿದ್ದದರಿಂದ ಗೀಳಾದ ಭಾಗವನ್ನಷ್ಟೇ ಸರಿಪಡಿಸಿದ್ದೇವೆ; ಹೊಸ ಕೆಲಸವನ್ನು ಮಾಡಿಸಿಲ್ಲ." ಎಂದು ಉತ್ತರ ಕಳಿಸಿದನು. ಇದರಿಂದ ನವಾಬನು ಸಿಟ್ಟಾಗಿ ಇಂಗ್ಲಿಷರ ಎಲ್ಲ ಸ್ಥಾನಗಳನ್ನು ಕಸಿದುಕೊಳ್ಳಬೇಕೆಂದು ಅಪ್ಪಣೆ ಕೊಟ್ಟನು. ಅವನ ಅಧಿಕಾರಿಗಳು ಕಾಸೀಮ ಬಝಾರವನ್ನು ವಶಪಡಿಸಿಕೊಂಡು ಅಲ್ಲಿದ್ದ ಇಂಗ್ಲಿಷರನ್ನು ಸೆರೆಹಿಡಿದು ಕಲಕತ್ತೆಯ ಮೇಲೆ ಸಾಗಿದರು. ನವಾಬನ ದೊಡ್ಡ ಸೈನ್ಯಕ್ಕೆ ಹೆದರಿ ಡ್ರೇಕನು ಬಹುಜನ ಇಂಗ್ಲಿಷರೊಂದಿಗೆ ಕೋಟೆ ಯಿಂದ ಪಾರಾಗಿ ಹಡಗಗಳನ್ನೇರಿ ಮುಖದ ಬಳಿಯ ಫೂಲ್ಟಾದಲ್ಲಿ ಹೋಗಿ ನಿಂತನು. ಕಲಕತ್ತೆಯು ನವಾಬನ ವಶವಾಯಿತು. ಅಲ್ಲಿದ್ದ ಜನರು ಸೆರೆಹಿಡಿ ಯಲ್ಪಟ್ಟರು

ಕಲಕತ್ತೆಯು ಕೈಬಿಟ್ಟ ಸುದ್ದಿಯು ಮದ್ರಾಸಕ್ಕೆ ಮುಟ್ಟಿತು. ಅಲ್ಲಿ ಎರಡು ತಿಂಗಳು ವಿಚಾರ ನಡೆದು, ಕಲಕತ್ತೆಗೆ ಸೈನ್ಯವನ್ನು ಕಳುಹಿಸುವದು ಗೊತ್ತಾಯಿತು. ಆಮೇಲೆ ವಾಟ್ಸನನೂ ಕ್ಲೈವನೂ ಕ್ರಿ. ಶ. ೧೭೫೬ ರ ಕೊನೆಗೆ ಫೂಲ್ಟಾಕ್ಕೆ ಬಂದರು. ಈ ಹೊತ್ತಿಗೆ ದಿಲ್ಲಿಯ ಬಾದಶಹನ ಮಗನು ಬಂಗಾಲದ ಮೇಲೆ ದಂಡೆತ್ತಿ ಬರುವನೆಂದು ತಿಳಿದದರಿಂದ ಸಿರಾಜ ಉದ್ದೌ ಲನ ಲಕ್ಷ್ಯವು ಕಲಕತ್ತೆಯ ಕಡೆಗೆ ಇಲ್ಲದಾಯಿತು. ಪ್ರಸಂಗವನ್ನು ಸಾಧಿಸಿ ಕ್ಲೈವನು ಕಲಕತ್ತೆಯನ್ನು ವಶಮಾಡಿಕೊಂಡನು. ಈ ಸುದ್ದಿ ಕೇಳಿ ಸಿರಾಜ ಉದ್ದೌಲನು ಇಂಗ್ಲಿಷರನ್ನು ತಡೆಯಲು ಹೊರಟು ಡಮ್ ಡಮ್ ಎಂಬಲ್ಲಿ ಸೋತು ಒಪ್ಪಂದ ಮಾಡಿಕೊಂಡನು. ಇಂಗ್ಲಿಷರ ಸ್ಥಾನಗಳನ್ನೆಲ್ಲ ಬಿಟ್ಟು ಕೊಟ್ಟು ಕಲಕತ್ತೆಯಲ್ಲಾದ ಹಾನಿಯನ್ನು ತುಂಬಿಕೊಡಬೇಕಾಯಿತು.

ಇಷ್ಟರಲ್ಲಿ ಇಂಗ್ಲಿಷ-ಫ್ರೇಂಚರ ಮೂರನೆಯ ಯುದ್ಧವು ಆರಂಭ ವಾಯಿತು. ಆಗ ಕ್ಲೈವನು ಚಂದ್ರನಗರವನ್ನು ಹಿಡಿದುಕೊಂಡು ಫ್ರೇಂಚರ ಉಳಿದ ಸ್ಥಳಗಳನ್ನು ಹಿಡಿದುಕೊಳ್ಳಲು ನೆರವಾಗಬೇಕೆಂದು ಸಿರಾಜ ಉದ್ದೌ ಲನಿಗೆ ತಿಳಿಸಿದನು. ಸಿರಾಜ ಉದ್ದೌಲನಿಗೆ ಇಂಗ್ಲಿಷರು ಬಲಿಯುವದು ಬೇಡಾಯಿತು. ಫ್ರೇಂಚರನ್ನು ನೆರವಿಗೆ ಕರೆದು ಇಂಗ್ಲಿಷರನ್ನೇ ಇದಿರಿಸುವ ಒಳಸಂಚು ನಡೆಯಿಸಿದನು. ಸಿರಾಜ ಉದ್ದೌಲನ ಸೇನಾಪತಿಯಾದ ಮೀರ ಜಾಫರನು ತಾನೇ ನವಾಬನಾಗುವ ಆಶೆಯಿಂದ ಸಿರಾಜ ಉದ್ದೌಲನ ವಿರುದ್ಧ ಕ್ಲೈವನೊಡನೆ ಒಳಸಂಚು ನಡೆಯಿಸಿದನು. "ಕ್ಲೈವನು ಸಿರಾಜ ಉದ್ದೌಲನ

ಮೇಲೆ ಸಾಗಿಬಂದಾಗ ಆಯತ ಹೊತ್ತಿಗೆ ಮೀರಜಾಫರನು ಸೈನ್ಯದೊಂದಿಗೆ ಕ್ಲೈವನನ್ನು ಕೂಡಿಕೊಳ್ಳತಕ್ಕದ್ದು.'' ಎಂದು ಗೊತ್ತುಮಾಡಿಕೊಂಡನು.

ಪ್ಲಾಸಿಯ ಯುದ್ಧ– ಕ್ರಿ. ಶ. ೧೭೫೭— ಕ್ಲೈವನು ಸಿರಾಜ ಉದ್ದೌಲನ ಮೇಲೆ ಸಾಗಿದನು. ಪ್ಲಾಸಿ ಎಂಬಲ್ಲಿ ಎರಡೂ ಸೈನ್ಯಗಳು ಕೂಡಿದವು. ಮೀರಜಾಫರನು ತನ್ನ ಸೈನ್ಯದೊಂದಿಗೆ ಬದಿಗಾದನು. ಕ್ಲೈವನನ್ನು ಕೂಡಿಕೊಳ್ಳಲಿಲ್ಲ. ಯುದ್ಧವು ನಡೆದು ಸಿರಾಜ ಉದ್ದೌಲನ ನಂಬುಗೆಯವನಾದ ಮೀರ ಮದನನು ಸಾಯಲು ಸಿರಾಜ ಉದ್ದೌಲನು ಓಡಿಹೋದನು. ಕ್ಲೈವನಿಗೆ ಜಯ ದೊರೆಯಿತು. ಕ್ಲೈವನು ಮೀರಜಾಫರನ ಮೇಲಿನ ಸಿಟ್ಟನ್ನು ಹೊಟ್ಟೆಯೊಳಗಿಟ್ಟು ಅವನನ್ನು ಮರ್ಯಾದೆಯಿಂದ ಮುರ್ಶಿದಾಬಾದಕ್ಕೆ ಕರೆದೊಯ್ದು ನವಾಬನನ್ನು ಮಾಡಿದನು. ಸಿರಾಜ ಉದ್ದೌಲನು ಕೈಗೆಸಿಕ್ಕು ಮೀರಜಾಫರನ ಮಗನಾದ ಮೀರನನಿಂದ ಕೊಲ್ಲಿಸಲ್ಪಟ್ಟನು. ಮೊದಲು ಒಪ್ಪಿದ ಮೇರೆಗೆ ಮೀರಜಾಫರನು ೩ ಕೋಟಿ ೨೦ ಲಕ್ಷ ರೂಪಾಯಿಗಳನ್ನು ಕೊಟ್ಟನು.

ರಾಜ್ಯ ಸ್ಥಾಪನೆಗಾಗಿ ಇಂಗ್ಲಿಷರು ಕೈಕೊಂಡ ಯುದ್ಧಗಳಲ್ಲಿ ಇದೇ ಮೊದಲನೆಯದು. ಪ್ಲಾಸಿಯ ಜಯದ ನಂತರ ಇಂಗ್ಲಿಷರ ಅಧಿಕಾರವು ಬಂಗಾಲದಲ್ಲಿ ಸ್ಥಿರವಾಯಿತು ಇದೇ ಜಯದ ಬಲದಿಂದ ಇಂಗ್ಲಿಷರು ಫ್ರೇಂಚರನ್ನು ವಾಂಡಿವಾಷದಲ್ಲಿ ಪೂರ್ಣವಾಗಿ ಸೋಲಿಸಿದರು.

**ಪ್ರ. :— ಮೀರಜಾಫರ ಮತ್ತು ಮೀರಕಾಸೀಮ ಇವರ ಆಳಿಕೆಯನ್ನು ವಿವರಿಸಿರಿ. ಇವರಿಬ್ಬರ ಆಳಿಕೆಯಲ್ಲಿ ಇಂಗ್ಲಿಷರ ಅಧಿಕಾರವು ಹೇಗೆ ಬಲಗೊಂಡಿತೆಂಬದನ್ನು ಹೇಳಿರಿ.**

**ಉ. :— ಮೀರಜಾಫರ—** ಮೀರಜಾಫರನು ನವಾಬನಾದುದಕ್ಕೆ ದಿಲ್ಲಿಯ ಬಾದಶಹನು ಒಪ್ಪಲಿಲ್ಲ. ಅವನು ತನ್ನ ಮಗ ಅಲ್ಲಿ ಗೋಹರನನ್ನು ಅಯೋಧ್ಯೆಯ ಸುಜಾಉದ್ದೌಲನೊಂದಿಗೆ ಬಂಗಾಲದ ಮೇಲೆ ಕಳುಹಿದನು. ಧೂರ್ತನಾದ ಕ್ಲೈವನು ಯುದ್ಧಕ್ಕೆ ನಿಲ್ಲದೆ ಮೀರಜಾಫರನಿಂದ ಬಾದಶಹನಿಗೆ ಕಾಣಿಕೆ ಕೊಡಿಸಿದನು. ಆಗ ಬಾದಶಹನು ಮೀರಜಾಫರನು ನವಾಬನೆಂದು ಒಪ್ಪಿದನು. ಅಲ್ಲದೆ ಕ್ಲೈವನಿಗೆ ೧೧ ಸಾವಿರದ ಮನಸಬದಾರಿಯನ್ನು ಕೊಟ್ಟನು. ಇಂಗ್ಲಿಷರ ಬಲವು ಹೆಚ್ಚಿತು. ಮೀರಜಾಫರನ ಹಣವು ಹೋಯಿತು. ಅವನ ಆಳಿಕೆ ಸುಸೂತ್ರ ಸಾಗಲಿಲ್ಲ. ಹಣ ಕೊಡುವದರಲ್ಲಿಯೇ ಹಣ್ಣಾದನು.

ಆಗ ಅವನು ಇಂಗ್ಲಿಷರ ಸಂಬಂಧವನ್ನು ತಪ್ಪಿಸಿಕೊಳ್ಳಬೇಕೆಂದು ಚಿನ್ಸೂರೆಯ ಡಚ್ಚರ ನೆರವನ್ನು ಕೇಳಿದನು. ಅದೇ ಸಮಯಕ್ಕೆ ಡಚ್ಚರ ಹೊಸದಂಡು ಚಿನ್ಸೂರೆಗೆ ಬಂದಿಳಿಯಿತು. ಇದನ್ನೆಲ್ಲ ತಿಳಿದ ಕ್ಲೈವನು ತಡಮಾಡದೆ ಕರ್ನಲ ಫೋರ್ಡನನ್ನು ಡಚ್ಚರ ಮೇಲೆ ಸಾಗಿಸಿ, ಅವರನ್ನು ಸೋಲಿಸಿ ಅವರ ಹಡಗುಪಡೆಯನ್ನು ನಾಶಮಾಡಿದನು ಡಚ್ಚರು ಮೀರಜಾಫರನಿಗೆ ನೆರ ವಾಗುವ ಭರದಲ್ಲಿ ಸ್ವಂತದ ವರ್ಚಸ್ಸನ್ನು ಪೂರಾ ಕಳೆದುಕೊಂಡರು. ಅಂದಿ ನಿಂದ ಅವರು ಬರಿಯ ವ್ಯಾಪಾರಮಾಡಿಕೊಂಡು ಇರಹತ್ತಿದರು.

ಕ್ರಿ. ಶ. ೧೭೬೦ ರಲ್ಲಿ ಕ್ಲೈವನು ಇಂಗ್ಲಂಡಕ್ಕೆ ಹೋದಬಳಿಕ ವಾನ್ಸಿ ಟಾರ್ಟನು ಕಲಕತ್ತೆಯ ಗವ್ಹರ್ನರನಾದನು. ಆಗ ಷಹಆಲಮನೂ ಸುಜಾ ಉದ್ದೌಲನೂ ಮತ್ತೆ ಬಂಗಾಲದ ಮೇಲೆ ಸಾಗಿ ಬಂದರು. ಅವರನ್ನು ಇಂಗ್ಲಿ ಷರೂ ಮೀರಜಾಫರನ ಮಗ ಮೀರನನೂ ಕೂಡಿ ಪೂರಾ ಸೋಲಿಸಿದರು. ಆದರೆ ಆಗ ಮೀರನನು ಸಿಡಿಲು ಬಡಿದು ಸತ್ತನು.

**ಮೀರಕಾಸೀಮ**— ಮೀರನನು ಸತ್ತಬಳಿಕ ಮೀರಜಾಫರನ ಅಳಿಯ ಮೀರಕಾಸೀಮನು ತನ್ನನ್ನು ನವಾಬನನ್ನು ಮಾಡಬೇಕೆಂದು ಕೇಳಿಕೊಂಡನು. ಆಗ ವಾನ್ಸಿ ಟಾರ್ಟನು ಮೀರಜಾಫರನನ್ನು ತಳ್ಳಿ ಮೀರಕಾಸೀಮನನ್ನು ಪಟ್ಟಕ್ಕೆ ತಂದನು ಇದಕ್ಕಾಗಿ ಮೀರಕಾಸಿಮನು ಮೀರಜಾಫರನ ಕಾಲದ ಸಾಲವನ್ನು ತೀರಿಸಿದ್ದಲ್ಲದೆ ಬರದ್ವಾನ, ಮಿದನಾಪುರ, ಚಿತಗಾಂಗ ಈ ಪರ ಗಣೆಗಳನ್ನು ಕಂಪನಿಯವರಿಗೆ ಕೊಟ್ಟನು. ಬಳಿಕ ತನ್ನ ರಾಜಧಾನಿಯನ್ನು ಮುರ್ಶಿದಾಬಾದದಿಂದ ಮೋಂಗಿರಕ್ಕೆ ತಂದು, ಶಿಡಿತದಿಂದ ಕಾರಭಾರ ಸಾಗಿಸಿ ದನು. ಕಂಪನಿಯ ಅಳುಕಿನಲ್ಲಿರುವದು ಅವನಿಗೆ ಸರಿಬರಲಿಲ್ಲ. ತನ್ನ ಸೈನ್ಯವನ್ನು ತಿದ್ದಿಕೊಂಡು ತೋಫು-ಬಂದೂಕಿಗಳ ಕಾರಖಾನೆಯನ್ನು ಹಾಕಿದನು. ಕಂಪನಿ ಯಂತೆ ಕಂಪನಿಯ ನವಕರರು ಸಹ ತಮ್ಮ ಸರಕುಗಳನ್ನು ಸುಂಕವಿಲ್ಲದೆ ಮಾರ ಹತ್ತಿದರು. ಇದರಿಂದ ರಾಜ್ಯದ ಆದಾಯವು ಕಡಿಮೆಯಾಯಿತು. ದೇಶೀಯರ ವ್ಯಾಪಾರವು ಕೆಡಹತ್ತಿತು. ನವಾಬನು ಎಚ್ಚರಿಸಿದರೂ ವಾನ್ಸಿಟಾರ್ಟನು ಈ ಅನ್ಯಾಯವನ್ನು ತಡೆಯಲಿಲ್ಲ. ಆಗ ನವಾಬನು ಸಿಟ್ಟಿನಿಂದ ದೇಶೀಯರ ಸರ ಕಿನ ಮೇಲಿನ ಸುಂಕವನ್ನು ತೆಗೆದು ಬಿಟ್ಟನು. ಕಂಪನಿಯವರಿಗೆ ಇದು ಬೇಡಾ ಗಿದ್ದಿತು. ಅವರು ನವಾಬನಿಗೆ ಸುಂಕ ತೆಗೆದು ಹಾಕುವ ಅಧಿಕಾರವಿಲ್ಲೆಂದು ನಿರ್ಣಯ ಹೇಳಿದರು. ಮತ್ತು ಪಾಟಣಾದಲ್ಲಿದ್ದ ಎಲಿಸ ಎಂಬ ಇಂಗ್ಲಿಷರ

ಕಡೆಯ ಅಧಿಕಾರಿಯು ನವಾಬನ ಕೆಲವು ಅಧಿಕಾರಿಗಳನ್ನು ಸೆರೆಹಿಡಿದನು. ಕೂಡಲೆ ನವಾಬನು ದಂಡು ಕಳುಹಿ ಎಲಿಸನನ್ನೊಡಗೊಂಡು ನೂರಾರು ಇಂಗ್ಲಿಷರನ್ನು ಸೆರೆಹಿಡಿದನು. ಆಗ ಇಂಗ್ಲಿಷ ಸೈನ್ಯವು ಪಾಟಣಾದ ಮೇಲೆ ಸಾಗಿ ಹೋಯಿತು. ಘೇರಿಯಾ ಎಂಬಲ್ಲಿ ಯುದ್ಧವಾಗಿ ಮೀರಕಾಸೀಮನು ಸೋತನು. ಆಗ ಅವನು ಸಿಟ್ಟಾಗಿ ತನ್ನ ಸೆರೆಯಲ್ಲಿದ್ದವರನ್ನೆಲ್ಲ ಕೊಲ್ಲಿಸಿ ಬಿಟ್ಟನು. ಮತ್ತು ಷಆಲಮ—ಸುಜಾಉದ್ದೌಲರನ್ನು ಕೂಡಿಕೊಂಡು ಪಾಟಣಾದ ಮೇಲೆ ಸಾಗಿ ಬಂದನು. ಇತ್ತ ಇಂಗ್ಲಿಷರು ಮೀರಜಾಫರನನ್ನು ಪಟ್ಟಕ್ಕೆ ಕುಳ್ಳಿರಿಸಿ ತಮ್ಮ ಅಧಿಕಾರವನ್ನು ಬಲಪಡಿಸಿದರು. ಇಂಗ್ಲಿಷರ ಕಡೆಯ ಮೇಜರ ಮನ್ರೋ ಎಂಬವನು ಬಕ್ಸಾರದ ಹತ್ತಿರ ಮೀರಕಾಸೀಮ ಮೊದಲಾದವರನ್ನು ಪೂರ್ಣವಾಗಿ ಸೋಲಿಸಿ ಲಖನೌ ಮುಂತಾದ ಪಟ್ಟಣ ಗಳನ್ನು ವಶಪಡಿಸಿಕೊಂಡನು. ಈಗ ಬಂಗಾಲ ಪ್ರಾಂತವು ಇಂಗ್ಲಿಷರ ಕೈ ಸೇರಿತು. ಆದರೆ ರಾಜ್ಯಸ್ಥಾಪನೆಗೆ ಡಾಯರೆಕ್ಟರರು ಒಪ್ಪಲಿಲ್ಲ. ಆದದರಿಂದ ವಾನ್ಸಿಟಾರ್ಟನ ನಂತರ ಕ್ಲೈವನು ಗವರ್ನರನಾಗಿ ನಿಯಮಿಸಲ್ಪಟ್ಟು ಈ ದೇಶಕ್ಕೆ ಮರಳಿ ಬಂದನು. ಅವನು ಬಂದೊಡನೆ ಅಲಹಾಬಾದಕ್ಕೆ ಹೋಗಿ ಷಆಲಮ ಮತ್ತು ಸುಜಾಉದ್ದೌಲ ಇವರ ಕೂಡ ಒಪ್ಪಂದ ಮಾಡಿಕೊಂಡನು. ನವಾಬನು ಕಂಪನಿಯ ಕೈಗೊಂಬೆಯಾದನು. ಕಂಪನಿಯ ಅಧಿಕಾರವು ಸ್ಥಿರ ಗೊಂಡಿತು.

**ಪ್ರ. :— ಇಬ್ಬಗೆಯ ಆಳಿಕೆ ಎಂದರೇನು? ಇದರಿಂದ ಉಂಟಾದ ಪರಿ ಣಾಮವೇನು?**

**ಉ. :— ಇಬ್ಬಗೆಯ ಆಳಿಕೆ**— ಅಲಹಾಬಾದದ ಒಪ್ಪಂದದ ನಂತರ ಬಂಗಾಲ, ಬಿಹಾರ, ಒಡಿಸಾ ಈ ಪ್ರಾಂತಗಳ ದಿವಾಣಿ ಅಧಿಕಾರವೂ ಸೈನ್ಯದ ವ್ಯವಸ್ಥೆಯೂ ಕಂಪನಿಯ ಕೈಗೆ ಸೇರಿತು. ನ್ಯಾಯನಿರಿಸುವ ಮುಂತಾದ ಅಧಿಕಾರಗಳು ನವಾಬನ ಕಡೆಗೆ ಉಳಿದವು. ಹೀಗೆ ಇಬ್ಬರ ಕೈಯಲ್ಲಿ ಈ ಪ್ರಾಂತಗಳ ಕಾರಭಾರವು ಸಾಗಹತ್ತಿತು. ಕಂಪನಿಯವರು ಜನರ ಸ್ಥಿತಿಗತಿ ಯನ್ನು ದುರ್ಲಕ್ಷಿಸಿ ಮನಬಂದಂತೆ ಹಣವೆತ್ತ ಹತ್ತಿದ್ದರಿಂದ ಜನರಿಗೆ ಕಷ್ಟ ವಾಗಹತ್ತಿತು. ಈ ಅನ್ಯಾಯವನ್ನು ದೂರಿಕೊಂಡರೂ ಅದನ್ನು ಇಲ್ಲದಂತೆ ಮಾಡುವದು ನವಾಬನಿಗೆ ಸಾಧ್ಯವಾಗಲಿಲ್ಲ.

ಈ ಅನ್ಯಾಯವಲ್ಲದೆ ನವಾಬನಿಗೆ ಕೊಡತಕ್ಕ ಹಣವನ್ನು ಕಂಪನಿ

ಯವರು ಬರಬರುತ್ತ ಕಡಿಮೆ ಮಾಡಹತ್ತಿದರು. ಇದರಿಂದ ನವಾಬನಿಗೂ ಹಣದ ಕೊರತೆಯಾಗಹತ್ತಿತು; ಅವನೂ ಸಾಧಿಸಿದಷ್ಟು ಹಣವನ್ನು ಜನರಿಂದ ಎತ್ತಬೇಕಾಯಿತು. ಹೀಗಾಗಿ ಪ್ರಜೆಗಳ ಆರ್ಥಿಕ ಸ್ಥಿತಿ ದಿನದಿನಕ್ಕೆ ಕೆಡಹತ್ತಿತು. ಹೀಗಿರುವಾಗ ಕ್ರಿ. ಶ. ೧೭೬೯ ರಲ್ಲಿ ಮಳೆ ಹೋಗಿ ಭಯಂಕರವಾದ ಬರ ಬಿದ್ದಿತು. ಅದರಲ್ಲಿ ⅓ ದಷ್ಟು ಜನಸಂಖ್ಯೆಯು ಲಯಹೊಂದಿತು. ಆ ವರ್ಷ ಕಂಪನಿಯವರು ೧೦೦ ಕ್ಕೆ ೫ ರಂತೆ ಸೂಟು ಬಿಟ್ಟರು! ಆದರೆ ಮರುವರುಷ ೧೦೦ ಕ್ಕೆ ೧೦ ರಂತೆ ಹೆಚ್ಚು ಹಣ ಹೀರಿದರು!! ಕಂಪನಿಯವರು ಹಣದ ಹೊರತು ಏನನ್ನೂ ಲೆಕ್ಕಿಸಲಿಲ್ಲ!!! ಅಲ್ಲದೆ ಸಾಧಿಸಿದ ಯುಕ್ತಿ-ಕುಯುಕ್ತಿ ಗಳಿಂದ ಈ ದೇಶದ ಕೈಗಾರಿಕೆ ಮುಂತಾದ ಉದ್ಯೋಗಗಳನ್ನು ಹಾಳು ಮಾಡಿ ದರು. ಇದರಿಂದ ದೇಶದಲ್ಲಿ ಹಾಹಾಕಾರ ಉಂಟಾಯಿತು

**ಪ್ರ. :— ರೇಗ್ಯೂಲೇಟಿಂಗ ಅಕ್ಟ, ಪಿಟ್ಟನ ಇಂಡಿಯಾ ಬಿಲ್ಲು ಇವುಗಳ ಬಗೆಗೆ ಟಿಪ್ಪಣಿಗಳನ್ನು ಬರೆಯಿರಿ.**

**ಉ. :— ರೇಗ್ಯೂಲೇಟಿಂಗ ಅಕ್ಟ**— ಕ್ರಿ ಶ. ೧೭೭೨— ಹೇಸ್ಟಿಂಗ್ಸನು ಮಾಡಿದ ಹಂಚಿಕೆಗಳಿಂದಲೂ ಕಂಪನಿಯ ಹಣದ ಕೊರತೆ ತಪ್ಪಲಿಲ್ಲ. ಆಗ ಡಾಯರೆಕ್ಟರರು ಇಂಗ್ಲಂಡ ಸರಕಾರದಲ್ಲಿ ಸಾಲ ಬೇಡಬೇಕಾಯಿತು. ಪಾರ್ಲಮೆಂಟಿನವರು ಕಂಪನಿಯ ಸ್ಥಿತಿ-ಗತಿಗಳನ್ನು ವಿಚಾರಿಸಿದರು. ಮತ್ತು ಕಂಪನಿಯ ಕಾರಭಾರದ ಮೇಲ್ವಿಚಾರಣೆಯ ಅಧಿಕಾರವನ್ನು ತಮ್ಮ ಕಡೆಗೆ ಇಟ್ಟುಕೊಳ್ಳುವ “ರೇಗ್ಯೂಲೇಟಿಂಗ ಅಕ್ಟ” ಎಂಬ ಕಾಯಿದೆಯನ್ನು ಪಾಸು ಮಾಡಿ ೧ ಕೋಟಿ ರೂಪಾಯಿ ಸಾಲ ಕೊಟ್ಟರು. ಈ ಕಾಯಿದೆಯಿಂದ (೧) ಬಂಗಾಲದ ಗವ್ಹರ್ನರನು ಗವ್ಹರ್ನರ ಜನರಲನೆಂಬ ಹೆಸರಿನಿಂದ ಮುಂಬಯಿ, ಮದ್ರಾಸ ಇವುಗಳ ಗವ್ಹರ್ನರರ ಮೇಲಧಿಕಾರಿಯಾಗಬೇಕು. (೨) ಗವ್ಹರ್ನರ ಜನರಲನೂ ನಾಲ್ವರು ಬೇರೆ ಸಭಾಸದರೂ ಇವರಿಂದ ಕೂಡಿದ ಆಲೋಚನಾ ಸಭೆಯಲ್ಲಿ ಬಹುಮತದಿಂದ ನಿರ್ಣಯವಾದಂತೆಯೆ ಗವ್ಹರ್ನರ ಜನರಲನು ನಡೆಯಬೇಕು. (೩) ಕಲಕತ್ತೆಯಲ್ಲಿ ಒಂದು ವರಿಷ್ಠ ನ್ಯಾಯಾಲಯವು (ಸುಪ್ರೀಮ ಕೋರ್ಟು) ಇರಬೇಕು. ಕಂಪನಿಯ ಕೆಲಸ ಗಾರರ ವಿರುದ್ಧ ಬಂದ ತಕರಾರುಗಳ ವಿಚಾರಣೆಯ ಅಧಿಕಾರವು ಇದಕ್ಕೆ ಇರ ಬೇಕು. (೪) ಗ. ಜನರಲ್ಲನನ್ನೂ, ಆಲೋಚನಾ ಸಭಿಕರು ನ್ಯಾಯಾ ಧೀಶರು ಇವರನ್ನು ಪಾರ್ಲಮೆಂಟಿನವರೇ ನಿಯಮಿಸಬೇಕು. (೫) ಕಂಪನಿಯ

ನವಕರರು ಕಾಣಿಕೆ-ಲಂಚಗಳನ್ನು ತಿಗೆದುಕೊಳ್ಳತಕ್ಕದ್ದಲ್ಲ. (೬) ಆ ಗಾಗ್ಗೆ ಕಂಪನಿಯ ಡಾಯರೆಕ್ಟರರ ಬದಲಾವಣೆಯಾಗಬೇಕು. ಯಾವ ಸಭಾಸದನಿಗೂ ನಾಲ್ಕಕ್ಕಿಂತ ಹೆಚ್ಚು ಮತಗಳು ಇರಬಾರದು. (೭) ಇಪ್ಪತ್ತು ವರ್ಷಗಳಿಗೊಮ್ಮೆ ಕಂಪನಿಯ ಸನದಿನ ವಿಚಾರಣೆಯಾಗಬೇಕು.

**ಪಿಟ್ಟನ ಇಂಡಿಯಾ ಬಿಲ್ಲು—** ಕ್ರಿ. ಶ. ೧೭೮೪— ಹೇಸ್ಟಿಂಗ್ಸನು ಮಾಡುವ ಅನ್ಯಾಯ ಒತ್ತಾಯಗಳ ಬಗೆಗೆ ಇಂಗ್ಲಂಡದಲ್ಲಿಯೂ ಬೊಬ್ಬಾಟವಾಯಿತು. ಇದೇ ಹೊತ್ತಿಗೆ ಎಂದರೆ ಕ್ರಿ. ಶ. ೧೭೮೩ ರಲ್ಲಿ ಅಮೇರಿಕೆಯು ಇಂಗ್ಲಂಡದ ಅಧಿಕಾರವನ್ನು ಕಿತ್ತೊಗೆದು ಸ್ವತಂತ್ರವಾಯಿತು. ಇದರಿಂದ ಪಾರ್ಲಿಮೆಂಟಿನವರಿಗೆ ಹಿಂದುಸ್ಥಾನದ ಕಡೆಗೆ ಹೆಚ್ಚು ಲಕ್ಷ್ಯವಿಡುವ ಮನಸ್ಸಾಯಿತು. ಆಗ ಮುಖ್ಯ ಮಂತ್ರಿಯಾದ ಪಿಟ್ಟನೆಂಬವನು ಈ ಕಾಯಿದೆಯನ್ನು ಪಾಸು ಮಾಡಿಕೊಂಡನು. ಇದರಿಂದ (೧) ಕಂಪನಿಯವರು ಈಗಿನಂತೆ ವ್ಯಾಪಾರವನ್ನು ತಾವೇ ಸಾಗಿಸಬೇಕು. (೨) ರಾಜ್ಯಕಾರಭಾರವನ್ನು ಕಂಪನಿಯವರೇ ಸಾಗಿಸಿದರೂ ಮೇಲ್ವಿಚಾರಣೆಯ ಕೆಲ ಅಧಿಕಾರವು ಪಾರ್ಲಮೆಂಟಿನಿಂದ ನಿಯಮಿಸಲ್ಪಟ್ಟ ಆರು ಜನ ಸಭಾಸದರುಳ್ಳ ಬೋರ್ಡ ಆಫ್ ಕಂಟ್ರೋಲ ಎಂಬ ಸಭೆಯ ಕಡೆಗಿರಬೇಕು. ಈ ಸಭೆಯ ಸಂಮತಿಯಿಲ್ಲದೆ ಕಂಪನಿಯವರು ಯುದ್ಧವನ್ನಾಗಲಿ ಒಪ್ಪಂದವನ್ನಾಗಲಿ ಮಾಡಕೂಡದು. (೩) ಗ. ಜನರಲ್ ಮತ್ತು ಸೇನಾಪತಿ ಇವರನ್ನು ಪಾರ್ಲಮೆಂಟಿನವರೇ ನಿಯಮಿಸಬೇಕು (೪) ಗ. ಜನರಲ್ಲನು ಶಕ್ಯವಿದ್ದ ಮಟ್ಟಿಗೆ ದೇಶೀಯ ಅರಸರ ಜಗಳದಲ್ಲಿ ಕೈ ಹಾಕಬಾರದು.

**ಪ್ರ. :— ಕ್ಲೈವ ಮತ್ತು ವಾರನ್ ಹೇಸ್ಟಿಂಗ್ಸ ಇವರು ಇಂಗ್ಲಿಷರ ರಾಜ್ಯವನ್ನು ಗಳಿಸಿದವರು. ಆದರೂ ಅವರು ನ್ಯಾಯ ವಿಚಾರಣೆಗೆ ಏಕೆಗುರಿಯಾದರು ?**

**ಉ. :—** ಕ್ಲೈವನು ಕ್ರಿ. ಶ. ೧೭೬೭ ಸ್ವದೇಶಕ್ಕೆ ಹೋದನು. ಅವನು ಕಂಪನಿಗೆ ಲಾಭವನ್ನು ಮಾಡಿಕೊಡುವ ಕಾಲದಲ್ಲಿ ಹಲವು ಅನ್ಯಾಯಗಳನ್ನು ಮಾಡಿದ್ದನು. ಅವನ್ನೇ ಎತ್ತಿ ಅವನ ವಿರೋಧಿಗಳು ಅವನನ್ನು ಪಾರ್ಲಮೆಂಟಿನ ನ್ಯಾಯ ವಿಚಾರಣೆಗೆ ಗುರಿಮಾಡಿದರು. ಆಗ ಅವರು ಕ್ಲೈವನು ಸುಳ್ಳು ಸಹಿ ಮಾಡಿಸಿದನು; ಉಮೀಚಂದನನ್ನು ಮೋಸಗೊಳಿಸಿದನು; ನವಾಬನಿಂದ ಕಾಣಿಕೆಗಳನ್ನು ತೆಗೆದುಕೊಂಡನು; ಈ ಮುಂತಾದ ಅಪರಾಧಗಳನ್ನು ಮಾಡಿ ಇಂಗ್ಲಿಷ ಜನಾಂಗದ ಕೀರ್ತಿಗೆ ಕಲಂಕವನ್ನು ತಂದನು; ಎಂದು ಹೇಳಿದರು.

ಮತ್ತು ಕ್ಲೈವನ ಬಗೆಗೆ ಸಹಾನುಭೂತಿಯುಳ್ಳವರು "ಇವನು ಇಕ್ಕಟ್ಟಿನ ಪ್ರಸಂಗದಲ್ಲಿ ಧೈರ್ಯದಿಂದ ಇಂಗ್ಲಿಷರ ರಾಜ್ಯವನ್ನು ಉಳಿಸಲಿಕ್ಕೂ ಬೆಳೆಯಿಸಲಿಕ್ಕೂ ಸಮರ್ಥನಾದನು; ಅದಕ್ಕಾಗಿ ನಿರ್ದೋಷಿ" ಎಂದು ಸಾಧಿಸಿದರು. ಕೊನೆಗೆ ಇವನು ನಿರ್ದೋಷಿ ಎಂದು ನಿರ್ಣಯವಾಯಿತು.

**ವಾರನ್ ಹೇಸ್ಟಿಂಗ್ಸ—** ಪಿಟ್ಟನ ಇಂಡಿಯಾ ಬಿಲ್ಲು ಪಾಸಾದದ್ದು ತಿಳಿದ ಕೂಡಲೆ ವಾರನ್ ಹೇಸ್ಟಿಂಗ್ಸನು ಕೆಲಸ ಬಿಟ್ಟು ಇಂಗ್ಲಂಡಕ್ಕೆ ಹೊರಟು ಹೋದನು. ಅವನೂ ನ್ಯಾಯವಿಚಾರಣೆಗೆ ಗುರಿಯಾದನು. ಫ್ರಾನ್ಸಿಸನು ಹೇಸ್ಟಿಂಗ್ಸನು ತಪ್ಪುಗಾರನೆಂದು ಸಿದ್ಧಮಾಡಿದನು. ಬರ್ಕ ಮೊದಲಾದ ಮುತ್ಸದ್ದಿಗಳು ಹೇಸ್ಟಿಂಗ್ಸನ ಕೃತ್ಯಗಳ ವರ್ಣನೆಯನ್ನು ಕೇಳಿ ಚಕಿತರಾದರು! ವಿಚಾರಣೆಯು ಏಳು ವರ್ಷಗಳ ವರೆಗೆ ನಡೆದು ಅವನು ದೋಷಮುಕ್ತನಾದನು. ಈ ಪೇಚಾಟದಲ್ಲಿ ಹೇಸ್ಟಿಂಗ್ಸನ ಕೈ ಬರಿದಾಯಿತು. ಅವನು ಕಡೆತನಕ ಬಡತನದಲ್ಲಿಯೇ ಕಾಲ ಕಳೆದನು.

ಪ್ರ. :— ಕಾರ್ನವಾಲೀಸನ ಸುಧಾರಣೆಗಳಾವವು ?

**ಉ.** :— ಇದ್ದ ರಾಜ್ಯದಲ್ಲಿ ವ್ಯವಸ್ಥೆಯನ್ನು ನೆಲೆಗೊಳಿಸುವದು ಮಹತ್ವದ ಕೆಲಸವೆಂದು ತಿಳಿದು ಕಾರ್ನವಾಲೀಸನು ಹಲವು ಸುಧಾರಣೆಗಳನ್ನು ಮಾಡಿದನು. ಇವುಗಳ ವಿವರ— (೧) ಪ್ರಾಂತಗಳಲ್ಲಿ ಜಿಲ್ಹೆಗಳೆಂಬ ಭಾಗಗಳನ್ನು ಮಾಡಿ ಪ್ರತಿ ಜಿಲ್ಹೆಗೆ ಕಲೆಕ್ಟರನೆಂಬ ಅಧಿಕಾರಿಯನ್ನು ನಿಯಮಿಸಿದನು. (೨) ನ್ಯಾಯ ವಿಚಾರಣೆಯ ಕೆಲಸವನ್ನು ಜಜ್ಜನೆಂಬ ಸ್ವತಂತ್ರ ಅಧಿಕಾರಿಯ ಕಡೆಗೆ ಒಪ್ಪಿಸಿದನು. (೩) ಕಲಕತ್ತೆ ಮೊದಲಾದ ನಾಲ್ಕು ಪಟ್ಟಣಗಳಲ್ಲಿ ಅಪೀಲ ಕೋರ್ಟುಗಳನ್ನು ಸ್ಥಾಪಿಸಿದನು. (೪) ಫೌಜದಾರಿ ಕಾಯದೆಯನ್ನು ಸುಧಾರಿಸಿದನು. ಇದಕ್ಕೆ ಕಾರ್ನವಾಲೀಸನ ಕೋಡ ಎಂಬ ಹೆಸರು. ನವಕರರ ಸಂಬಳವನ್ನು ಹೆಚ್ಚಿಸಿ, ಅವರು ಲಂಚ ತೆಗೆದುಕೊಳ್ಳದಂತೆ ಮತ್ತು ಕಂಪನಿಯ ಹಣವನ್ನು ಸ್ವಂತದ ಸಲುವಾಗಿ ಬಳಸದಂತೆ ನಿಯಮ ಮಾಡಿದನು. (೫) ಬಂಗಾಲದಲ್ಲಿ ಸ್ಥಿರಕಂದಾಯ ಪದ್ಧತಿಯನ್ನು ಪ್ರಾರಂಭಿಸಿದನು.

**ಪ್ರ. :— "ತಟಸ್ಥವೃತ್ತಿಯ ಧೋರಣೆ;" ಎಂದರೇನು? ಸರ್ ಜಾನ್ ಶೋಅರನ ಆಳಿಕೆಯು ಈ ಧೋರಣೆಯಂತೆ ಸಾಗಿತೆಂದು ಹೇಳುವರು. ಇದಕ್ಕೆ ತಕ್ಕ ಐತಿಹಾಸಿಕ ಕಾರಣಗಳನ್ನು ಕೊಡಿರಿ.**

**ಉ.** :— ಕ್ಲೈವ ಮತ್ತು ವಾರನ್ ಹೆಸ್ಟಿಂಗ್ಸ ಇವರು ಈ ದೇಶದ ಅರಸರ ಜಗಳದಲ್ಲಿ ಕೈ ಹಾಕಿ, ಪ್ರಸಂಗದಲ್ಲಿ ಅನ್ಯಾಯಗಳನ್ನು ಮಾಡಿಯೂ ಇಂಗ್ಲಿಷರ ರಾಜ್ಯವನ್ನು ಈ ದೇಶದಲ್ಲಿ ಸ್ಥಾಪಿಸಿದರು. ಮುಂದೆ ಪಿಟ್ಟನ ಇಂಡಿಯಾ ಆಕ್ಟಿನಿಂದ "ಕಂಪನಿಯವರು ಶಕ್ಯವಿದ್ದಷ್ಟು ಹಿಂದುಸ್ಥಾನದ ಅರಸರ ಜಗಳದಲ್ಲಿ ಕೈ ಹಾಕದೆ ತಮ್ಮ ಕಾರಭಾರವನ್ನು ಸಾಗಿಸಬೇಕು." ಎಂದು ಗೊತ್ತಾಯಿತು. ಪಿಟ್ಟನ ಈ ಧೋರಣೆಗೆ. "ತಟಸ್ಥ ವೃತ್ತಿಯ ಧೋರಣೆ" ಎಂಬ ಹೆಸರು.

ಈ ಧೋರಣೆಯು ಸರಿಬರಲಿಲ್ಲವೆಂದು ವಾರನ್ ಹೇಸ್ಟಿಂಗ್ಸನು ಕೆಲಸ ಬಿಟ್ಟು ಹೋದನು. ವಾರನ್ ಹೇಸ್ಟಿಂಗ್ಸನ ತರುವಾಯ ಕಾರ್ನವಾಲೀಸನು ಗ. ಜನರಲನೆಂದು ನಿಯಮಿಸಲ್ಪಟ್ಟನು. ಅವನು "ಪ್ರಸಂಗದಲ್ಲಿ ಆಲೋಚನಾ ಸಭೆಯ (ಕೌನ್ಸಿಲಿನ) ಒಪ್ಪಿಗೆ ಇಲ್ಲದೆ ತನ್ನ ಅಪೇಕ್ಷೆಯಂತೆ ನಡೆಯಲು ಶಕ್ಯವಿದ್ದರೆ ಮಾತ್ರ ನಾನು ಗ. ಜನರಲನ ಅಧಿಕಾರವನ್ನು ಸ್ವೀಕರಿಸುವೆನು;" ಎಂದು ಸ್ಪಷ್ಟವಾಗಿ ತಿಳಿಸಿದನು. ಆಗ ಅಮೆಂಡ್‌ಮೆಂಟ್ ಆಕ್ಟ ಎಂಬ ಕಾಯದೆ ಪಾಸಾಗಿ ಕಾರ್ನವಾಲೀಸನ ಬೇಡಿಕೆಯು ಪೂರೈಸಲ್ಪಟ್ಟಿತು. ಇವನು ತನ್ನ ಆಳಿಕೆಯ ಬಹುಭಾಗವನ್ನು ರಾಜಕೀಯ ಸುಧಾರಣೆಗಳನ್ನು ಮಾಡುವದರಲ್ಲಿಯೇ ಕಳೆದನು. ಟೀಪು ಮಂಗಳೂರ ಒಪ್ಪಂದವಾದ ನಂತರ ಫ್ರೇಂಚರ ನೆರವಿನಿಂದ ಬಲವಾದ ದಂಡನ್ನು ಸಜ್ಜುಗೊಳಿಸಿದನು ಅಲ್ಲದೆ ಕೋಟೆ ಕೊತ್ತಳಗಳನ್ನು ಸರಿಪಡಿಸಿ ದೊಡ್ಡ ದೊಡ್ಡ ತೋಫುಗಳನ್ನು ಒದಗಿಸಿಕೊಂಡನು. ಆಗ ಸಂರಕ್ಷಣೆಯ ಕಾರಣದಿಂದ ಕಾರ್ನವಾಲೀಸನೂ ಯುದ್ಧದ ಸಿದ್ಧತೆ ಮಾಡಿ, ಇಂಗ್ಲಂಡದಿಂದ ಹೊಸ ಸೈನ್ಯವನ್ನು ತರಿಸಿಕೊಂಡನು. ಮುಂದೆ ಟೀಪುವು ಯುದ್ಧದಲ್ಲಿ ಸೋತು ಅರ್ಧರಾಜ್ಯವನ್ನು ಕೊಟ್ಟು ಒಪ್ಪಂದ ಮಾಡಿಕೊಂಡನು.

ಕಾರ್ನವಾಲೀಸನ ತರುವಾಯ ಸರ್ ಜಾನ ಶೋಅರನು ಕ್ರಿ. ಶ. ೧೭೯೩–೧೭೯೮ ರ ವರೆಗೆ ಗ. ಜನರಲನಾಗಿದ್ದನು. ಇವನು ಮಾತ್ರ ತಟಸ್ಥ ವೃತ್ತಿಯ ಧೋರಣೆಯನ್ನು ಸರಿಯಾಗಿ ಅನುಸರಿಸಿದನು. ಇವನ ಕಾಲದಲ್ಲಿ ಯುದ್ಧದ ಪ್ರಸಂಗಗಳು ಬರಲಿಲ್ಲ, ಬಂದ ಪ್ರಸಂಗಗಳಿಂದಲೂ ಯುದ್ಧಮಾಡದೆ ಹಂಚಿಕೆಯಿಂದ ಪಾರಾದನು. ಆದದರಿಂದ ಸರ್ ಜಾನ್ ಶೋಅರನ ಆಳಿಕೆಯು ತಟಸ್ಥವೃತ್ತಿಯ ಆಳಿಕೆ ಎಂದು ಹೇಳುವರು.

ಪ್ರ. :— ಲಾರ್ಡ ವೆಲ್ಲಸ್ಲಿಯು ಗ. ಜನರಲನಾಗಿ ಬಂದ ಕಾಲದಲ್ಲಿ ಈ ದೇಶದ ರಾಜಕೀಯ ಪರಿಸ್ಥಿತಿ ಹೇಗೆ ಇದ್ದಿತು ? ಅವನು ಯಾವ ಯೋಜನೆಯಿಂದ ಹಿಂದುಸ್ಥಾನದಲ್ಲಿ ಬ್ರಿಟಿಷರ ಸಾರ್ವಭೌಮಾಧಿಕಾರವನ್ನು ಸ್ಥಾಪಿಸಿದನು.

**ಉ. :— ಲಾರ್ಡ ವೆಲ್ಲಸ್ಲಿಯು ಬಂದ ಕಾಲದ ಪರಿಸ್ಥಿತಿ—** ಫ್ರಾನ್ಸದಲ್ಲಿ ಕ್ರಿ. ಶ. ೧೭೮೯ರಲ್ಲಿ ರಾಜ್ಯಕ್ರಾಂತಿಯಾದ ನಂತರ ನೇಪೋಲಿಯನನು ಆ ದೇಶದ ಅರಸನಾದನು. ಅವನು ಇಂಗ್ಲಿಷರ ವರ್ಚಸ್ಸನ್ನು ಅಡಗಿಸಿ ಫ್ರಾನ್ಸದ ಅಧಿಕಾರವನ್ನು ಯುರೋಪದಲ್ಲಿ ಸ್ಥಾಪಿಸಬೇಕೆಂಬ ಮಹತ್ವಾಕಾಂಕ್ಷೆಯುಳ್ಳವನಾಗಿದ್ದನು. ಯುರೋಪದಲ್ಲಿಯ ವರ್ಚಸ್ಸು ಕಡಮೆಯಾಗಬೇಕಾದರೆ ಹಿಂದುಸ್ಥಾನದಲ್ಲಿ ಅವರಿಗಿರುವ ಬಲವು ಕುಗ್ಗುವದು ಅವಶ್ಯವೆಂದು ಅವನು ಅರಿತಿದ್ದನು. ಅದಕ್ಕಾಗಿ ಅವನು ಹಿಂದುಸ್ಥಾನಕ್ಕೆ ಬರಲು ಹವಣಿಸುತ್ತಿದ್ದನು. ಟೀಪುಸುಲ್ತಾನನು ಹಿಂದುಸ್ಥಾನದ ಮೇಲೆ ಸಾಗಿಬರಬೇಕೆಂದೂ ಅವನಿಗೆ ತಿಳಿಸಿದ್ದನು.

ಟೀಪುಸುಲ್ತಾನನು ಕಳೆದುಕೊಂಡ ರಾಜ್ಯವನ್ನು ಮರಳಿ ದೊರಕಿಸುವ ನಿಶ್ಚಯದಿಂದ ತನ್ನ ಸೈನ್ಯವನ್ನು ತಿದ್ದಿದ್ದಲ್ಲದೆ ಫ್ರೇಂಚ ಸೈನ್ಯದ ಸಹಾಯವನ್ನೂ ಪಡೆದಿದ್ದನು. ನಿಜಾಮ ಮತ್ತು ವಜೀರ ಇವರೊಡನೆ ಒಳಸಂಚು ನಡೆಯಿಸಿದ್ದನು. ಇಂಗ್ಲಿಷರು ತನಗೆ ನೆರವಾಗಲಿಲ್ಲವೆಂದು ನಿಜಾಮನೂ ಅವರ ಮೇಲೆ ಸಿಟ್ಟಾಗಿ ಫ್ರೇಂಚರಿಂದ ೧೪ ಸಾವಿರ ಸೈನ್ಯವನ್ನು ಸಜ್ಜುಮಾಡಿಕೊಂಡಿದ್ದನು.

ಮರಾಠರು ಖರಡೆಯ ಯುದ್ಧದಲ್ಲಿ ನಿಜಾಮನನ್ನು ಪೂರ್ಣವಾಗಿ ಸೋಲಿಸಿ, ಅವನ ಅರ್ಧ ರಾಜ್ಯವನ್ನು ಕಸಿದುಕೊಂಡು ಪ್ರಬಲರಾಗಿದ್ದರು. ಸಿಂದೆ, ಹೋಳಕರ, ಭೋಸಲೆ ಇವರು ಫ್ರೇಂಚರಿಂದ ತಮ್ಮ ತಮ್ಮ ಸೈನ್ಯಗಳನ್ನು ಸಜ್ಜುಗೊಳಿಸಿಕೊಂಡು ಒಗರುಳ್ಳವರಾಗಿದ್ದರು.

ಎಲ್ಲೆಡೆಗಳಲ್ಲಿಯೂ ಫ್ರೇಂಚರ ಸುಳಿದಾಟವು ಹೆಚ್ಚಾಗಿದ್ದಿತು

**ಲಾರ್ಡ ವೆಲ್ಲಸ್ಲಿಯ ಯೋಜನೆಗಳು—** ಹೀಗೆ ಹಿಂದುಸ್ಥಾನದ ಪರಿಸ್ಥಿತಿ ಇರುವಾಗ ತಟಸ್ಥ ವೃತ್ತಿಯ ಧೋರಣೆಯಿಂದ ಕೆಲಸವಾಗದೆಂದು ತಿಳಿದು ಪಾರ್ಲಮೆಂಟಿನವರೂ ಕಂಪನಿಯ ಡಾಯರೆಕ್ಟರರೂ ಸರ್ ಜಾನ್ ಶೋಅರನನ್ನು ಕರೆಯಿಸಿಕೊಂಡು ವೆಲ್ಲಸ್ಲಿಯನ್ನು ಗ. ಜನರಲ್ಲನೆಂದು: ನಿಯಮಿಸಿ ಕಳುಹಿಸಿದರು. ಅವನು ಈ ದೇಶಕ್ಕೆ ಬಂದಕೂಡಲೆ ಇಲ್ಲಿಯ ಸ್ಥಿತಿಯನ್ನು

ನಿರೀಕ್ಷಿಸಿ, ಇಂಗ್ಲಿಷರ ಅಧಿಕಾರವನ್ನು ಸ್ಥಿರಗೊಳಿಸಲು "**ಸಹಾಯಕ ಸೈನ್ಯ ಪದ್ಧತಿ**" ಎಂಬ ಯೋಜನೆಯನ್ನು ಬಳಕೆಯಲ್ಲಿ ತರಲು ನಿಶ್ಚಯಿಸಿದನು. ಈ ಪದ್ಧತಿಯ **ಸ್ವರೂಪ**—ಈ ದೇಶದ ಅರಸರು ತಮ್ಮ ರಕ್ಷಣೆಗೆ ಇಂಗ್ಲಿಷರ ಸೈನ್ಯವನ್ನಿಟ್ಟುಕೊಳ್ಳಬೇಕು. ಅದರ ವೆಚ್ಚಕ್ಕಾಗಿ ತಕ್ಕಷ್ಟು ಸೀಮೆಯನ್ನು ಇಂಗ್ಲಿಷರಿಗೆ ಕೊಡಬೇಕು. ಇಂಗ್ಲಿಷರ ಹೊರತು ಬೇರೆ ಯಾವ ಯುರೋಪಿಯರನ್ನೂ ಕೆಲಸಕ್ಕೆ ಇಟ್ಟುಕೊಳ್ಳಕೂಡದು ಇಂಗ್ಲಿಷರ ರೆಸಿಡೆಂಟನನ್ನು ತಮ್ಮಲ್ಲಿ ಇಟ್ಟುಕೊಳ್ಳಬೇಕು. ಇಂಗ್ಲಿಷರ ಒಪ್ಪಿಗೆಯಿಲ್ಲದೆ ಬೇರೆಯವರ ಕೂಡ ಯುದ್ಧ ಇಲ್ಲವೆ ಒಪ್ಪಂದ ಮಾಡಕೂಡದು. ತಮಗೂ ಇತರರಿಗೂ ಒಳಜಗಳ ಬಂದರೆ, ಇಂಗ್ಲಿಷರ ನೆರವಿನಿಂದ ತೀರಿಸಿಕೊಳ್ಳಬೇಕು.

ವೆಲ್ಲಸ್ಲಿಯು ಮೊದಲು ನಿಜಾಮನಿಗೆ ಈ ಪದ್ಧತಿಗೆ ಒಳಗಾಗಲು ತಿಳಿಸಿದನು. ನಿಜಾಮನು ಇಂಗ್ಲಿಷರನ್ನು ವಿರೋಧಿಸುವ ಬಲವು ತನ್ನಲ್ಲಿಲ್ಲವೆಂದು ಅರಿತು, ಸಿಟ್ಟನ್ನು ತೋರಗೊಡದೆ, ಸಹಾಯಕ ಸೈನ್ಯ ಪದ್ಧತಿಗೆ ಒಳಗಾಗಿ ಇಂಗ್ಲಿಷರ ಮಾಂಡಲಿಕನಾದನು. (ಕ್ರಿ. ಶ. ೧೭೯೮.) ಅಯೋಧ್ಯೆಯ ವಜೀರನಲ್ಲಿ ಹೇಸ್ಟಿಂಗ್ಸನ ಕಾಲದಿಂದ ಇದ್ದ ಸೈನ್ಯವನ್ನು ಹೆಚ್ಚಿಸಿ, ಅದರ ವೆಚ್ಚಕ್ಕೆಂದು ವಜೀರನಾದ ಸಾದತಅಲಿಯಿಂದ ಕೋರಾ, ಅಲಹಾಬಾದ, ರೋಹಿಲಖಂಡ ಈ ಪ್ರಾಂತಗಳನ್ನು ವೆಲ್ಲಸ್ಲಿಯು ತೆಗೆದುಕೊಂಡನು. (ಕ್ರಿ. ಶ. ೧೮೦೧) ಗಾಯಕವಾಡದ ಆನಂದರಾಯನೂ ಬಳಿಕ ತುಸುದಿವಸಗಳಲ್ಲಿಯೆ ೨ ನೆಯ ಬಾಜೀರಾಯನೂ ಈ ಪದ್ಧತಿಯನ್ನೊಪ್ಪಿಕೊಂಡರು. (ಕ್ರಿ. ಶ. ೧೮೦೨.)

ವೆಲ್ಲಸ್ಲಿಯು ಟೀಪುವಿಗೂ ಸಹಾಯ ಸೈನ್ಯ ಪದ್ಧತಿಗೆ ಒಳಗಾಗಲು ತಿಳಿಸಿದನು. ಟೀಪುವು ಈ ಮಾತನ್ನು ಧಿಕ್ಕರಿಸಿದನು. ಆಗ ವೆಲ್ಲಸ್ಲಿಯು ನಿಜಾಮನ ನೆರವಿನಿಂದ ಯುದ್ಧಕ್ಕೆ ಸಿದ್ಧನಾದನು. ಮದ್ರಾಸದಿಂದ ಬರುವ ಜನರಲ್ ಹ್ಯಾರಿಸನ ಸೈನ್ಯವನ್ನು ಎರಗಿ ಟೀಪು ತಾನೇ ಸೋತನು. ಬಳಿಕ ಸ್ಟುಅರ್ಟನನ್ನು ಮಳವಳ್ಳಿ ಬಳಿಯಲ್ಲಿ ತಡೆದು ಮತ್ತೆ ಸೋತನು. ಬಳಿಕ ಅವನು ಶ್ರೀರಂಗಪಟ್ಟಣದ ಕೋಟೆಯನ್ನು ಸೇರಿಕೊಂಡನು. ಆಗ ವೆಲ್ಲಸ್ಲಿಯ ತಮ್ಮನಾದ ಅರ್ಥರ ವೆಲ್ಲಸ್ಲಿಯು ಮುಂದುವರಿದು ಕೋಟೆಯನ್ನು ಮುತ್ತಿದನು. ತೋಫುಗಳ ಹೊಡೆತಕ್ಕೆ ಗೋಡೆಗಳು ಒಡೆದವು. ಇಂಗ್ಲಿಷರ ಸೈನ್ಯವು ಒಳನುಗ್ಗಿತು. ಘೋರ ಕಾಳಗವಾಗಿ ಟೀಪುವು ಹತನಾದನು. ಅವನ ರಾಜ್ಯವನ್ನು ವೆಲ್ಲಸ್ಲಿಯು ಮೈಸೂರಿನ ಮುಂಚಿನ ಅರಸನ ಮಗನಾದ ಮುಮ್ಮಡಿ ಕೃಷ್ಣ

ರಾಯನಿಗೆ ಕೊಟ್ಟನು. ಮೈಸೂರ ರಾಜ್ಯವು ಸಹಾಯಕ ಸೈನ್ಯ ಪದ್ಧತಿಗೆ ಒಳಗಾಯಿತು. ಟೀಪುವಿನ ಮಕ್ಕಳು ವರ್ಷಾಶನದೊಂದಿಗೆ ವೆಲ್ಲೂರಲ್ಲಿ ಇರ ಹತ್ತಿದರು.

ತಂಜಾವರ, ಸುರತ, ಅರ್ಕಾಟ ಇವುಗಳ ಒಡೆಯರಿಗೆ ವರ್ಷಾಶನವನ್ನು ಕೊಟ್ಟು ವೆಲ್ಲಸ್ಲಿಯು ಅವರ ರಾಜ್ಯಗಳನ್ನು ಕಸಿದುಕೊಂಡನು.

ಈ ಬಗೆಯಿಂದ ವೆಲ್ಲಸ್ಲಿಯು ಸಹಾಯಕ ಸೈನ್ಯಪದ್ಧತಿಯ ಬಲದಿಂದ ಹಿಂದುಸ್ಥಾನದಲ್ಲಿ ಬ್ರಿಟಿಷರ ಸಾರ್ವಭೌಮಾಧಿಕಾರವನ್ನು ಸ್ಥಾಪಿಸಿದನು.

**ಪ್ರ. :— ಮುಂದೆ ಬರೆದ ಸಂಗತಿಗಳ ಪರಿಣಾಮಗಳ ಬಗೆಗೆ ವಿವರಣೆ ಕೊಡಿರಿ.**

**(ಅ) ಮರಾಠರ ಸರಂಜಾಮೀ ಪದ್ಧತಿ. (ಆ) ಕಾರ್ನವಾಲೀಸನ ಸ್ಥಿರ ಕಂದಾಯ ಪದ್ಧತಿ. (ಇ) ಲಾರ್ಡ ವೆಲ್ಲಸ್ಲಿಯ ಸಹಾಯಕ ಸೈನ್ಯ ಪದ್ಧತಿ.**

**ಉ.** :—(ಅ) ರಾಜಾರಾಮನ ಕಾಲದಲ್ಲಿ ಮರಾಠರ ರಾಜ್ಯಕ್ಕೆ ಗಂಡಾಂತರದ ಪ್ರಸಂಗವಿದ್ದಿತು. ಮೊಗಲರು ಮಹಾರಾಷ್ಟ್ರದಲ್ಲಿ ಹಾವಳಿಯನ್ನೆಬ್ಬಿಸಿದರು. ಮರಾಠರ ರಾಜ್ಯವು ಮುಳುಗುವ ಲಕ್ಷಣಗಳೂ ತೋರಹತ್ತಿದ್ದವು. ಇಂಥ ಸಮಯದಲ್ಲಿ ರಾಜಾರಾಮನು ಸರಂಜಾಮೀ ಪದ್ಧತಿಯನ್ನು ಅವಲಂಬಿಸಿದ್ದರಿಂದ ನೂರಾರು ಮರಾಠ ಸರದಾರರು ಜಹಾಗೀರುಗಳನ್ನು ಪಡೆಯುವ ಆಶೆಯಿಂದ ಪರಾಕ್ರಮದಿಂದ ಹೋರಾಡಿ, ಮರಾಠರ ರಾಜ್ಯವನ್ನು ಉಳಿಸಿದ್ದಲ್ಲದೆ ಅದನ್ನು ಭರದಿಂದ ಬೆಳೆಸಿದರು.

ಆದರೆ ಮುಂದೆ ಈ ಸರದಾರರಲ್ಲಿ ಮರಾಠ ಸಾಮ್ರಾಜ್ಯದ ಅಭಿಮಾನವು ಕಡಿಮೆಯಾಯಿತು. ಅವರು ತಮ್ಮ ಜಹಗೀರುಗಳ ಹಿತವನ್ನಷ್ಟೇ ಸಾಧಿಸಹತ್ತಿದರು. ಪ್ರಸಂಗದಲ್ಲಿ ಪೇಶವೆಗೆ ಸೊಪ್ಪುಹಾಕಲಿಲ್ಲ. ತಮ್ಮತಮ್ಮೊಳಗೂ ಜಗಳ ಮಾಡಹತ್ತಿದ್ದರು. ಹೀಗೆ, ಮೊದಲು ಮರಾಠರಾಜ್ಯಕ್ಕೆ ಉಪಯುಕ್ತವೆನಿಸಿದ ಸರಂಜಾಮೀ ಪದ್ಧತಿಯೇ ಕೊನೆಗೆ ಮರಾಠರ ರಾಜ್ಯವನ್ನು ಕಳೆಗುಂದಿಸಲು ಮೂಲವಾಯಿತು.

(ಆ) ಸ್ಥಿರಕಂದಾಯ ಪದ್ಧತಿಯನ್ನು ಲಾರ್ಡ ಕಾರ್ನವಾಲೀಸನು ಪಾರ್ಲಮೆಂಟಿನ ಒಪ್ಪಿಗೆಯೊಂದಿಗೆ ಬಳಕೆಯಲ್ಲಿ ತಂದನು. ವಾರನ್ ಹೇಸ್ಟಿಂಗ್ಸನ ಕಾಲದಲ್ಲಿ ಹೆಚ್ಚು ಹಣ ಕೊಟ್ಟವರಿಗೆ ಅಯ್ದು‌ಯ್ದು ವರ್ಷಗಳ ಕರಾರಿನಿಂದ ಭೂಮಿಗಳು ಕೊಡಲ್ಪಡುತ್ತಿದ್ದವು. ಈ ಅವಧಿ ಮುಗಿದ ಕೂಡಲೆ

ಭೂಮಿಗಳು ತಮಗೆ ಉಳಿಯುತ್ತವೆಂಬ ಭರವಸೆ ಜಮೀನದಾರರಿಗೆ ಇರಲಿಲ್ಲ. ಹೀಗಾಗಿ ಭೂಮಿಗಳು ಕೆಡಹತ್ತಿತ್ತು. ಬರಬರುತ್ತ ಕಂಪನಿಗೆ ಬರತಕ್ಕ ಹಣ ಕಡಮೆಯಾಗಹತ್ತಿತು. ಅಂತೆಯೇ ಕಾರ್ನವಾಲೀಸನು ಕಂದಾಯವನ್ನು ಸ್ಥಿರ ಗೊಳಿಸಿದನು. ಜಮೀನುದಾರರು ಭೂಮಿಗಳು ತಮಗೆಯೆ ನಡೆಯತಕ್ಕವು ಗಳಾದದರಿಂದ ಅವುಗಳನ್ನು ಸುಧಾರಿಸ ತೊಡಗಿದರು. ಭೂಮಿಯ ಉತ್ಪನ್ನವು ಹೆಚ್ಚಿಗೆ ಬರುತ್ತಿತ್ತು. ಕಂಪನಿಗೆ ಬರತಕ್ಕ ಹಣ ತಡೆಯಿಲ್ಲದಂತೆ ಜಮೆಯಾಗ ಹತ್ತಿತು. ಜಮೀನದಾರರೂ ಕಂಪನಿಯವರೂ ನಿಶ್ಚಿಂತರಾದರು. ಆದರೆ ದುಡಿಯುವ ರೈತನಿಗೆ ಮಾತ್ರ ಲಾಭವು ಸಿಗಲಿಲ್ಲ. ಜಮೀನದಾರರು ಕಂಪ ನಿಯ ಹಿತಚಿಂತಕರಾದರು. ಹೊಸರಾಜ್ಯ ಕಟ್ಟುವವರಿಗೆ ಇದೇ ಬೇಕಾಗಿರು ತ್ತದೆ. ಅದು ಸಾಧಿಸಿತು.

(ಇ) ಲಾರ್ಡ ವೆಲ್ಲಸ್ಲಿಯು ಈ ಸಹಾಯಕ ಸೈನ್ಯ ಪದ್ಧತಿಯನ್ನು ಬಳ ಕೆಗೆ ತಂದನು. ಇದರಿಂದ ಕಂಪನಿಯ ಒಡೆತನವುಳ್ಳ ಸೈನ್ಯವು ವೆಚ್ಚವಿಲ್ಲದೆ ಕೊಬ್ಬಹತ್ತಿತು. ತಮ್ಮ ಹಣ ವೆಚ್ಚಮಾಡಿ ಕಂಪನಿಯ ಸೈನ್ಯವನ್ನು ಮೇಯಿ ಸುವ ಈ ಪದ್ಧತಿಗೆ ಈ ದೇಶದ ಅರಸರು ಒಬ್ಬರಬಳಿಕೊಬ್ಬರು ಒಪ್ಪುತ್ತ ಇಂಗ್ಲಿಷರ ಮಾಂಡಲಿಕರಾದರು. ವೆಲ್ಲಸ್ಲಿಯು ಈ ಉಪಾಯವನ್ನು ಕೈಕೊಂಡು ಇಂಗ್ಲಿಷರ ಸಾರ್ವಭೌಮತ್ವವನ್ನು ಸ್ಥಿರಗೊಳಿಸಿದನು.

**ಪ್ರ. :— ಲಾರ್ಡ ಹೇಸ್ಟಿಂಗ್ಸನ ಕಾಲದಲ್ಲಿ ಸಂಭವಿಸಿದ ಮಹತ್ವದ ಸಂಗತಿ ಗಳ ಬಗೆಗೆ ವಿವರಣೆಯನ್ನು ಕೊಡಿರಿ. ಮತ್ತು ಅವನು ಮಾಡಿದ ಸುಧಾರಣೆಗಳು ಯಾವವು ? ಎಂಬುದನ್ನು ಬರೆಯಿರಿ.**

**ಉ.** :— ಲಾರ್ಡ ಹೇಸ್ಟಿಂಗ್ಸನ ಕಾಲದ ಸಂಗತಿಗಳು — ಮೊದಲು ಇವನು ತಟಸ್ಥ ವೃತ್ತಿಯ ಧೋರಣೆಯನ್ನು ಸಮರ್ಥಿಸುತ್ತ ವೆಲ್ಲಸ್ಲಿಯನ್ನು ಟೀಕಿಸುವವರಲ್ಲಿ ಒಬ್ಬನಾಗಿದ್ದನು. ಆದರೆ ಹಿಂದುಸ್ಥಾನಕ್ಕೆ ಬಂದ ಬಳಿಕ "ತಟಸ್ಥ ವೃತ್ತಿಯ ಧೋರಣೆಯಿಂದಲೇ ಗುರ್ಖರು ಪೆಂಡಾರಿಗಳು, ಮರಾ ಠರು ಬಲಗೊಂಡಿರುವರು" ಎಂದು ಮನಗಂಡನು. ಮತ್ತು ವೆಲ್ಲಸ್ಲಿಯಂತೆಯೇ ರಾಜ್ಯವಿಸ್ತಾರದ ಕೆಲಸವನ್ನು ಕೈಕೊಂಡನು. ಇವನ ಆಳಿಕೆಯಲ್ಲಿ ನೇಪಾಳದ ಯುದ್ಧ, ಪೆಂಡಾರಿಗಳ ಯುದ್ಧ, ಮರಾಠರ ಕೊನೆಯ ಯುದ್ಧ ಹೀಗೆ ಮೂರು ಯುದ್ಧಗಳಾದವು.

**ನೇಪಾಳದ ಯುದ್ಧ**—(ಕ್ರಿ. ಶ. ೧೮೧೪–೧೮೧೬) — ಗೋರಖಪುರ,

ಶೀವರಾಜ ಈ ಜಿಲ್ಹೆಗಳ ಕೆಲವು ಊರುಗಳ ಸಲುವಾಗಿ ಇಂಗ್ಲಿಷರಿಗೂ ಗುರ್ಖ ರಿಗೂ ಜಗಳ ನಡೆದಿದ್ದಿತು. ಬಾರ್ಲೋ-ಮಿಂಟೋ ಇವರು ಅವನ್ನು ಬಿಟ್ಟು ಕೊಡಲು ಕೇಳಿದರೂ ಗುರ್ಖರು ಬಿಡಲಿಲ್ಲ. ಇವರು ಯುದ್ಧಮಾಡುವ ಹಾಗೆ ಇರಲಿಲ್ಲ; ತಟಸ್ಥವೃತ್ತಿಯ ಧೋರಣೆಯು ಅಡ್ಡ ಬರುತ್ತಿದ್ದಿತು ಹೇಸ್ಟಿಂಗ್ಸನು ಬಂದಕೂಡಲೆ ಯುದ್ಧವು ಆರಂಭವಾಯಿತು ಅವನು ಗುರ್ಖರಿಗಿಂತ ದೊಡ್ಡ ಸೈನ್ಯವನ್ನು ಸಜ್ಜುಮಾಡಿ, ನಾಲ್ವರು ಸೇನಾಪತಿಗಳನ್ನು ನಾಲ್ಕುಕಡೆಗಳಿಂದ ನೇಪಾಳದ ಮೇಲೆ ಸಾಗಿಸಿದನು. ಮೂವರು ಸೇನಾಪತಿಗಳು ಗುರ್ಖರ ಮೇಲೆ ಬಿದ್ದು ಸೋತರು. ಆಗ ಹೊಸ ಸೈನ್ಯವನ್ನು ನಾಲ್ಕನೆಯವನಾದ ಅಕ್ಟರ ಲೋನಿಯ ನೆರವಿಗೆ ಕಳುಹಿಸಿದನು. ಅಕ್ಟರ ಲೋನಿಯು ಎರಡು ಕಡೆಗಳಲ್ಲಿ ಗುರ್ಖರನ್ನು ಸೋಲಿಸಿದನು, ಗುರ್ಖರು ಒಪ್ಪಂದ ಮಾಡಿಕೊಂಡರು.

ಸೇಗಾವುಲಿ ಒಪ್ಪಂದದಿಂದ ಕಮಾವುನ, ಗಢವಾಲ ಪ್ರಾಂತಗಳನ್ನೂ ತರಾಯಿ ಅರಣ್ಯನ್ನೂ ಇಂಗ್ಲಿಷರಿಗೆ ಕೊಡಬೇಕು. ತರಾಯಿಯ ಬಗೆಗೆ ವರ್ಷಕ್ಕೆ ಎರಡು ಲಕ್ಷ ರೂಪಾಯಿಗಳನ್ನು ಇಂಗ್ಲಿಷರು ಗುರ್ಖರಿಗೆ ಕೊಡ ಬೇಕು. ಸಿಕೀಮದ ಅರಸನ ಮೇಲಿನ ಅಧಿಕಾರವನ್ನು ಗುರ್ಖರು ಬಿಡಬೇಕು. ಕಾಟಮಾಂಡುವಿನಲ್ಲಿ ಇಂಗ್ಲಿಷ ರೆಸಿಡೆಂಟನಿರಬೇಕು; ಎಂದು ಗೊತ್ತಾಯಿತು.

**ಪೆಂಡಾರಿಗಳ ಯುದ್ಧ**—(ಕ್ರಿ. ಶ. ೧೮೧೭)—ಸಹಾಯಕ ಸೈನ್ಯ ವನ್ನಿಟ್ಟುಕೊಂಡ ಅರಸರು ತಮ್ಮ ಮೊದಲಿನ ಸೈನ್ಯವನ್ನು ಕಡಿಮೆ ಮಾಡ ಹತ್ತಿದರು. ಹೀಗೆ ಸೈನ್ಯದಿಂದ ಕಡೆಗಾದ ಜನರಿಗೆ ಉದ್ಯೋಗವಿಲ್ಲದಂತಾಯಿತು. ಅವರಲ್ಲಿ ಅನೇಕರು ಕಳವು-ಸುಲಿಗೆಗಳನ್ನು ಮಾಡಹತ್ತಿದರು. ಹೇಸ್ಟಿಂಗ್ಸನ ಕಾಲಕ್ಕೆ ಇವರ ಸಂಖ್ಯೆಯು ೬೦ ಸಾವಿರಕ್ಕೆ ಸಮೀಪಿಸಿದ್ದಿತು. ಮಧ್ಯ ಹಿಂದು ಸ್ಥಾನದಲ್ಲಿ ಅರಾಜಕತೆಯು ಹೆಚ್ಚು ಇದ್ದದರಿಂದ ಅಲ್ಲಿ ಅವರು ಮೆಟ್ಟಾಗಿದ್ದರು. ಈ ಜನರಿಗೆ ಪೆಂಡಾರಿಗಳೆನ್ನುವರು. ಇವರ ಉಪದ್ರವು ಹೆಚ್ಚಾದದರಿಂದ ಹೇಸ್ಟಿಂಗ್ಸನು ದೊಡ್ಡ ಸೈನ್ಯವನ್ನು ಕೂಡಿಸಿ ಅವರ ಮೇಲೆ ಸಾಗಿ ಮಾಳವದಲ್ಲಿ ಅವರನ್ನು ಸುತ್ತುಗಟ್ಟಿದನು. ಆಗ ಅವರು ಹಣ್ಣಾದರು. ಕರೀಮಖಾನ್ನ, ಅಮೀರಖಾನ ಇವರು ಶರಣು ಬಂದರು. ಹೇಸ್ಟಿಂಗ್ಸನು ಅವರಿಗೆ ಜಹಗೀರು ಹಾಕಿಕೊಟ್ಟನು. ಉಳಿದವರು ಊರುಗಳನ್ನು ಹೊಂದಿಕೊಂಡು ಇರಹತ್ತಿ ದರು. ಹೀಗಾಗಿ ಪೆಂಡಾರಿಗಳ ಕಾಟವು ತಗ್ಗಿತು.

**ಮರಾಠರ ಕೊನೆಯ ಯುದ್ಧ**—(ಕ್ರಿ. ಶ. ೧೮೧೭-೧೮)-೨ನೆಯ

ಬಾಜೀರಾಯನು ಕಳೆದುಹೋದ ಸ್ವಾತಂತ್ರ್ಯವನ್ನು ಮರಳಿ ದೊರಕಿಸಲು ಹವಣಿಸುತ್ತಿದ್ದನು. ಅವನು ಸಿಂದೆ, ಹೋಳಕರ, ಭೋಸಲೆ ಅವರನ್ನು ಇಂಗ್ಲಿಷರ ವಿರುದ್ಧ ಯುದ್ಧ ಮಾಡಲು ಹುರಿದುಂಬಿಸಹತ್ತಿದನು. ಗಾಯಕ ವಾಡನ ವಕೀಲನಾದ ಗಂಗಾಧರ ಶಾಸ್ತ್ರಿಯ ಕೊಲೆಯನ್ನು ತ್ರ್ಯಂಬಕಜಿ ಯಿಂದ ಬಾಜೀರಾಯನೇ ಮಾಡಿಸಿದನೆಂದು ಇಂಗ್ಲಿಷರ ಗ್ರಹಿಕೆಯಾಯಿತು.

ಪೇಶವೆಯ ವಾರುಪತ್ಯಕ್ಕಾಗಿ ಇಂಗ್ಲಿಷರ ದಂಡು ಪುಣೆಯ ಕಡೆಗೆ ಸಾಗಿತು. ಖಡಕಿ–ಕೋರೆಗಾವ, ಅಷ್ಟೀ ಈ ಮೂರು ಕಡೆಗಳಲ್ಲಿ ಯುದ್ಧ ಗಳಾದವು. ೨ ನೆಯ ಯುದ್ಧದಲ್ಲಿ ಸೇನಾಪತಿ ವೀರ ಬಾಪೂ ಗೋಖಲೆಯು ಇಂಗ್ಲಿಷರಿಗೆ ಚೆನ್ನಾಗಿ ಕೈ ತೋರಿಸಿದನು. ಆದರೆ ಕಡೆಯ ಯುದ್ಧದಲ್ಲಿ ಹತ ನಾದನು. ಇಂಗ್ಲಿಷರಿಗೆ ಜಯ ದೊರೆಯಿತು. ಬಾಜೀರಾಯನಿಗೆ ವರ್ಷಾಶನ ವನ್ನು ಕೊಟ್ಟು ಬಿಡೂರಲ್ಲಿ ಇಟ್ಟರು. ಅವನ ರಾಜ್ಯವನ್ನು ಇಂಗ್ಲಿಷರು ತಮ್ಮ ರಾಜ್ಯಕ್ಕೆ ಕೂಡಿಸಿಕೊಂಡರು.

**ಹೆಂಸ್ಟಿಂಗನು ಮಾಡಿದ ಸುಧಾರಣೆಗಳು** — ಇವನು ವೆಲ್ಲಸ್ಲಿಯಂತೆ ರಾಜ್ಯವಿಸ್ತಾರದ ಕೆಲಸವನ್ನಷ್ಟೇ ಮಾಡದೆ ಹಲವು ಉಪಯುಕ್ತವಾದ ಸುಧಾ ರಣೆಗಳನ್ನು ಮಾಡಿದನು. ಇವನ ಕಾಲದಲ್ಲಿ ರಾಜಮಾರ್ಗಗಳೂ ಪೂಲುಗಳೂ ಕಟ್ಟಲ್ಪಟ್ಟವು. ಶಾಲೆ–ಕಾಲೆಜುಗಳುಂಟಾದವು. ವರ್ತಮಾನ ಪತ್ರಗಳ ಮೇಲಿನ ನಿರ್ಬಂಧ ಹೋಗಿ ಅವುಗಳಿಗೆ ಉತ್ತೇಜನ ದೊರೆಯಿತು. ಯಮುನಾ ನದಿಯ ಕಾಲುವೆಯು ನರಿಪಡಿಸಲ್ಪಟ್ಟಿತು. ಸಂಗಡಿಗರಾದ ಎಲ್ಫಿನ್‌ಸ್ಟನ್, ಮಾಲ ಕಮ್, ಮೆಟಕಾಫ್, ಅಕ್ಟರ್ಲೋನಿ ಇವರು ಶೌರ್ಯ–ಧೈರ್ಯ–ಚಾತುರ್ಯ ಗಳಿಂದ ಹೇಸ್ಟಿಂಗ್ಸನಿಗೆ ನೆರವಾಗಿ ಅವನ ಆಳಿಕೆಯನ್ನು ಉತ್ತಮಗೊಳಿಸಿದರು.

**ಪ್ರ. :— ಅಲ್ಬುಕರ್ಕ, ಡ್ಯೂಪ್ಲೆ, ಕ್ಲೈವ, ವಾರನ್ ಹೇಸ್ಟಿಂಗ್ಸ, ಕಾರ್ನ ವಾಲಿಸ, ಹೈದರ, ಟೀಪು ಇವರ ಸಂಕ್ಷಿಪ್ತ ಚರಿತ್ರೆಗಳನ್ನು ಬರಿಯಿರಿ.**

ಉ. :— **ಅಲ್ಬುಕರ್ಕ**— (ಕ್ರಿ. ಶ. ೧೪೫೩–೧೫೧೫) — ಇವನು ಪೋರ್ತುಗೀಜರ ೨ ನೆಯ ಗವ್ಹರ್ನರನು. ಈ ದೇಶದ ಅರಸರ ಜಗಳದಲ್ಲಿ ಕೈಹಾಕಿ ರಾಜ್ಯಗಳಿಸುವ ಪ್ರಯತ್ನ ಮಾಡಿದನು. ಕ್ರಿ. ಶ. ೧೫೧೦ ರಲ್ಲಿ ವಿಜಾ ಪುರದವರಿಂದ ಗೋವೆಯನ್ನು ಗೆದ್ದುಕೊಂಡು ಅದನ್ನು ಪೋರ್ತುಗೀಜರ ರಾಜಧಾನಿಯನ್ನು ಮಾಡಿದನು. ಯುದ್ಧಕಲೆಯ ಶಿಕ್ಷಣ ಕೊಟ್ಟು ಈ ದೇಶದ ಜನರ ಸೈನ್ಯವನ್ನು ಸಜ್ಜುಗೊಳಿಸಿದನು. ಇವನ ಕಾಲದಲ್ಲಿ ವಸಯಿ, ಠಾಣೆ

ಮುಂಬಯಿ, ಮಂಗಳೂರು, ಕೋಲಂಬೋ ಇವು ಪೋರ್ತುಗೀಜರ ಠಾಣ್ಯ ಗಳಾಗಿದ್ದವು.

**ಡ್ಯೂಪ್ಲೆ**— ಇವನು ಫ್ರಾನ್ಸದಲ್ಲಿಯ ಒಬ್ಬ ಸಿರಿವಂತ ವರ್ತಕನ ಮಗನು. ಫ್ರೆಂಚಕಂಪನಿಯ ಗವ್ಹರ್ನರನಾಗಿ ಹಿಂದುಸ್ಥಾನಕ್ಕೆ ಬಂದನು. ಇವನು ಚತುರ ಮುತ್ಸದ್ದಿಯೂ ಮಹತ್ವಾಕಾಂಕ್ಷಿಯೂ ಆಗಿದ್ದನು. ಇಂಗ್ಲಿಷರನ್ನು ಮುರಿದು ಈ ದೇಶದಲ್ಲಿ ಫ್ರೆಂಚರ ಅಧಿಕಾರವನ್ನು ನೆಲೆಗೊಳಿ ಸಲು ಸಾಹಸ ಮಾಡಿದನು. ಆದರೆ ಫ್ರಾನ್ಸದ ಸರಕಾರವು ಇವನಿಗೆ ಹೊತ್ತಿಗೆ ತಕ್ಕ ನೆರವನ್ನು ಕೊಡಲಿಲ್ಲ. ನಿಜಾಮನಲ್ಲಿ ತನ್ನ ವರ್ಚಸ್ಸು ನೆಲೆಗೊಳಿಸಿದ ಬುಸಿಯನ್ನು ಅಲ್ಲಿಂದ ಕರೆಯಿಸಿಕೊಂಡು ಇವನು ದೊಡ್ಡ ತಪ್ಪು ಮಾಡಿದನು. ಇವನ ಸಂಗಡಿಗರಲ್ಲಿ ಹಲವರು ವಿರೋಧಿಗಳಾಗಿದ್ದರು. ಆದದರಿಂದ ಇವನ ಪ್ರಯತ್ನಗಳು ನಿಷ್ಫಲವಾದವು. ಫ್ರಾನ್ಸದ ಸರಕಾರಕ್ಕೆ ಡ್ಯೂಪ್ಲೆಯ ಧೋರ ಣೆಯು ಸರಿಬರಲಿಲ್ಲ. ಅವರು ಅವನನ್ನು ಫ್ರಾನ್ಸಕ್ಕೆ ಕರೆಯಿಸಿಕೊಂಡರು. (ಕ್ರಿ. ಶ. ೧೭೫೪.)

**ಕ್ಲೈವ**— ಕ್ಲೈವನು ಇಂಗ್ಲಂಡದಲ್ಲಿಯ ಒಬ್ಬ ವಕೀಲನ ಮಗನು. ಚಿಕ್ಕಂದಿನಲ್ಲಿ ವಿದ್ಯಾಭ್ಯಾಸಕ್ಕಿಂತ ಆಟನೋಟಗಳ ಕಡೆಗೇ ಇವನ ಪ್ರೀತಿ ಹೆಚ್ಚು. ಇವನು ಮೊದಲು ಈಸ್ಟ ಇಂಡಿಯಾ ಕಂಪನಿಯ ಕಾರಕೂನನಾಗಿ ಹಿಂದುಸ್ಥಾನಕ್ಕೆ ಬಂದನು. ಮುಂದೆ ಇವನು ಆ ಕೆಲಸವನ್ನು ಬಿಟ್ಟು ಸೈನ್ಯ ದಲ್ಲಿ ಸೇರಿ, ಹಲವು ಸಾಹಸದ ಕೆಲಸಗಳನ್ನು ಮಾಡಿ ಹೆಸರಾದ ಸೇನಾಪತಿ ಎನಿಸಿದನು. ಸಾಹಸದ ಉಪಾಯದಿಂದ ಅರ್ಕಾಟದ ಮುತ್ತಿಗೆಯಲ್ಲಿ ಜಯ ಹೊಂದಿ ಸಮರ್ಥನೆನಿಸಿದನು. (ಕ್ರಿ. ಶ. ೧೭೫೧.) ಮುಂದೆ ಕ್ರಿ. ಶ. ೧೭೫೭ ರಲ್ಲಿ ಕಲಕತ್ತೆಯನ್ನು ವಶಮಾಡಿಕೊಂಡು, ಸಿರಾಜ ಉದ್ದೌಲನನ್ನು ಪ್ಲಾಸಿ ಕಾಳಗ ದಲ್ಲಿ ಪೂರ್ಣವಾಗಿ ಸೋಲಿಸಿ ಮೀರಜಾಫರನನ್ನು ಪಟ್ಟಕ್ಕೆ ಕುಳ್ಳಿರಿಸಿ ಬಂಗಾಲ ದಲ್ಲಿ ತನ್ನ ಅಧಿಕಾರವನ್ನು ಸ್ಥಾಪಿಸಿದನು. (ಕ್ರಿ. ಶ. ೧೭೫೭) ಕ್ಲೈವನು ಬಂಗಾಲದ ಗವ್ಹರ್ನರನಾದನು. ಸಿರಾಜ ಉದ್ದೌಲನ ತರುವಾಯ ಮೀರ ಜಾಫರನು ಕ್ಲೈವನ ಸಹಾಯದಿಂದ ನವಾಬನಾದನು. ದಿಲ್ಲಿಯ ಬಾದಶಹ ನಿಗೆ ಇದು ಸರಿಬರಲಿಲ್ಲ. ಅವನು ತನ್ನ ಮಗ ಅಲ್ಲಿಗೋಹರನನ್ನು ಸುಜಾ ಉದ್ದೌಲನೊಡನೆ ಬಂಗಾಲದ ಮೇಲೆ ಕಳುಹಿದನು. ಆಗ ಕ್ಲೈವನು ಮೀರ ಜಾಫರನಿಂದ ಬಾದಶಹನಿಗೆ ಕಾಣಿಕೆ ಕೊಡಿಸಿದನು. ಬಾದಶಹನು ಸಮಾಧಾನ

ಹೊಂದಿ ಮೀರಜಾಫರನು ನವಾಬನೆಂದು ಒಪ್ಪಿದ್ದಲ್ಲದೆ ಕ್ಲೈವನಿಗೆ ಅಮೀರ ಎಂಬ ಪದವಿಯನ್ನೂ ೧೧ ಸಾವಿರದ ಮನಸಬದಾರಿಯನ್ನೂ ಕೊಟ್ಟನು. ಮುಂದೆ ಮೀರಜಾಫರನು ಇಂಗ್ಲಿಷರ ಸಂಬಂಧವನ್ನು ತಪ್ಪಿಸಬೇಕೆಂದು ಡಚ್ಚ ರೊಡನೆ ಒಳಸಂಚು ನಡೆಸಿದನು ಇದನ್ನು ತಿಳಿದು ಕ್ಲೈವನು ತಡಮಾಡದೆ ಕರ್ನಲ್ ಫೋರ್ಡನನ್ನು ಕಳುಹಿ ಡಚ್ಚರನ್ನು ಸೋಲಿಸಿ ಅವರ ಹಡಗುಪಡೆ ಯನ್ನು ನಾಶಗೊಳಿಸಿದನು. ಅಂದಿನಿಂದ ಡಚ್ಚರ ವರ್ಚಸ್ಸು ಕುಂದಹತ್ತಿತು. ಮುಂದೆ ಅವರು ಬರಿ ವ್ಯಾಪಾರಿಗಳಾಗಿರಹತ್ತಿದರು.

ಕ್ರಿ. ಶ. ೧೭೬೦ ರಲ್ಲಿ ಕ್ಲೈವನು ಇಂಗ್ಲಂಡಿಗೆ ಹೋಗಲು ವಾನ್ಸಿ ಟಾರ್ಟನು ಗವ್ಹರ್ನರನಾದನು. ಬಾದಶಹನೂ ಸುಜಾಉದ್ದೌಲನೂ ಮತ್ತೆ ಬಂಗಾಲದ ಮೇಲೆ ಸಾಗಿಬಂದರು. ಆಗ ಇಂಗ್ಲಿಷರ ಕಡೆಯ ಕ್ಯಾಪ್ಟನ್ ನಾಕ್ಸ, ಕೋಲಿಯಡ್ ಮತ್ತು ಮೀರನ ಇವರು ಕೂಡಿ ಅವರನ್ನು ಪೂರ್ಣ ವಾಗಿ ಸೋಲಿಸಿದರು. ಮೀರಜಾಫರನು ಹೆಸರಿಗೆ ನವಾಬನು, ಅಧಿಕಾರವೆಲ್ಲ ಇಂಗ್ಲಿಷರ ಕೈಸೇರಿದ್ದಿತು. ಮುಂದೆ ವಾನ್ಸಿಟಾರ್ಟನು ಮಿರಜಾಫರನನ್ನು ತಳ್ಳಿ ಮೀರಕಾಶೀಮನನ್ನು ನವಾಬನನ್ನು ಮಾಡಿದನು. ಇದಕ್ಕಾಗಿ ಮೀರ ಕಾಶೀಮನು ಬರದ್ವಾನ, ಮಿದನಾಪುರ, ಚಿತಗಾಂಗ ಈ ಜಿಲ್ಹೆಗಳನ್ನು ಕಂಪನಿ ಯವರಿಗೆ ಕೊಟ್ಟನು.

ಕ್ರಿ. ಶ ೧೭೬೫ ರಲ್ಲಿ ಕ್ಲೈವನು ಇಂಗ್ಲಂಡದಿಂದ ಬಂದು ವಾನ್ಸಿ ಟಾರ್ಟನ ಬಳಿಕ ಬಂಗಾಲದ ಗವ್ಹರ್ನರನಾದನು. ರಾಜ್ಯವಿಸ್ತಾರಕ್ಕೆ ಡಾಯ ರೆಕ್ಟರರು ಒಪ್ಪಲಿಲ್ಲವಾದದರಿಂದ ಕ್ಲೈವನು ಅಲಹಾಬಾದಕ್ಕೆ ಹೋಗಿ ಬಾದ ಶಹನ ಕೂಡ ಒಪ್ಪಂದ ಮಾಡಿಕೊಂಡನು. ಕಂಪನಿಗೆ ಬಂಗಾಲ–ಬಿಹಾರ– ಓರಿಸಾ ಪ್ರಾಂತಗಳ ದಿವಾಣಿ ಅಧಿಕಾರವು ದೊರೆಯಿತು. ಸುಜಾಉದ್ದೌಲ ನಿಂದ ೫೦ ಲಕ್ಷ ರೂಪಾಯಿಗಳು ಕಂಪನಿಗೆ ದೊರೆತವು. ಆ ಮೇಲೆ ಕ್ಲೈವನು ಕಂಪನಿಯ ಕಾರಭಾರದಲ್ಲಿ ಹಲವು ಸುಧಾರಣೆಗಳನ್ನು ಮಾಡಿದನು. ಕ್ರಿ. ಶ. ೧೭೬೭ ರಲ್ಲಿ ಕೆಲಸಬಿಟ್ಟು ಇಂಗ್ಲಂಡಕ್ಕೆ ಹೋದಬಳಿಕ ಇವನ ವಿರೋಧಿಗಳು ಇವನನ್ನು ನ್ಯಾಯವಿಚಾರಣೆಗೆ ಗುರಿಮಾಡಿದರು. ಅದರಲ್ಲಿ ನಿರ್ದೋಷಿ ಎಂದು ನಿರ್ಣಯವಾಯಿತು. ಆದರೂ ಜನರು ಆಡಿಕೊಳ್ಳುವದು ತಪ್ಪಲಿಲ್ಲ! ಆದಕ್ಕಾಗಿ ತನ್ನ ಜೀವಕ್ಕೆ ಬೇಸರಗೊಂಡು ಆತ್ಮಹತ್ಯ ಮಾಡಿಕೊಂಡನು. ಕ್ರಿ. ಶ. ೧೭೭೪.

**ವಾರನ್ ಹೇಸ್ಟಿಂಗ್ಸ—** (ಕ್ರಿ. ಶ. ೧೭೭೨–೧೭೮೫)ಇಬ್ಬಗೆಯ ಆಳಿಕೆಯ ನಂತರ ಬಂಗಾಲದ ಪರಿಸ್ಥಿತಿಯು ಭೀಕರವಾಯಿತು. ಅದರ ಪರಿಣಾಮವು ಕಂಪನಿಯ ಮೇಲೆಯೂ ಆಗದೆ ಇರಲಿಲ್ಲ. ಕಂಪನಿಯ ವ್ಯಾಪಾರವು ಕಟ್ಟಾಯಿತು. ಕಂದಾಯವೂ ಬರದಂತಾಯಿತು. ಮೈಸೂರ ಯುದ್ಧದಿಂದ ಹಣವೆಲ್ಲ ತೀರಿಹೋಯಿತು. ಪ್ರತಿವರ್ಷ ಇಂಗ್ಲಂಡದ ಸರಕಾರಕ್ಕೆ ಕಂಪನಿಯವರು ಕೊಡತಕ್ಕ ೪೦ ಸಾವಿರ ಪೌಂಡು ಕೊಡುವದಾಗಲಿಲ್ಲ. ಆಗ ಡಾಯರೆಕ್ಟರರು ಈ ಸ್ಥಿತಿಯನ್ನು ಸುಧಾರಿಸಲಿಕ್ಕೆಂದು ಈ ವಾರನ್ ಹೇಸ್ಟಿಂಗ್ಸನನ್ನು ಕಲಕತ್ತೆಯ ಗವ್ಹರ್ನರನನ್ನು ಮಾಡಿದರು. ಕ್ರಿ. ಶ ೧೭೭೨ ಇವನು ಜಾಣನೂ ಸಾಹಸಿಯೂ ಕ್ಲೈವನ ಕೈಯಲ್ಲಿ ಸುರಿತವನೂ ಆಗಿದ್ದನು. ಇವನು ಹದಿನೆಂಟು ವರ್ಷದವನಿರುವಾಗ ಕಂಪನಿಯ ಕಾರಕೂನನಾಗಿ ಮುಂದೆ ಏರುತ್ತ ಏರುತ್ತ ಆಲೋಚನಾ ಮಂಡಲದ ಸದಸ್ಯನಾದನು. ಗವ್ಹರ್ನರನಾದ ಬಳಿಕ ಹಲವು ಹಂಚಿಕೆಗಳಿಂದ ಹಣಕೂಡಿಸಿದನು. ರಾಜ್ಯಕಾರಭಾರದಲ್ಲಿ ಅನೇಕ ಸುಧಾರಣೆಗಳನ್ನು ಮಾಡಿದನು.

ಕ್ರಿ. ಶ. ೧೭೭೨ರಲ್ಲಿ ರೇಗ್ಯೂಲೇಟಿಂಗ ಆಕ್ಟ ಎಂಬ ಕಾಯದೆ ಪಾಸಾಯಿತು. ಅದರಂತೆ ವಾರನ್ ಹೇಸ್ಟಿಂಗ್ಸನು ಗವ್ಹರ್ನರ ಜನರಲನಾದನು. ಮುಂಬಯಿ, ಮದ್ರಾಸ ಈ ಪ್ರಾಂತಗಳ ಗವ್ಹರ್ನರರು ಇವನ ಕೈ ಕೆಳಗಿನವರಾದರು. ಆಲೋಚನಾ ಮಂಡಲದ ನಾಲ್ವರು ಸಭಾಸದರಲ್ಲಿ ಫ್ರ್ಯಾನ್ಸಿಸ್, ಕ್ಲೆವ್ಹರಿಂಗ್, ಮಾನ್ಸನ್ ಈ ಮೂವರುಹೇಸ್ಟಿಂಗ್ಸನ ವಿರೋಧಿಗಳಾದರು. ಇವರಿಂದ ಹೇಸ್ಟಿಂಗ್ಸನಿಗೆ ತನ್ನ ಇಚ್ಛೆಯಂತೆ ಕೆಲಸ ಮಾಡಲು ತೊಂದರೆಯಾಗಹತ್ತಿತು. ಇವನ ಕಾಲದಲ್ಲಿ ಮರಾಠರ ೧ ನೆಯ ಮತ್ತು ಮೈಸೂರ ೨ ನೆಯ ಯುದ್ಧಗಳಾದವು. ಇದರಿಂದ ಕಂಪನಿಗೆ ಲಾಭವಾಗಲಿಲ್ಲ. ಕ್ರಿ. ಶ. ೧೭೮೩ ರಲ್ಲಿ ಅಮೇರಿಕೆಯು ಇಂಗ್ಲಂಡದ ಸಂಬಂಧವನ್ನು ಕಡಿದುಕೊಂಡು ಸ್ವತಂತ್ರವಾಯಿತು. ಆದದರಿಂದ ಪಾರ್ಲಮೆಂಟು ಹಿಂದುಸ್ತಾನದ ಕಡೆಗೆ ಹೆಚ್ಚು ಲಕ್ಷ್ಯಗೊಡಹತ್ತಿತು. ಹೇಸ್ಟಿಂಗ್ಸನು ಹಿಂದುಸ್ಥಾನದಲ್ಲಿ ಅನ್ಯಾಯ–ಒತ್ತಾಯಗಳನ್ನು ಬಹಳ ನಡೆಸಿರುವನೆಂಬ ಬೊಬ್ಬಾಟವು ಇಂಗ್ಲಂಡದಲ್ಲಿ ಹಬ್ಬಿತು.

ಆಗ ಮುಖ್ಯ ಮಂತ್ರಿಯಾದ ಪಿಟ್ ಎಂಬವನು ಕಂಪನಿಯ ಕಾರಭಾರಕ್ಕೆ ಸಂಬಂಧಿಸಿದ "ಪಿಟ್ಟನ ಇಂಡಿಯಾ ಆಕ್ಟ" ಎಂಬ ಕಾಯದೆಯನ್ನು

ಪಾಸು ಮಾಡಿಕೊಂಡನು. ಈ ಕಾಯಿದೆಯು ಹೇಸ್ಟಿಂಗ್ಸನ ಮನಸ್ಸಿಗೆ ಬರ ಲಿಲ್ಲ. ಅವನು ಕೆಲಸ ಬಿಟ್ಟು ಇಂಗ್ಲಂಡಕ್ಕೆ ಹೋದನು. ಕ್ಲೈವನಂತೆ ಇವನೂ ನ್ಯಾಯವಿಚಾರಣೆಗೆ ಗುರಿಯಾದನು. ಏಳು ವರ್ಷ ವಿಚಾರಣೆ ನಡೆದು ಹೇಸ್ಟಿಂಗ್ಸನು ಎಲ್ಲ ಆರೋಪಗಳಿಂದ ಮುಕ್ತನಾದನು. ಆದರೂ ಇವನ ಹಣವೆಲ್ಲ ಹರಣವಾಗಿ ಕಡೆಗೂ ಇವನು ಬಡತನದಲ್ಲಿ ಜೀವಿಸುತ್ತ ಕ್ರಿ. ಶ. ೧೮೧೮ ವರೆಗೆ ಇದ್ದನು.

**ಲಾರ್ಡ ಕಾರ್ನವಾಲೀಸ**—(ಕ್ರಿ ಶ. ೧೭೮೬—೧೭೯೩)— ಪಿಟ್ಟನ ಇಂಡಿಯಾ ಆಕ್ಟು ಪಾಸಾದ ಕೂಡಲೇ ವಾರನ್ ಹೇಸ್ಟಿಂಗ್ಸನು ಕೆಲಸ ಬಿಟ್ಟು ಹೋಗಲು ಪಾರ್ಲಮೆಂಟಿನವರು ಲಾರ್ಡ ಕಾರ್ನವಾಲೀಸನನ್ನು ಗ. ಜನರಲ ನನ್ನು ಮಾಡಿದರು. ಆದರೆ ಆಗ ಅವನು— "ಪ್ರಸಂಗದಲ್ಲಿ ಗ ಜನರಲನು ತನ್ನ ಅಪೇಕ್ಷೆಯಂತೆ ಕಾರಭಾರ ನಾಗಿನಲು ಶಕ್ಯವಿದ್ದರೆ ಮಾತ್ರ ನಾನು ಕೆಲಸ ಮಾಡುವೆನು;" ಎಂದು ಸ್ಪಷ್ಟವಾಗಿ ತಿಳಿಸಿದನು. ಆಗ ಅವೆುಂಡ ಮೆಂಟ ಆಕ್ಟು ಪಾಸಾಗಿ ಕಾರ್ನವಾಲೀಸನ ಬೇಡಿಕೆ ಪೂರೈಸಲ್ಪಟ್ಟಿತು. ಇವನು ಅಮೇರಿಕೆಯ ಯುದ್ಧದಲ್ಲಿ ಮಹತ್ವದ ಕಾರ್ಯವನ್ನು ನೆರವೇರಿಸಿದ್ದನಾದವ ರಿಂದ ಹಿಂದುಸ್ಥಾನದ ಸೇನಾಪತಿಯ ಅಧಿಕಾರವೂ ಇವನಿಗೆ ಕೊಡಲ್ಪಟ್ಟಿತು.

ಇವನು ಈ ದೇಶಕ್ಕೆ ಬಂದ ಬಳಿಕ; ರಾಜ್ಯವನ್ನು ವಿಸ್ತರಿಸುವದಕ್ಕಿಂತ ಇದ್ದ ರಾಜ್ಯವನ್ನು ಸುವ್ಯವಸ್ಥಿತವಾಗಿ ಇಡುವದು ಅತಿ ಮಹತ್ವದ ಮಾತಾ ಗಿದೆ ಎಂಬದನ್ನು ಅರಿತು ರಾಜ್ಯಕಾರಭಾರದಲ್ಲಿ ಹಲವು ಸುಧಾರಣೆಗಳನ್ನು ಮಾಡಿದನು. ಪ್ರಾಂತಗಳಲ್ಲಿ ಜಿಲ್ಹೆಗಳೆಂಬ ವಿಭಾಗಗಳನ್ನು ಮಾಡಿ ಅದಕ್ಕೆ ಕಲೆಕ್ಟರರೆಂಬ ಅಧಿಕಾರಿಗಳನ್ನು ನಿಯಮಿಸಿದನು. ನ್ಯಾಯ ವಿಚಾರಣೆಯ ಕೆಲಸವನ್ನು ಜಜ್ಜನೆಂಬ ಸ್ವತಂತ್ರ ಅಧಿಕಾರಿಯ ಕಡೆಗೆ ಒಪ್ಪಿಸಿದನು. ನಾಲ್ಕು ಮುಖ್ಯ ಪಟ್ಟಣಗಳಲ್ಲಿ ಅಪೀಲು ಕೋರ್ಟುಗಳನ್ನು ಸ್ಥಾಪಿಸಿದನು. ಫೌಜ ದಾರಿ ಕಾಯದೆಯನ್ನು ಸುಧಾರಿಸಿದನು ನವಕರರು ಲಂಚ ತೆಗೆದು ಕೊಳ್ಳು ವದು ಮತ್ತು ಕಂಪನಿಯ ಹಣವನ್ನು ಬಳಸುವದು ಇವನ್ನು ನಿರ್ಬಂಧಿ ಸಿದನು. ಬಂಗಾಲದ ದುಸ್ಥಿತಿಯನ್ನು ನಿವಾರಿಸಲು ಸ್ಥಿರ ಕಂದಾಯ ಪದ್ಧತಿ ಯನ್ನು ಬಳಕೆಯಲ್ಲಿ ತಂದನು.

ಟೀಪು ನಡೆಯಿಸಿದ ಯುದ್ಧದ ಸಿದ್ಧತೆಯನ್ನು ನೋಡಿಯೂ ಸುಮ್ಮ ನಿರುವದೆಂದರೆ ರಾಜ್ಯಕ್ಕೆ ಹಾನಿ ತಟ್ಟುವದೆಂದು ಮನಗಂಡು ಇವನು ಮೈಸೂರ

೩ನೆಯ ಯುದ್ಧಕ್ಕೆ ಅಣಿಯಾದನು ಕಾರ್ನವಾಲೀಸನು ತಾನೇ ಸೇನಾಪತಿ ಯಾಗಿ ಮರಾಠರನ್ನೂ ನಿಜಾಮನನ್ನೂ ಕೂಡಿಕೊಂಡು ಶ್ರೀರಂಗಪಟ್ಟಣ ವನ್ನು ಮುತ್ತಿದನು. ಟೀವು ಮುಂದು ಗಾಣದೆ ಒಪ್ಪಂದ ಮಾಡಿಕೊಂಡನು. ಈ ಒಪ್ಪಂದದಿಂದ ಟೀವುವಿನ ಅರ್ಧರಾಜ್ಯವೂ ೩ ಕೋಟಿ ರೂಪಾಯಿಗಳೂ ಮೂವರಿಗೆ ದೊರೆತವು. ಕಾರ್ನವಾಲೀಸನ ಆಳಿಕೆಯು ಕ್ರಿ. ಶ. ೧೭೯೩ ರಲ್ಲಿ ಮುಗಿಯಿತು.

**ಹೈದರ ಅಲಿ**— ಕ್ರಿ. ಶ. ೧೭೨೦ ರಲ್ಲಿ ಬೂದಿ ಕೋಟೆಯಲ್ಲಿ ಹುಟ್ಟಿದನು. ಇವನ ತಂದೆಯು ಕೋಲಾರದ ಫೌಜದಾರನಿದ್ದನು. ಹೈದರನು ೮ ವರ್ಷದವನಿರುವಾಗ ಇವನ ತಂದೆ ತೀರಿದನು. ವಯಸ್ಸಿಗೆ ಬಂದ ಬಳಿಕ ಇವನು ಬೆಂಗಳೂರಿಗೆ ಹೋಗಿ ಮೈಸೂರ ದಂಡಿನಲ್ಲಿ ಸೇರಿದನು. ೧೭೦೪ ರಿಂದ ಮೈಸೂರ ಅರಸರು ಸರ್ವಾಧಿಕಾರಿಗಳು ದಳವಾಯಿಗಳು ಇವರ ಕೈಯಿಂದಲೇ ರಾಜ್ಯ ಕಾರಭಾರವನ್ನು ನಾಗಿಸುತ್ತ ಬಂದಿದ್ದರು. ನಂಜರಾಜಯ್ಯನು ಸರ್ವಾಧಿಕಾರಿ ಇರುವಾಗ ಅವನು ಹೈದರನ ಶೌರ್ಯವನ್ನು ಕಂಡು ಅವನಿಗೆ ದಂಡಿನಲ್ಲಿನ ಫೌಜದಾರಿಕೆಯನ್ನು ಕೊಟ್ಟನು. ಕ್ರಿ. ಶ. ೧೭೪೯ ರಲ್ಲಿ ಮರಾಠರ ಕೂಡ ಆದ ಯುದ್ಧದಲ್ಲಿ ಹೈದರನು ತೋರಿಸಿದ ಸಾಹಸಕ್ಕೆ ಮೆಚ್ಚಿ ನಂಜರಾಜಯ್ಯನು ಇವನಿಗೆ ೧೩ ಗಡಿಗಳನ್ನೂ ಬಹದ್ದೂರ ಎಂಬ ಬಿರುದನ್ನೂ ಕೊಟ್ಟನು. ಮುಂದೆ ಹೈದರನು ಪ್ರಬಲನಾಗುತ್ತ ನಂಜರಾಜಯ್ಯನನ್ನು ತಳ್ಳಿ ತಾನೇ ಸರ್ವಾಧಿಕಾರಿಯಾದನು. ಕ್ರಿ. ಶ. ೧೭೬೦. ಕಡೆಗೆ ಅರಸರಿಗೆ ೩ ಲಕ್ಷದ ಸೀಮೆಯನ್ನು ಉಳಿಸಿ ರಾಜ್ಯದ ಕಾರಭಾರವನ್ನು ತಾನೇ ಸಾಗಿಸಹತ್ತಿದನು.

ಬಳಿಕ ಹೈದರನು ನಿಜಾಮನೊಡನೆ ಸ್ನೇಹಬೆಳಿಸಿದನು. ಮರಾಠರೊಡನೆ ಸ್ನೇಹವು ಸಾಧಿಸಲಿಲ್ಲ. ಆಗ ಇವನು ತುಂಗಭದ್ರೆಯನ್ನು ದಾಟಿ ಧಾರವಾಡದ ವರೆಗಿನ ಸೀಮೆಯನ್ನು ವಶಮಾಡಿಕೊಂಡನು. ಕೂಡಲೆ ಮಾಧವರಾಯನು ದೊಡ್ಡ ಸೈನ್ಯದೊಂದಿಗೆ ಮೈಸೂರ ರಾಜ್ಯವನ್ನು ಹೊಕ್ಕು ಬಿದನೂರ ಕೋಟಗೆ ಕೈ ಹಾಕಲು ಹೈದರನು ಕೃಷ್ಣಾ – ತುಂಗಭದ್ರೆಗಳ ನಡು ಸೀಮೆಯನ್ನೂ ೨೨ ಲಕ್ಷ ರೂಪಾಯಿಗಳನ್ನೂ ಕೊಟ್ಟು ಮರಾಠರೊಡನೆ ಒಪ್ಪಂದ ಮಾಡಿಕೊಂಡನು. ಕ್ರಿ. ಶ. ೧೭೬೫.

ಈ ಹೊತ್ತಿಗೆ ಅರಸನಾದ ಇಮ್ಮಡಿ ಕೃಷ್ಣರಾಜನು ಮರಣ ಹೊಂದಲು ಅವನ ಮಗ ನಂಜರಾಜನನ್ನು ಹೈದರನು ಪಟ್ಟಗಟ್ಟಿದನು. ಆದರೆ ಮರು

ವರುಷವೇ, ೩ ಲಕ್ಷದ ಸೀಮೆಯನ್ನೂ ಅರಮನೆಯ ಬೆಲೆಯುಳ್ಳ ಒಡವೆ ಗಳನ್ನೂ ಕಸಿದು, ಅರಮನೆಯ ಕೆಲಸಕ್ಕೆ ತನ್ನ ಕಡೆಯುವರನ್ನು ಇಟ್ಟನು.

ಹೈದರನು ಪ್ರಬಲನಾಗುವದನ್ನು ನೋಡಿ, ಇಂಗ್ಲಿಷರು ನಿಜಾಮ ಮತ್ತು ಮರಾಠರೊಡನೆ ಕೂಡಿಕೊಂಡು ಮೈಸೂರ ಮೇಲೆ ನಾಗಿ ಬಂದರು. ಪೇಶವೆಯು ಸೀರಾ ಪಟ್ಟಣವನ್ನು ಹಿಡಿದು ಕೊಳ್ಳಲು ಹೈದರನು ಅವನಿಗೆ ೩೫ ಲಕ್ಷ ರೂಪಾಯಿಗಳನ್ನು ಕೊಟ್ಟು ಹಿಂದಿರುಗಿಸಿದನು. ನಿಜಾಮನು ಇಂಗ್ಲಿಷರೊಡನೆ ಕೋಲಾರದ ವರೆಗೆ ಬಂದಿರಲು ಹೈದರನು ಅವನನ್ನು ತನ್ನ ಕಡೆಗೆ ಮಾಡಿಕೊಂಡನು. ಇಬ್ಬರೂ ಕೂಡಿ ಇಂಗ್ಲಿಷರ ಮೇಲೆ ನಾಗಿದರು. ಚಂಗಮ, ತ್ರಿನೋಮಾಲಿಗಳಲ್ಲಿ ಯುದ್ಧಗಳಾದವು. ಮೊದಲನೆಯದರಲ್ಲಿ ಸ್ಮಿಥನೂ ಎರಡನೆಯದರಲ್ಲಿ ಹೈದರನೂ ಹಿಮ್ಮೆಟ್ಟಿದರು. ಅತ್ತ ಇಂಗ್ಲಿಷರು ಬಂಗಾಲದ ಸೈನ್ಯವನ್ನು ನಿಜಾಮನ ರಾಜ್ಯದ ಮೇಲೆ ನಾಗಿಸಿದರು. ಆಗ ನಿಜಾಮನು ಹೆದರಿ ಹೈದರನನ್ನಗಲಿ ಇಂಗ್ಲಿಷರ ಕೂಡ ಒಪ್ಪಂದ ಮಾಡಿ ಕೊಂಡನು. ಕ್ರಿ. ಶ. ೧೭೬೮. ಆ ಮೇಲೆ ಹೈದರ–ಟೀಪು ಇವರು ಕೂಡಿ ಅಂಬೂರ ಮೇಲೆ ಏರಿ ಹೋಗಿ ನಿರಾಶರಾದರು. ಅಲ್ಲಿಂದ ಅವರು ಪಶ್ಚಿಮಕ್ಕೆ ನಾಗಿ ಮಂಗಳೂರ–ಹೊನ್ನಾವರಗಳನ್ನು ಆಕ್ರಮಿಸಿ ಮುಂಬೈಯಿಂದ ಬರುವ ಇಂಗ್ಲಿಷ ದಂಡನ್ನು ಚದುರಿಸಿದರು. ಬಳಿಕ ಮದ್ರಾಸದಿಂದ ಬರುವ ವುಡ್ಡನ ಕೈ ಕೆಳಗಿನ ಸೈನ್ಯವನ್ನು ಎರಡು ನರತಿ ನೋಲಿಸಿ, ಅಕಸ್ಮಾತ್ತಾಗಿ ಮದ್ರಾಸಕ್ಕೆ ಬಂದರು. ಆಗ ಮದ್ರಾಸದ ಗವ್ಹರ್ನರನು ಒಪ್ಪಂದ ಮಾಡಿಕೊಂಡನು. ಯುದ್ಧದ ವೆಚ್ಚವನ್ನು ಇಂಗ್ಲಿಷರು ವಹಿಸಬೇಕು. ಗೆದ್ದುಕೊಂಡ ಸೀಮೆ ಗಳನ್ನು ಇಬ್ಬರೂ ಬಿಟ್ಟು ಕೊಡಬೇಕು. ಬೇರೆಯುವರು ನಾಗಿ ಬಂದಾಗ ಒಬ್ಬರಿಗೊಬ್ಬರು ಸಹಾಯ ಮಾಡಬೇಕು. ಎಂದು ಗೊತ್ತಾಯಿತು. ಕ್ರಿ. ಶ. ೧೭೬೯. ಮೈಸೂರ ೨ ನೆಯ ಯುದ್ಧ ( ಕ್ರಿ. ಶ. ೧೭೮೦–೧೭೮೪ ) – ಪೇಶ ವೆಯು ಏರಿ ಬಂದಾಗ ಇಂಗ್ಲಿಷರು ತನಗೆ ನೆರವಾಗಲಿಲ್ಲವೆಂದು ಹೈದರನು ಸಿಟ್ಟಾಗಿದ್ದನು.. ಯುರೋಪದಲ್ಲಿ ಇಂಗ್ಲಿಷ–ಫ್ರೆಂಚರ ನಡುವೆ ಯುದ್ಧವು ಆರಂಭವಾಗಲು ಇಂಗ್ಲಿಷರು ಹೈದರನ ರಾಜ್ಯದೊಳಗಿನ ಫ್ರೆಂಚರ ಮಾಹಿ ಬಂದರವನ್ನು ಹಿಡಿದುಕೊಂಡರು. ಈ ಬಂದರದಿಂದ ಹೈದರನಿಗೆ ಯುದ್ಧ ಸಾಹಿತ್ಯವು ಸಿಗುತ್ತಿದ್ದಿತು. ನಿಜಾಮನೂ ಮರಾಠರೂ ಇವನನ್ನು ಕೂಡಿ ದರು. ಹೈದರನು ಬೇಲಿ ಎಂಬವನ ಸೈನ್ಯವನ್ನು ನಾಶಗೊಳಿಸಿ ಅವನನ್ನು

ನೆರೆಹಿಡಿದನು. ಮತ್ತು ಆರ್ಕಾಟ್, ಬೇಲೂರುಗಳನ್ನು ವಶಮಾಡಿಕೊಂಡನು. ಆಗ ಹೇಸ್ಟಿಂಗ್ಸನು ಸರ್ ಆಯರ್ ಕೂಟನನ್ನು ಮದ್ರಾಸದ ಮೇಲೆ ಕಳುಹಿದನು. ಅವನು ಪೋರ್ಟನೋವ, ನೋಲಿಮಗಡ, ಪೋಲೀಲೂರುಗಳ ಬಳಿಯಲ್ಲಿ ಹೈದರನನ್ನು ಸೋಲಿಸಿದನು. ಅಷ್ಟರಲ್ಲಿ ಫ್ರೆಂಚರ ನೆರವು ಬಂದ ಕೂಡಲೆ ಹೈದರನು ಕಡಲೂರನ್ನು ವಶಮಾಡಿಕೊಂಡನು. ಟೀಪುವು ಬ್ರಾಥವೇಟನ ಸೈನ್ಯವನ್ನು ನುಗ್ಗು ಮಾಡಿದನು. ಇದೇ ಸಮಯಕ್ಕೆ ಕ್ರಿ. ಶ. ೧೭೮೨ ರಲ್ಲಿ ಹೈದರನು ಆಕಸ್ಮಿಕವಾಗಿ ಮರಣಹೊಂದಿದನು. ಟೀಪುವು ಯುದ್ಧವನ್ನು ಸಾಗಿಸಿದನು. ಎರಡೂ ಪಕ್ಷದವರಿಗೆ ಯುದ್ಧವು ಬೇಡೆನಿಸಿತು. ಮಂಗಳೂರಲ್ಲಿ ಒಪ್ಪಂದವಾಗಿ ಇಬ್ಬರೂ ಹಿಡಿದುಕೊಂಡ ಸೀಮೆಗಳನ್ನೂ ಸೆರೆಯಾಳುಗಳನ್ನೂ ಬಿಡಬೇಕೆಂದು ಗೊತ್ತಾಗಿ ಯುದ್ಧವು ಮುಗಿಯಿತು.

ಹೈದರನು ಹೆಸರಾದ ವೀರನೂ ಕರ್ತೃತ್ವಶಾಲಿಯೂ ಆಗಿದ್ದನು. ಸ್ವಪರಾಕ್ರಮದಿಂದ ರಾಜ್ಯಾಧಿಕಾರವನ್ನು ಪಡೆದನು. ಪೂರ್ವ ವಯಸ್ಸಿನಲ್ಲಿ ಬಡತನವನ್ನೂ ಕಷ್ಟಗಳನ್ನೂ ಅನುಭವಿಸಿದ್ದರಿಂದ ಸುರಿತವನೂ ಎದೆಗಾರನೂ ಆಗಿದ್ದನು ಸುಧಾರಿಸಿದ ಯುದ್ಧ ಪದ್ಧತಿ ಮತ್ತು ಯುದ್ಧ ಸಾಹಿತ್ಯ ಇವುಗಳಿಂದ ಸೈನ್ಯಕ್ಕೆ ಹೊಸರೂಪ ಕೊಟ್ಟದ್ದರಿಂದಲೇ ಇಂಗ್ಲಿಷರನ್ನು ಇದಿರಿಸಲು ಸಮರ್ಥನಾದನು.

**ಟೀಪು ಸುಲತ್ತಾನ**—ಇವನು ಹೈದರ ಅಲಿಯ ಮಗನು. ಇವನ ಮಹತ್ವಾಕಾಂಕ್ಷೆಯು ಹೆಚ್ಚಿನದಿದ್ದಿತು. ಫ್ರೆಂಚರಿಂದ ಕವಾಯಿತು ಕಲಿಸಿ ೧॥ ಲಕ್ಷ ಸೈನ್ಯವನ್ನು ಸಜ್ಜುಗೊಳಿಸಿದನು. ಕಾರ್ನವಾಲೀಸನು ಇದನ್ನು ತಿಳಿದು ಸದ್ದಿಲ್ಲದಂತೆ ಯುದ್ಧದ ಸಿದ್ಧತೆಯನ್ನು ಮಾಡಿ ಇಂಗ್ಲಂಡದಿಂದ ಹೊಸ ಸೈನ್ಯವನ್ನು ತರಿಸಿಕೊಂಡನು. ಮತ್ತು ನಿಜಾಮ ಮರಾಠರನ್ನು ಕೂಡಿಕೊಂಡನು. ಮೂರೂ ಸೈನ್ಯಗಳು ಕೂಡಿ ಶ್ರೀರಂಗಪಟ್ಟಣವನ್ನು ಮುತ್ತಿದವು. ಟೀಪುವು ಮುಂದುಗಾಣದೆ ಒಪ್ಪಂದ ಮಾಡಿಕೊಂಡನು. ಇದರಿಂದ ಅವನು ಅರ್ಧ ರಾಜ್ಯವನ್ನೂ ೩ ಕೋಟಿ ರೂಪಾಯಿಗಳನ್ನೂ ಕೊಡಬೇಕಾಯಿತು. ಮುಂದೆ ಕ್ರಿ. ಶ. ೧೭೯೯ ರಲ್ಲಿ ಟೀಪುವು ಇಂಗ್ಲಿಷರೊಡನೆ ೪ ನೆಯ ಯುದ್ಧ ಮಾಡಬೇಕಾಯಿತು. ಅವನು ನೆಪೋಲಿಯನನೊಡನೆಯೂ ಅಫಗಾಣಿಸ್ತಾನದ ಝುಮಾನ ಶಹನೊಡನೆಯೂ ಸಖ್ಯವನ್ನು ಬೆಳೆಯಿಸಿದ್ದನು.

ವೆಲ್ಲಸ್ಲಿಯು ಟೀಪುವನ್ನು ಸಹಾಯಕ ಸೈನ್ಯವನ್ನಿಟ್ಟುಕೊಳ್ಳಲು ಕೇಳಿದನು. ಈ ಮಾತನ್ನು ಟೀಪುವು ಧಿಕ್ಕರಿಸಿದನು. ವೆಲ್ಲಸ್ಲಿಗೆ ಈ ನೆವ ಸಿಕ್ಕಿತು. ಹ್ಯಾರೀಸ ಮತ್ತು ಸ್ಟುಅರ್ಟ ಇವರ ಸೈನ್ಯಗಳು ಟೀಪುವಿನ ಮೇಲೆ ಸಾಗಿದವು. ಎರಡೂ ಪ್ರಸಂಗಗಳಲ್ಲಿ ಟೀಪುವು ಸೋತು ಹಿಮ್ಮೆಟ್ಟಿ ಶ್ರೀರಂಗಪಟ್ಟಣವನ್ನು ಆಶ್ರಯಿಸಿದನು. ಅರ್ಥರ ವೆಲ್ಲಸ್ಲಿಯು ಮುಂದಾಗಿ ಕೋಟೆಯನ್ನು ಮುತ್ತಿದನು. ತೋಫುಗಳ ಹೊಡೆತಕ್ಕೆ ಗೋಡೆಗಳು ಒಡೆಯಲು ಇಂಗ್ಲಿಷ ಸೈನ್ಯವು ಒಳನುಗ್ಗಿತು ಘೋರ ಕಾಳಗವಾಗಿ ಟೀಪುವು ಹತನಾದನು. ಟೀಪುವಿನ ಶವವು ಕೈಗೆ ಸಿಕ್ಕಬಳಿಕ ಮರ್ಯಾದೆಯಿಂದ ಹೈದರನ ಗೋರಿಯ ಹತ್ತಿರವೇ ಹುಗಿಯಲ್ಪಟ್ಟಿತು.

ಟೀಪುವು ಹೆಸರಾದ ಸೇನಾಪತಿಯಾಗಿದ್ದನು. ಇವನ ಪ್ರೈಕಸುವೂ ಕಲಿತನವೂ ಹೆಚ್ಚಿನವಿದ್ದವು. ಇವನನ್ನು ಒಬ್ಬರೇ ಯಾರೂ ತಡೆಯಲು ಶಕ್ಯವಿರಲಿಲ್ಲ. ಇವನು ಒಮ್ಮೆಲೇ ಮೂವರು ಶತ್ರುಗಳನ್ನು ಉಂಟುಮಾಡಿಕೊಂಡು ದೊಡ್ಡ ತಪ್ಪು ಮಾಡಿದನು. ಧರ್ಮಪ್ರಸಾರದ ಹಸಿವು ಇವನ ರಾಜ್ಯವನ್ನು ಬಲಗುಂದಿಸಿತು. ಹೈದರನ ಮುತ್ಸದ್ದಿತನವು ಇವನಲ್ಲಿರಲಿಲ್ಲ. ಹೈದರನು "ಇವನು ಎಲ್ಲಿ ರಾಜ್ಯವನ್ನು ಕಳೆದುಕೊಳ್ಳುವನೋ!" ಎಂದು ಅನ್ನುತ್ತಿದ್ದನು. ಅದೇ ಕೊನೆಗೆ ನಿಜವಾಯಿತು

# ಅರ್ವಾಚೀನಕಾಲ

## (ಕ್ರಿ. ಶ. ೧೮೧೮ ರಿಂದ — ಈಗಿನ ವರೆಗೆ)

## ಇಂಗ್ಲಿಷರ ಕಾಲ

### (ರಾಜ್ಯವಿಸ್ತಾರ, ಸಾರ್ವಭೌಮಾಧಿಕಾರವು ಸ್ಥಿರವಾದದ್ದು)

ಪ್ರ. :— ಲಾರ್ಡ ಉಲಿಯಮ್ ಬೆಂಟಿಂಕನ ಕಾಲದಲ್ಲಿ ಸಂಭವಿಸಿದ ಸಂಗತಿಗಳನ್ನೂ ಅವನು ಮಾಡಿದ ಜನಹಿತದ ಸುಧಾರಣೆಗಳನ್ನೂ ಸಂಕ್ಷಿಪ್ತವಾಗಿ ವಿವರಿಸಿರಿ.

**ಉ.** :— ಲಾರ್ಡ ಉಲಿಯಮ್ ಬೆಂಟಿಂಕನ ಆಳಿಕೆ (ಕ್ರಿ.ಶ ೧೮೨೮–೧೮೩೫). ಆಗ ಸಂಭವಿಸಿದ ಸಂಗತಿಗಳು— ಇವನು ಗ. ಜನರಲನಾಗಿ ಬರುವಷ್ಟರಲ್ಲಿ ಗಡಿನಾಡುಗಳ ಸಂರಕ್ಷಣೆಯ ಕೆಲಸಗಳು ಮುಗಿದಿದ್ದವು. ಆದದರಿಂದ ರಾಜ್ಯದಲ್ಲಿ ಶಾಂತತೆಯನ್ನು ಕಾಯ್ದುಕೊಂಡು ಸುಧಾರಣೆಗಳನ್ನು ಮಾಡುವ ಕೆಲಸವನ್ನು ಕೈಕೊಂಡನು. ಯುದ್ಧದ ಗೊಡವೆಗೆ ಹೋಗಲಿಲ್ಲ.

**ರಾಜಕೀಯ ಸುಧಾರಣೆಗಳು** — (೧) ಸೈನ್ಯದ ಅಧಿಕಾರಿಗಳ ಭತ್ತೆಯನ್ನು ನಿಲ್ಲಿಸಿ, ಮುಲ್ಕೀ ಅಧಿಕಾರಿಗಳ ಸಂಬಳವನ್ನು ಕಡಿಮೆ ಮಾಡಿ ಹಣವನ್ನು ಉಳಿಸಿದನು. ಆಗ್ರಾ–ಅಯೋಧ್ಯಾ ಪ್ರಾಂತಗಳ ಭೂಮಿಯನ್ನು ಅಳೆದು ತೆರಿಗೆಯನ್ನು ಗೊತ್ತು ಮಾಡಿ, ಅಫುವಿನ ಮಾರಾಟ ಮಾಡುವವರು ಹಣ ಕೊಟ್ಟು ಪರವಾನಿಗೆ ಪಡೆಯಬೇಕೆಂಬ ಕಟ್ಟಳೆ ಮಾಡಿ ಉತ್ಪನ್ನವನ್ನು ಹೆಚ್ಚು ಮಾಡಿದನು. ಇದರಿಂದ ಸಾಲ ಹೋಗಿ ಕಂಪನಿಯ ಬಳಿಯಲ್ಲಿ ಶಿಲಕು ಉಳಿಯಹತ್ತಿತು. (೨) ಕಾರ್ನವಾಲೀಸನ ಕಾಲದ ಅಪೀಲು ಕೋರ್ಟುಗಳನ್ನು ಮುಚ್ಚಿ, ಜಿಲ್ಹೆಯ ಜಜ್ಜನ ಅಧಿಕಾರವನ್ನು ಹೆಚ್ಚು ಮಾಡಿದನು. ಕಲೆಕ್ಟರನಿಗೆ ಮ್ಯಾಜಿಸ್ಟ್ರೇಟನ ಅಧಿಕಾರ ಕೊಟ್ಟನು. (೩) ಯೋಗ್ಯತೆಯುಳ್ಳ ಹಿಂದೀಯರಿಗೆ ಅಧಿಕಾರದ ಸ್ಥಳಗಳು ದೊರೆಯಹತ್ತಿದವು. (೪) ಸರಕಾರದ ಲೆಕ್ಕ ಪತ್ರಗಳಲ್ಲಿ ದೇಶೀಯ ಭಾಷೆಗಳನ್ನು ಉಪಯೋಗಿಸಬೇಕೆಂದು ಗೊತ್ತಾಯಿತು.

**ಜನಹಿತದ ಸುಧಾರಣೆಗಳು.** – (೧) ಸತಿ ಹೋಗುವದನ್ನು ತಡೆದದ್ದು – ರಾಜಾರಾಮ ಮೋಹನ ರಾಯರಂಥ ವಿಚಾರವಂತರಾದ ಸುಶಿಕ್ಷಿ

ತರ ನೆರವಿನಿಂದ “ ಸತಿ ಹೋಗುವವಳ ಸಂಬಂಧಿಕರು ಕೊಲೆಗೆ ಸಹಾಯ ಮಾಡಿದವರೆಂದು ತಿಳಿದು ವಿಚಾರಣೆಗೆ ಗುರಿಯಾಗುವರು, ” ಎಂಬ ಕಾಯದೆ ಮಾಡಿ ಈ ಪದ್ಧತಿಯನ್ನು ನಿಲ್ಲಿಸಿಬಿಟ್ಟನು. (೨) ಠಕ್ಕರನ್ನು ನಾಶ ಗೊಳಿಸಿದ್ದು — ಠಕ್ಕರು ದೇವಿಯ ಪೂಜಕರು. ಇವರು ತೋರಿಕೆಯಲ್ಲಿ ದಾರಿಕಾರರಂತೆ ಇದ್ದು, ಇಕ್ಕಟ್ಟಿನ ಸ್ಥಳದಲ್ಲಿ ಶ್ರೀಮಂತರನ್ನು ಕೊಂದು ಅವರ ಆಸ್ತಿಯನ್ನು ಅಪಹರಿಸುತ್ತಿದ್ದರು. ಇವರು ತಮ್ಮದೊಂದು ಸ್ವತಂತ್ರ ಭಾಷೆಯನ್ನೇ ಕಲ್ಪಿಸಿಕೊಂಡಿದ್ದರು. ಬೆಂಟಿಕನ ಕಾಲದಲ್ಲಿ ಇವರ ಕಾಟವು ಹೆಚ್ಚಾಯಿತು. ಸ್ಲೀಮನ್ ಎಂಬ ಅಧಿಕಾರಿಯು ೨|೩ ಸಾವಿರ ಠಕ್ಕರನ್ನು ಹಿಡಿದು ಇವರನ್ನು ಅಪರಾಧಕ್ಕೆ ತಕ್ಕ ಶಿಕ್ಷೆಗೆ ಗುರಿ ಮಾಡಿಸಿದನು. ಆಗ ಇವರ ಕಾಟವು ತಪ್ಪಿತು. (೩) ಮಾರ್ಗಗಳನ್ನೂ ಕಾಲುವೆಗಳನ್ನೂ ಕಟ್ಟಿಸಿದ್ದು — ಮುಂಬಯಿಂದ ಆಗ್ರಾದ ವರೆಗೆ ಮತ್ತು ದಿಲ್ಲಿ ಯಿಂದ ಕಲಕತ್ತೆಯ ವರೆಗೆ ಹೀಗೆ ಎರಡು ದೊಡ್ಡ ರಾಜಮಾರ್ಗಗಳನ್ನು ಕಟ್ಟಿಸಿದನು. ಇವನ ಕಾಲದಲ್ಲಿ ಗಂಗಾನದಿಯಲ್ಲಿ ಉಗಿಹಡಗಗಳೂ ಉಗಿ ಡೋಣಿಗಳೂ ನಡೆಯಹತ್ತಿದವು. (೪) ಶಿಕ್ಷಣವನ್ನು ಪ್ರಸಾರಗೊಳಿಸಿದ್ದು— ಇಂಗ್ಲಿಷ ಭಾಷೆಯನ್ನೂ ಅದರ ಮುಖಾಂತರ ಉಳಿದ ಪಾಶ್ಚಾತ್ಯ ವಿದ್ಯೆಗ ಳನ್ನೂ ಕಲಿಸಬೇಕೆಂದು ಗೊತ್ತಾಯಿತು. ಕೂಡಲೇ ಅಲ್ಲಲ್ಲಿ ಇಂಗ್ಲಿಷ ಶಾಲೆ ಗಳುಂಟಾದವು. ಕಲಕತ್ತೆಯಲ್ಲಿ ಪಾಶ್ಚಾತ್ಯ ವೈದ್ಯಕ ಶಾಲೆಯು ಉಂಟಾ ಯಿತು.

ಉಳಿದ ಕೆಲಸಗಳು — ೧೮೩೩ ರಲ್ಲಿ ಕಂಪನಿಯ ಸನದಿನ ವಿಚಾರಣೆ ಯಾಗಿ, ಕಂಪನಿಯವರು ವ್ಯಾಪಾರವನ್ನು ಬಿಟ್ಟು ರಾಜ್ಯಕಾರಭಾರವೊಂದನ್ನೇ ಸಾಗಿಸತಕ್ಕದ್ದು. ಕಂಪನಿಯ ಪಾಲುಗಾರರಿಗೆ ೧೦೦ಕ್ಕೆ ೧೦|| ಯಂತೆ ಬಡ್ಡಿ ಯನ್ನು ಹಿಂದುಸ್ಥಾನದ ಖಜಾನೆಯಿಂದ ಕೊಡತಕ್ಕದ್ದು. ಚೀನದ ಕೂಡ ಬೇಕಾದವರು ವ್ಯಾಪಾರ ಮಾಡಬಹುದು. ಎಂದು ಗೊತ್ತಾಯಿತು.

ಆಗ್ರಾ ಪ್ರಾಂತವು ಬಂಗಾಲ ಪ್ರಾಂತದಿಂದ ಬೇರೆಯಾಗಿ ವಾಯುವ್ಯ ಪ್ರಾಂತ ಎಂದು ಸ್ವತಂತ್ರ ಪ್ರಾಂತವಾಯಿತು. ಇಡಿ ಹಿಂದುಸ್ಥಾನಕ್ಕೆ ಸಂಬಂಧ ವಿರುವ ಕಾಯದೆಗಳನ್ನು ಮಾಡುವ ಅಧಿಕಾರವು ಗ. ಜನರಲನಿಗೆ ದೊರೆತು, ಅವನ ನೆರವಿಗೆ ಒಬ್ಬ ಕಾಯದೆ ಪಂಡಿತನು ನಿಯಮಿಸಲ್ಪಟ್ಟನು.

ಬೆಂಟಿಂಕನು ಶಾಂತತಾಪ್ರಿಯನೂ ಉದಾರನೂ ಮುತ್ಸದ್ದಿಯೂ ಆಗಿ

ದ್ದನು. ಇವನ ಕಾಲದಲ್ಲಿ ಇಂಗ್ಲಿಷರ ರಾಜ್ಯದ ಬಗೆಗೆ ಜನರಲ್ಲಿ ಸಹಾನುಭೂತಿಯು ಉಂಟಾಯಿತು.

**ಪ್ರ. :— ಲಾರ್ಡ ಡಾಲಹೌಸಿಯ ವ್ಯಕ್ತಿತ್ವವನ್ನೂ ಅವನ ಆಳಿಕೆಯ ಸ್ವರೂಪವನ್ನೂ ವಿವರಿಸಿರಿ.**

**ಉ. :—** ಇವನು ವಯಸ್ಸಿನ ಇಪ್ಪತ್ತೈದನೆಯ ವರ್ಷ ಇಂಗ್ಲಂಡದ ಪಾರ್ಲಮೆಂಟಿನ ಸಭಾಸದನಾದನು. ಮುಂದೆ ವಾಣಿಜ್ಯ ಶಾಖೆಯ ಮಂತ್ರಿಯಾಗಿ ಮನನ್ನುಗೊಟ್ಟು ಕೆಲಸಮಾಡಿ ಅನುಭವಿಕನೆನಿಸಿದನು. ಕ್ರಿ. ಶ. ೧೮೪೮ ರಲ್ಲಿ ಗ. ಜನರಲನಾಗಿ ಈ ದೇಶಕ್ಕೆ ಬಂದನು. ಮೊದಲು ಪಂಜಾಬದ ೨ ನೆಯ ಯುದ್ಧದಿಂದ ಪಂಜಾಬ ಪ್ರಾಂತವನ್ನು ಗೆದ್ದು ಅದನ್ನು ಇಂಗ್ಲಿಷ ರಾಜ್ಯಕ್ಕೆ ಕೂಡಿಸಿ ತಮ್ಮ ರಾಜ್ಯದ ಮೇರೆಯನ್ನು ಅಫಗಾಣಿಸ್ತಾನಕ್ಕೆ ನಿಲುಕಿಸಿದನು. ಇವನ ಕಾಲದಲ್ಲಿ ಇಂಗ್ಲಿಷರನ್ನು ತಡೆಯುವ ಕಸುವು ಯಾವ ದೇಶೀಯ ಅರಸರಲ್ಲಿಯೂ ಇರಲಿಲ್ಲ. ಈ ಸ್ಥಿತಿಯು ಇಂಗ್ಲಿಷರ ಸಾಮ್ರಾಜ್ಯಸ್ಥಾಪನೆಗೂ ವ್ಯಾಪಾರದ ಬೆಳೆವಣಿಗೆಗೂ ಅನುಕೂಲವೆಂದು ತಿಳಿದು ಉಗೆಬಂಡಿ, ತಾರಾಯಂತ್ರ, ಪೋಸ್ಟ ಆಫೀಸು ಮೊದಲಾದ ಹೊಸ ಸಾಧನಗಳನ್ನು ಈ ದೇಶದಲ್ಲಿ ಹಬ್ಬಿಸುವ ಕೆಲಸವನ್ನು ಕೈಕೊಂಡು ಅದನ್ನು ಒತ್ತರದಿಂದ ಸಾಗಿಸಿದನು. ಈ ಕೆಲಸವು ಪೂರ್ಣವಾಗಬೇಕಾದರೆ ನಡುನಡುವೆ ಇರುವ ದೇಶೀಯ ರಾಜ್ಯಗಳ ಸದಲನ್ನು ಆದಷ್ಟು ಕಡಮೆ ಮಾಡಬೇಕೆಂದು ಅವನಿಗೆ ಎನಿಸಿತು. ಅದಕ್ಕಾಗಿ, ಸಿಕ್ಕ ಕಾರಣಗಳನ್ನು ಮುಂದೆ ಮಾಡಿ ಎಷ್ಟೋ ರಾಜ್ಯಗಳನ್ನು ಖಾಲಸಾ ಮಾಡಿದನು. ಒಟ್ಟಿನ ಮೇಲೆ ಇವನ ಆಳಿಕೆಯಲ್ಲಿ ಹಿಂದುಸ್ಥಾನದ ಸ್ವರೂಪವೇ ಬದಲಾಯಿತೆಂದು ಹೇಳಲು ಅಡ್ಡಿಯಿಲ್ಲ.

**ಪ್ರ. :— ಡಾಲಹೌಸಿಯು ಯಾವ ಯಾವ ರಾಜ್ಯಗಳನ್ನು ಯಾವ ಯಾವ ಕಾರಣಗಳಿಂದ ಖಾಲಸಾ ಮಾಡಿದನು ?**

**ಉ. :—** ಕೆಳಗೆ ಬರೆದ ಪ್ರಕಾರ ಡಾಲಹೌಸಿಯು ಖಾಲಸಾ ಮಾಡಿದ ರಾಜ್ಯಗಳ ವಿವರಣೆ ಇದೆ.

(೧) ಪಂಜಾಬ ಪ್ರಾಂತ ಮತ್ತು ದಕ್ಷಿಣ ಬ್ರಹ್ಮದೇಶ ಇವುಗಳನ್ನು ಯುದ್ಧಮಾಡಿ ತೆಗೆದುಕೊಂಡನು.

(೨) ವರ್‍ಹಾಡಪ್ರಾಂತವನ್ನೂ ರಾಯಚೂರು, ನಂದಿದುರ್ಗ ಈ

ಪರಗಣೆಗಳನ್ನೂ ನಿಜಾಮನಿಂದ ಸೈನ್ಯದ ವೆಚ್ಚಕ್ಕಾಗಿ ಸಲ್ಲತಕ್ಕ ಹಣಕ್ಕೆ ಪ್ರತಿಯಾಗಿ ತೆಗೆದುಕೊಂಡನು.

(೩) ಸಾತಾರೆ, ಝಾಂಸಿ ಈ ರಾಜ್ಯಗಳನ್ನು ದತ್ತಕ ವಾರಸಾ ಹಕ್ಕಿಗೆ ಒಪ್ಪಿಗೆ ಕೊಡದೆ ಕಸಿದುಕೊಂಡನು.

(೪) ನಾಗಪುರ, ತಂಜಾವರ, ಉದೇಪುರ, ಜೈತಪುರ, ಸಂಬಳಪುರ ಈ ರಾಜ್ಯಗಳ ಅರಸರು ಮಕ್ಕಳಿಲ್ಲದೆ ತೀರಿಕೊಂಡರು. ಇವರ ವಂಶಜರಿಗೆ ದತ್ತಕ ತೆಗೆದುಕೊಳ್ಳಲು ಅಪ್ಪಣೆ ಕೊಡದೆ ಈ ರಾಜ್ಯಗಳನ್ನು ಕಸಿದುಕೊಂಡನು.

(೫) ಅಯೋಧ್ಯೆ, ಖೈರಪುರ, ದಾರ್ಜಿಲಿಂಗ ಇವುಗಳನ್ನು ರಾಜ್ಯದಲ್ಲಿಯ ಅವ್ಯವಸ್ಥೆಯ ಆಳಿಕೆಯ ನೆವದಿಂದ ಕಸಿದುಕೊಂಡನು.

ಈ ರಾಜ್ಯಗಳಲ್ಲದೆ, ೨ನೆಯ ಬಾಜಿರಾಯನು ಕ್ರಿ. ಶ. ೧೮೫೨ ರಲ್ಲಿ ಸಾಯಲು ಅವನಿಗೆ ಸಲ್ಲುತ್ತಿದ್ದ ೮ ಲಕ್ಷ ರೂಪಾಯಿ ವರ್ಷಾಶನವನ್ನು ಅವನ ದತ್ತಕ ಮಗನಿಗೆ ಕೊಡುವದನ್ನು ನಿಲ್ಲಿಸಿದನು. ಮತ್ತು ಕರ್ನಾಟಕದ ನವಾಬನ ವಂಶಜನಾದ ಗೌಸಖಾನನು ಮಕ್ಕಳಿಲ್ಲದೆ ಸಾಯಲು ಅವನಿಗೆ ಸಲ್ಲುತ್ತಿದ್ದ ವರ್ಷಾಶನವನ್ನು ಕಟ್ಟುಮಾಡಿದನು. ಹೀಗೆ ಹಣವನ್ನೂ ಉಳಿಸಿಕೊಂಡನು.

**ಪ್ರ. :—ಲಾರ್ಡ ಡಾಲಹೌಸಿಯ ಕಾಲದಲ್ಲಾದ ಸುಧಾರಣೆಗಳು ಯಾವವು?**

**ಉ. :—** (೧) ಬಂಗಾಲ ಪ್ರಾಂತದ ಕಾರಭಾರವನ್ನು ಗವ್ಹರ್ನರ ಜನರಲ್ಲನೇ ನಾಗಿಸುತ್ತಿದ್ದನು. ಡಾಲಹೌಸಿಯ ಕಾಲದಲ್ಲಿ ಬಂಗಾಲ ಇಲಾಖೆಗೆ ಒಬ್ಬ ಲೆಫ್ಟೆನಂಟ ಗವ್ಹರ್ನರನು ನಿಯಮಿಸಲ್ಪಟ್ಟನು. ಎಲ್ಲ ಇಲಾಖೆಗಳ ಮೇಲ್ವಿಚಾರಣೆಯೆ ಗ. ಜನರಲ್ಲನ ಕೆಲಸವಾಯಿತು. (೨) ವಾಯವ್ಯ ಸರಹದ್ದಿನ ಸಂರಕ್ಷಣೆಗೆ ಅನುಕೂಲವಾಗಲೆಂದು ಕಲಕತ್ತೆಯ ಬದಲು ಮಿರತವು ಸೈನ್ಯದ ಮುಖ್ಯ ಠಾಣ್ಯವಾಯಿತು. (೩) ಪಬ್ಲಿಕ್ ವರ್ಕ್ಸ ಖಾತೆಯನ್ನು ಸ್ಥಾಪಿಸಿ ಮಾರ್ಗ-ಕಾಲುವೆ-ಕಟ್ಟಡಗಳನ್ನು ತಯಾರಿಸುವ ಕೆಲಸವನ್ನು ಒತ್ತರದಿಂದ ನಾಗಿಸಿದನು. (೪) ಕೆಲವು ಖಾತೆಗಳಿಂದ ಕೂಡಿದ ವಿಭಾಗದ ಮೇಲ್ವಿಚಾರಣೆಯ ಕೆಲಸವು ಒಬ್ಬೊಬ್ಬ ಸಭಾಸದನಿಗೆ ಒಪ್ಪಿಸಲ್ಪಟ್ಟಿತು. (೫) ಇಂಗ್ಲಂಡದಲ್ಲಾಗುವ ಸಿವ್ಹಿಲ್ ಸರ್ವಿಸ ಪರೀಕ್ಷೆಗೆ ಹೋಗಲು ಈ ದೇಶದ

ತರುಣರಿಗೂ ಅನುಕೂಲವಾಯಿತು. (೬) ಉಗಿಬಂಡಿ-ತಾರಾಯಂತ್ರ-ಪೋಸ್ಟ ಆಫೀಸು ಈ ಸಾಧನಗಳು ಇವನ ಕಾಲದಲ್ಲಿಯೇ ಬಳಕೆಯಲ್ಲಿ ಬಂದವು. (೭) ವಿದ್ಯಾಖಾತೆಯ ಸ್ಥಾಪನೆಯಿಂದ ವಿದ್ಯಾಪ್ರಸಾರಕ್ಕೆ ಅನುಕೂಲವಾಯಿತು. (೮) ಮುಂಬಯಿ, ಮದ್ರಾಸ, ಕಲಕತ್ತೆಗಳಲ್ಲಿ ವಿಶ್ವವಿದ್ಯಾಲಯಗಳು ಸ್ಥಾಪಿಸಲ್ಪಟ್ಟವು. (೯) ಹಾರ್ಡಿಂಜನ ಕಾಲದಲ್ಲಿ ಆರಂಭವಾದ ಗಂಗೆಯ ಕಾಲುವೆಯು ಈಗ ಪೂರ್ಣವಾಗಿ ಒಕ್ಕಲುತನಕ್ಕೂ ಹಡಗಗಳ ಓಡಾಟಕ್ಕೂ ಅನುಕೂಲವಾಯಿತು. (೧೦) ಕಂಪನಿಯ ಸನದಿನ ವಿಚಾರಣೆಯು ಕ್ರಿ. ಶ. ೧೮೫೩ ರಲ್ಲಿ ನಡೆದು "ಕಂಪನಿಯ ಕೈಯಲ್ಲಿಯ ರಾಜ್ಯಕಾರಭಾರವನ್ನು ಪಾರ್ಲಮೆಂಟಿನವರು ಬೇಕಾದಾಗ ತೆಗೆದುಕೊಳ್ಳಬಹುದು. ಅದುವರೆಗೆ ಕಂಪನಿಯವರು ಈಗಿನಂತೆ ರಾಜ್ಯಕಾರಭಾರವನ್ನು ನಾಗಿಸುತ್ತಿರಬೇಕು;" ಎಂದು ಗೊತ್ತಾಯಿತು.

**ಪ್ರ. :— ಕ್ರಿ. ಶ. ೧೮೫೭ ರ ಸ್ವಾತಂತ್ರ್ಯಯುದ್ಧದ (ಬಂಡಾಯದ) ಕಾರಣಗಳಾವವು ? ಇದರಿಂದ ಬ್ರಿಟಿಷರ ರಾಜಕೀಯ ಧೋರಣೆಯಲ್ಲಿ ಆದ ಬದಲಾವಣೆಗಳಾವವು ?**

**ಉ. :—** ಕ್ರಿ. ಶ. ೧೮೫೭ ರ ಸ್ವಾತಂತ್ರ್ಯಯುದ್ಧದ ಕಾರಣಗಳು — (೧) ಡಾಲಹೌಸಿಯು ಹಲವು ದೇಶೀಯ ಅರಸರ ರಾಜ್ಯಗಳನ್ನೂ ವರ್ಷಾಶನಗಳನ್ನೂ ಕಸಿದುಕೊಂಡದ್ದಕ್ಕೆ ಅಧಿಕಾರ, ಧನ, ಮಾನ ಇವುಗಳಿಗೆ ಎರವಾದ ಜನರು ಅಸಂತುಷ್ಟರಾಗಿ ಪ್ರತೀಕಾರದ ಉಪಾಯವನ್ನು ಹುಡುಕುತ್ತಿದ್ದರು. (೨) ಕ್ರಿಶ್ಚನ ಮಿಶನರಿಗಳ ಧರ್ಮಪ್ರಸಾರದ ಚಟುವಟಿಕೆಗಳಿಂದ ಹಿಂದುಗಳ ಧರ್ಮಭಾವನೆಗೆ ಆಘಾತ ಉಂಟಾಯಿತು. (೩) ಉಗಿಬಂಡಿ ತಾರಾಯಂತ್ರ ಇವು ಹೊಸದಾಗಿ ಬಂದ ಕೂಡಲೆ ತಿಳಿವಿಲ್ಲದ ಜನರು ಇದನ್ನು ಉತ್ಪಾತವೆಂದು ತಿಳಿದರು. (೪) ಪ್ಲಾಸಿಯುದ್ಧದಿಂದ ೧೮೫೭ ಕ್ಕೆ ನೂರು ವರ್ಷಗಳಾದವು; ಇಂಗ್ಲಿಷರ ಆಳಿಕೆಯು ಮುಗಿಯುವದು; ಎಂಬ ಭವಿಷ್ಯವನ್ನು ಹಲವರು ನಿಜವೆಂದು ನಂಬಿದರು. (೫) ದಿಲ್ಲಿಯ ಬಾದಶಹನಿಗೆ ವರ್ಷಾಶನ ಸಿಗುತ್ತಿದ್ದಿತು. ಈ ಕಾಲದಲ್ಲಿಯೇ ಅವನ ಬಾದಶಹ ಎಂಬ ಬಿರುದು ಕಸಿದುಕೊಳ್ಳಬೇಕೆಂದು ಗೊತ್ತಾಯಿತು. ಇದರಿಂದ ಮೊಗಲ ಮನೆತನದ ಅಭಿಮಾನಿಗಳಲ್ಲಿ ಅಸಮಾಧಾನವುಂಟಾಯಿತು. (೬) ಅಯೋಧ್ಯಾಪ್ರಾಂತವು ಖಾಲಸಾ ಆದ ಬಳಿಕ ಅಲ್ಲಿದ್ದ ಜಮೀನದಾರಿ ಪದ್ಧತಿಯು ನಷ್ಟವಾಗಹತ್ತಿದ್ದ

ರಿಂದ ಜಮೀನದಾರರೂ ಅಸಂತುಷ್ಟರಾದರು. (೭) ಹೊಸದಾಗಿ ಬಂದ ರಾಯಫಲಿನ ಕಾಡತೂಸುಗಳ ಹೊದಿಕೆಯನ್ನು ಹಲ್ಲುಗಳಿಂದ ಕಡಿದು ತೆಗೆಯ ಬೇಕಾಗಿದ್ದಿತು. ಅದಕ್ಕೆ ನೆಣ ಹಚ್ಚಿದ್ದರಿಂದ ತಮ್ಮ ಧರ್ಮವನ್ನು ಇಂಗ್ಲಿಷರು ಕೆಡಿಸುವರೆಂಬ ಗ್ರಹಿಕೆಯು ಸೈನಿಕರಲ್ಲಿ ಹಬ್ಬಿತು. (೮) ಸಹಾಯಕ ಸೈನ್ಯ ಪದ್ಧತಿಯು ಕಾಲದಲ್ಲಿ ದೊರೆಯುತ್ತಿದ್ದ ಭತ್ತೆಯು ಕಟ್ಟಾಯಿತು ಮತ್ತು ಎಷ್ಟು ದಿನ ಕೆಲಸ ಮಾಡಿದರೂ ದೇಶೀಯರಿಗೆ ಮೇಲಿನ ಸ್ಥಳಗಳು ದೊರೆಯು ತ್ತಿರಲಿಲ್ಲ. ಇದರಿಂದಲೂ ಸೈನಿಕರಲ್ಲಿ ಅಸಂತೋಷವು ಹಬ್ಬಿತು.

**ಕ್ರಿ. ಶ. ೧೮೫೭ ರ ನಂತರ ರಾಜಕೀಯ ಧೋರಣೆಯಲ್ಲಾದ ಬದಲಾವಣೆ**— ಕ್ರಿ. ಶ. ೧೮೫೭ ರ ಸ್ವಾತಂತ್ರ್ಯಯುದ್ಧದ ನಂತರ ಇಂಗ್ಲಂಡದ ಜನರು ಹಿಂದುಸ್ಥಾನದ ರಾಜ್ಯಕಾರಭಾರದ ಕಡೆಗೆ ವಿಶೇಷ ಮನಸ್ಸು ಹಾಕಹತ್ತಿದರು. ಭಾರತೀಯರ ಅಧಿಕಾರ, ಹಕ್ಕು, ಮಾನ ಮರ್ಯಾದೆ ಗಳನ್ನು ಲೆಕ್ಕಿಸದೆ, ಬರಿಯ ಲಾಭಬಡಕತನದಿಂದ ನಾಗಿಸಿದ ಕಂಪನಿಯ ಆಳಿ ಕೆಯು ಅವರಿಗೆ ಸಾಕೆನಿಸಿತು. ಇದಕ್ಕಾಗಿ ಪಾರ್ಲಮೆಂಟಿನವರೇ ಹಿಂದು ಸ್ಥಾನದ ರಾಜ್ಯಕಾರಭಾರವನ್ನು ವಹಿಸಬೇಕೆಂದು ಗೊತ್ತಾಯಿತು. ಕ್ರಿ. ಶ. ೧೮೫೮ ರ ಇಂಡಿಯಾ ಆಕ್ಟ ಎಂಬ ಕಾಯದೆ ಪಾಸಾಗಿ ರಾಣಿಯವರ ಜಾಹೀರ ನಾಮೆಯೊಂದಿಗೆ ಕಂಪನಿಯ ಆಳಿಕೆ ಮುಗಿದು ಇಂಗ್ಲಿಷ ಪಾರ್ಲಮೆಂಟಿನ ಆಳಿಕೆಗೆ ಆರಂಭವಾಯಿತು.

**ಪ್ರ.:— ಕ್ರಿ. ಶ. ೧೮೫೭ ರ ಬಂಡಾಯವೆಂದು ಕೆಲವರು ಅನ್ನುವರು. ಇದಕ್ಕೆ ಪ್ರತಿಯಾಗಿ ಕ್ರಿ. ಶ. ೧೮೫೭ ರ ಸ್ವಾತಂತ್ರ್ಯಯುದ್ಧ ಎಂಬ ಹೆಸರು ಒಪ್ಪು ವದು, ಎಂಬದಕ್ಕೆ ಐತಿಹಾಸಿಕ ಕಾರಣಗಳನ್ನು ಕೊಡಿರಿ.**

**ಉ.:—** ಕ್ರಿ. ಶ. ೧೮೫೭ ರಲ್ಲಿ ಇಂಗ್ಲಿಷರ ವಿರುದ್ಧ ನಿಂತವರೆಲ್ಲರು ಅವರನ್ನು ಈ ದೇಶದಿಂದ ಹೊರಗೆ ಹಾಕಿ ತಮ್ಮ ರಾಜ್ಯವನ್ನು ಸ್ಥಾಪಿಸ ಬೇಕೆಂದು ಪ್ರಯತ್ನಿಸಿದರು. ಈ ಪ್ರತಿಕಾರವು ಸಶಸ್ತ್ರವಾಗಿದ್ದಿತು. ಕ್ರಿ. ಶ. ೧೯೪೨ ರಲ್ಲಿ ಮಹಾತ್ಮಾ ಗಾಂಧಿಯವರು ಕೂಡ ಚಲೆಜಾವ ಚಟುವಟಿಕೆ ಯನ್ನು, ಇಂಗ್ಲಿಷರನ್ನು ಈ ದೇಶದಿಂದ ಹೊರಗೆ ಹಾಕಬೇಕೆಂದೇ ನಡೆಸಿದರು. ಆದರೆ ಇವರ ಪ್ರತಿಕಾರವು ನಿಶ್ಶಸ್ತ್ರವಾಗಿದ್ದಿತು. ಎರಡೂ ಪ್ರಯತ್ನಗಳು ಸ್ವಾತಂತ್ರ್ಯಪ್ರಾಪ್ತಿಗಾಗಿಯೇ ಆದವು. ಆದದರಿಂದ ಕ್ರಿ. ಶ. ೧೮೫೭ ರ ಪ್ರಯ ತ್ನಕ್ಕೆ ಕ್ರಿ. ಶ. ೧೮೫೭ ರ ಸ್ವಾತಂತ್ರ್ಯಯುದ್ಧ ಎಂಬ ಹೆಸರು ಒಪ್ಪುವದು.

ಪ್ರ. :— ಬ್ರಿಟಿಷರ ರಾಜ್ಯವು ಹಿಂದುಸ್ಥಾನದಲ್ಲಿ ಉಂಟಾಗಲು, ಸ್ಥಿರಗೊಳ್ಳಲು, ಬೆಳೆವಣಿಗೆ ಹೊಂದಲು ಯಾವ ಯಾವ ಗ. ಜನರಲ್ಲರು ಕಾರಣವಾದರು ? ಅವರು ಅದಕ್ಕಾಗಿ ಯಾವ ಯಾವ ಉಪಾಯಗಳನ್ನು ಕೈಗೊಂಡರು?

**ಉ :**— ಲಾರ್ಡ ಕ್ಲೈವ, ವಾರ್ನ ಹೆಸ್ಟಿಂಗ್ಸ ಇವರು ಹಿಂದುಸ್ಥಾನದಲ್ಲಿ ಬ್ರಿಟಿಷರ ರಾಜ್ಯವನ್ನು ಸ್ಥಾಪಿಸಿದರು. ಲಾರ್ಡ ವೆಲ್ಲಸ್ಲಿ, ಲಾರ್ಡ ಡಾಲಹೌಸಿ ಇವರು ಬ್ರಿಟಿಷರ ರಾಜ್ಯವನ್ನು ಬೆಳೆಯಿಸಿದರು. ಲಾರ್ಡ ಉಯಿಲಿಯಮ್ ಬೆಂಟೆಂಕ್, ಲಾರ್ಡ ಕ್ಯಾನಿಂಗ್ ಇವರು ರಾಜ್ಯವನ್ನು ಸ್ಥಿರಗೊಳಿಸಿದರು.

ಕ್ಲೈವನು ಶೌರ್ಯ–ಧೈರ್ಯ–ಯುಕ್ತಿಗಳಿಂದ ಬ್ರಿಟಿಷರ ಅಧಿಕಾರವನ್ನು ನೆಲೆಗೊಳಿಸಿದನು. ವೆಲ್ಲಸ್ಲಿಯು ಮುತ್ಸದ್ದಿತನ–ಶೌರ್ಯ–ಸಾಹಸಗಳಿಂದ ಬ್ರಿಟಿಷರ ರಾಜ್ಯವನ್ನು ವಿಸ್ತರಿಸಿದನು. ಹೆಸ್ಟಿಂಗ್ಸನು ಇದೇ ಕೆಲಸವನ್ನು ಮುಂದೆ ಸಾಗಿಸಿದನು. ಡಾಲಹೌಸಿಯಂತೂ ಧೈರ್ಯದಿಂದ ಬ್ರಿಟಿಷರ ರಾಜ್ಯವನ್ನು ಹಿಂದುಸ್ಥಾನದಲ್ಲಿ ಪೂರ್ಣವಾಗಿ ವಿಸ್ತರಿಸಿದನು. ಲಾರ್ಡ ಉಯಿಲಿಯಮ್ ಬೆಂಟೆಂಕ್‌ನು ಹಲವು ಉಪಯುಕ್ತವಾದ ಸುಧಾರಣೆಗಳನ್ನು ಮಾಡಿ ಬ್ರಿಟಿಷರ ಬಗೆಗೆ ಸಹಾನುಭೂತಿಯನ್ನು ಹುಟ್ಟಿಸಿದನು. ಅದರಂತೆ ಕ್ಯಾನಿಂಗನು ೧೮೫೭ರ ಭೀಕರ ಪ್ರಸಂಗದಿಂದ ಬ್ರಿಟಿಷರ ರಾಜ್ಯವನ್ನು ಉಳಿಸಿ, ರಾಣಿಯವರ ಜಾಹೀರನಾಮೆ ಮುಂತಾದ ಯೋಗ್ಯ ಉಪಾಯಗಳಿಂದ ಬ್ರಿಟಿಷ ರಾಜ್ಯವು ಸುಸೂತ್ರವಾಗಿ ಸಾಗುವಂತೆ ಮಾಡಿದನು.

ಪ್ರ. :— **ಕೆಳಗಿನ ಸಂಗತಿಗಳ ಬಗೆಗೆ ಸಂಕ್ಷಿಪ್ತ ಟಿಪ್ಪಣಿಗಳನ್ನು ಬರೆಯಿರಿ. ಝಾಂಸಿ ರಾಣಿ, ತಾತ್ಯಾ ಟೋಪಿ, ಇಂಡಿಯಾ ಆಕ್ಟ, ಸರ್ ಹ್ಯೂರೋಜ, ರಾಣಿಯ ಜಾಹೀರನಾಮೆ.**

**ಉ. :— ಝಾಂಸಿ ರಾಣಿ**— ಈಕೆಯು ೨ನೆಯ ಬಾಜೀರಾಯನ ಕಾರಭಾರಿಯಾದ ತಾಂಬೆ ಎಂಬವನ ಮಗಳು. ಈಕೆಯ ಮೂಲ ಹೆಸರು ಮನುಬಾಯಿ. ನಾನಾಸಾಹೇಬ ಪೇಶ್ವೆಯ ಸಂಗಡ ಕುದುರೆ ಹತ್ತುವದು, ಗುರಿ ಹೊಡೆಯುವದು ಮುಂತಾದ ಯುದ್ಧವಿದ್ಯೆಯನ್ನು ಕಲಿತಿದ್ದಳು. ಗಂಡನ ಮರಣದ ನಂತರ ದತ್ತಕ ತೆಗೆದುಕೊಂಡು ಝಾಂಸಿಯ ರಾಜ್ಯವನ್ನಾಳಹತ್ತಿದಳು. ಡಾಲಹೌಸಿಯು ದತ್ತಕ ಹಕ್ಕನ್ನು ಒಪ್ಪದೆ ಝಾಂಸಿಯ ರಾಜ್ಯವನ್ನು ಖಾಲಸಾ ಮಾಡಿದನು. ಆದದರಿಂದ ರಾಣಿಯು ಬಂಡುಗಾರರನ್ನು

ಕೂಡಿಕೊಂಡಳು. ಇಂಗ್ಲಿಷರೊಡನೆ ಶೂರತನದಿಂದ ಕಾದುತ್ತ ಬಲಿದಾನ ಮಾಡಿದ ಕೊನೆಯ ಸ್ತ್ರೀಯಳು ಈಕೆಯೇ!

**ತಾತ್ಯಾ ಟೋಪಿ**—೧೮೫೭ ರಲ್ಲಾದ ಸ್ವಾತಂತ್ರ್ಯಯುದ್ಧದಲ್ಲಿಯ ಪ್ರಮುಖರಲ್ಲೊಬ್ಬನು. ಇವನು ಹಲವು ಕಡೆಗಳಲ್ಲಿ ಇಂಗ್ಲಿಷರೊಡನೆ ಶೂರತನದಿಂದ ಹೋರಾಡಿದನು. ಹಿಂದೀ ಸೈನಿಕರಿಗೆ ಸೋಲುಂಟಾಗಲು ಇವನು ಮಾಳವದ ಕಡೆಗೆ ಓಡಿದನು. ಆದರೆ ಮುಂದೆ ಇಂಗ್ಲಿಷರ ಕೈಗೆ ಸಿಕ್ಕು ಗಲ್ಲಿಗೆ ಹಾಕಲ್ಪಟ್ಟನು.

**ಇಂಡಿಯಾ ಆಕ್ಟ**—೧೮೫೭ ರಲ್ಲಾದ ಸ್ವಾತಂತ್ರ್ಯಯುದ್ಧದ ನಂತರ ಇಂಗ್ಲಂಡದ ಪಾರ್ಲಮೆಂಟಿನವರು ಇಂಡಿಯಾ ಆಕ್ಟ ಎಂಬ ಕಾಯದೆಯನ್ನು ಮಾಡಿ ಕಂಪನಿಯವರ ಕೈಯಿಂದ ರಾಜ್ಯಕಾರಭಾರವನ್ನು ಕಸಿದುಕೊಂಡರು. ಇದರ ಮುಖ್ಯ ಕಲಮುಗಳು—(೧) ಈಸ್ಟ ಇಂಡಿಯಾ ಕಂಪನಿಯನ್ನು ರದ್ದುಗೊಳಿಸಿ ಹಿಂದುಸ್ಥಾನದ ರಾಜ್ಯಭಾರವನ್ನು ವಿಕ್ಟೋರಿಯಾ ಮಹಾರಾಣಿಯ ಹೆಸರಿನಿಂದ ನಡೆಯಿಸಬೇಕು. (೨) ೧೫ ಜನ ಸಭಾಸದರುಳ್ಳ ಇಂಡಿಯಾ ಕೌನ್ಸಿಲು ಹಿಂದುಸ್ಥಾನದ ಕಾರಭಾರದ ಮೇಲ್ವಿಚಾರಣೆಯ ಕೆಲಸವನ್ನು ಮಾಡತಕ್ಕದ್ದು. (೩) ಇಂಗ್ಲಂಡದ ಮಂತ್ರಿಮಂಡಲದಲ್ಲೊಬ್ಬನು ಭಾರತ ಮಂತ್ರಿ ಎಂಬ ಹೆಸರಿನಿಂದ ಇಂಡಿಯಾ ಕೌನ್ಸಿಲಿನ ಮುಖ್ಯನಾಗಿರತಕ್ಕದ್ದು. (೪) ಹಿಂದುಸ್ಥಾನದ ಗವ್ಹರ್ನರ ಜನರಲನು ವ್ಹಾಯಿಸರಾಯ (ರಾಜಪ್ರತಿನಿಧಿ) ಎಂಬ ಹೆಸರಿನಿಂದ ಕಾರಭಾರವನ್ನು ಸಾಗಿಸಬೇಕು.

**ಸರ್ ಹ್ಯೂರೋಜ**—ಇವನು ೧೮೫೭ ರ ಸ್ವಾತಂತ್ರ್ಯ ಯುದ್ಧದಲ್ಲಿ ಇಂಗ್ಲಿಷರ ಕಡೆಗಿದ್ದ ಹೆಸರಾದ ಸೇನಾಪತಿಯು. ಯುಕ್ತಿಪ್ರಯುಕ್ತಿಗಳಿಂದಲೂ ಧೈರ್ಯದಿಂದಲೂ ಎದುರುಗಾರರನ್ನು ಮುರಿದು ಇಂಗ್ಲಂಡಿಗೆ ಗೆಲುವನ್ನು ಉಂಟುಮಾಡಿಕೊಟ್ಟನು. ಇಂಗ್ಲಿಷರ ರಾಜ್ಯವನ್ನು ಈ ಕುತ್ತಿನಿಂದ ದಾಟಿಸಿದ ಶ್ರೇಯಸ್ಸು ಇವನಿಗೂ ಸಲ್ಲುವದು.

**ರಾಣಿಯ ಜಾಹೀರನಾಮೆ**—(೧) ಹಿಂದುಸ್ಥಾನದಲ್ಲಿಯ ರಾಜರ ಮತ್ತು ಮಹಾರಾಜರ ಕೂಡ ಕಂಪನಿಯವರು ಮಾಡಿಕೊಂಡ ಒಪ್ಪಂದಗಳೂ ಕರಾರುಗಳೂ ಸರಿಯಾಗಿ ಪಾಲಿಸಲ್ಪಡುವವು. (೨) ರಾಜರನ್ನೂ ಮಹಾರಾಜರನ್ನೂ ತಕ್ಕ ಮರ್ಯಾದೆಯಿಂದ ನಡೆಯಿಸಿಕೊಳ್ಳುವೆವು. (೩) ಧರ್ಮಗಳಲ್ಲಿ ಕೈಹಾಕುವದಿಲ್ಲ. (೪) ಜಾತಿಧರ್ಮಗಳ ಭೇದವನ್ನೆಣಿಸದೆ ಯೋಗ್ಯತೆ

ಯುಳ್ಳವರಿಗೆ ನೌಕರಿಯಲ್ಲಿ ತೆಗೆದುಕೊಳ್ಳುವೆವು. (೬) ಕರವನ್ನು ಸರಿಯಾಗಿ ತುಂಬಿದ ಜಮೀನದಾರರ ಮತ್ತು ರೈತರ ಹಕ್ಕು ಬಾಧ್ಯತೆಗಳು ಸರಿಯಾಗಿ ನಡೆಯಿಸಲ್ಪಡುವವು. (೭) ಕೊಲೆಯ ಅಪರಾಧಿಗಳನ್ನು ಬಿಟ್ಟು ಉಳಿದವರನ್ನು ಕ್ಷಮಿಸುವೆವು.

**ಪ್ರ. :— ಲಾರ್ಡ ಕ್ಯಾನಿಂಗನ ಯೋಗ್ಯತೆ ಮತ್ತು ರಿಪನನು ಮಾಡಿದ ಸುಧಾರಣೆ ಇವುಗಳ ಬಗೆಗೆ ಟಿಪ್ಪಣಿಗಳನ್ನು ಬರೆಯಿರಿ.**

**ಉ. :— ಲಾರ್ಡ ಕ್ಯಾನಿಂಗನ ಯೋಗ್ಯತೆ—** ಡಾಲಹೌಸಿಯು ಹೋದ ಬಳಿಕ ಉಂಟಾದ ಭೀಕರ ಪರಿಸ್ಥಿತಿಯನ್ನು ಜಾಣತನದಿಂದ ಹಿಡಿತದಲ್ಲಿ ತಂದವನು ಲಾರ್ಡ ಕ್ಯಾನಿಂಗನು. ಪಲವರು ಇಂಗ್ಲಿಷರು ಬಂಡಾಯದ ಸೇಡು ತೀರಿಸಲು ಹಾತೊರೆಯುತ್ತಿದ್ದರು. ದಯಾಳುವಾದ ಇವನು ಶಾಂತತೆಯ ಮತ್ತು ಜಾಣತನದ ಉಪಾಯಗಳಿಂದ ಜನರನ್ನು ಸಮಾಧಾನಗೊಳಿಸಿದನು. ರಾಣಿಯವರ ಜಾಹೀರನಾಮೆಯ ಮೂಲಕ ಕೊಡಲ್ಪಟ್ಟ ಅಭಿವಚನಗಳನ್ನು ಹಿಂದೀಯರು ತಟ್ಟನೆ ನಂಬಲು ಕ್ಯಾನಿಂಗನ ಒಳ್ಳೆಯ ಆಳಿಕೆಯೇ ಕಾರಣವಾಯಿತೆಂದು ಹೇಳಬಹುದು.

**ಲಾರ್ಡ ರಿಪನನು ಮಾಡಿದ ಸುಧಾರಣೆಗಳು—** (೧) ಮುದ್ರಣ ಸ್ವಾತಂತ್ರ್ಯ— ಲಿಟನನ ಕಾಲದಲ್ಲಿ ಮುದ್ರಣ ಸ್ವಾತಂತ್ರ್ಯವು ಕಸಿದುಕೊಳ್ಳಲ್ಪಟ್ಟಿತ್ತು. ರಿಪನನು ಮುದ್ರಣದ ಮೇಲಿನ ನಿರ್ಬಂಧಗಳನ್ನು ತೆಗೆದು ಹಾಕಿದನು. (೨) ಸ್ಥಾನಿಕ ಸ್ವರಾಜ್ಯ— ಈ ದೇಶದವರಿಗೆ ರಾಜ್ಯಕಾರಭಾರದ ಶಿಕ್ಷಣವು ದೊರೆಯಲೆಂದು ಮ್ಯೂನಿಸಿಪಾಲಿಟಿ, ಲೋಕಲ್ ಬೋರ್ಡ ಎಂಬ ಸಂಸ್ಥೆಗಳನ್ನು ಸ್ಥಾಪಿಸಿದನು. (೩) ಶಿಕ್ಷಣದ ಏಳ್ಗೆ— ಹಂಟರ ಕಮೀಟಿಯ ವರದಿಯ ಮೇರೆಗೆ ಶಿಕ್ಷಣವನ್ನು ಪ್ರಸಾರಗೊಳಿಸಿ ಅದರಲ್ಲಿ ತಕ್ಕ ಸುಧಾರಣೆಗಳನ್ನು ಮಾಡಿದನು. (೪) ಇಲ್ಬರ್ಟ ಬಿಲ್— ಯುರೋಪಿಯನ್ ಅಪರಾಧಿಗಳ ನ್ಯಾಯವಿಚಾರಣೆಯನ್ನು ಪರಿಷ್ಕು ಹಿಂದೀ ನ್ಯಾಯಾಧೀಶರು ಮಾಡಬಹುದು ಎಂಬ ಕಾಯದೆಯನ್ನು ಅಮಲಿನಲ್ಲಿ ತಂದನು. ಯುರೋಪಿಯನ್ ಅಪರಾಧಿಗಳಿಗೆ ಜೂರಿಯನ್ನು ಬೇಡಿಕೊಳ್ಳುವ ಅಧಿಕಾರವೂ ದೊರೆಯಿತು.

**ಪ್ರ. :— ಭಾರತ ರಾಷ್ಟ್ರಸಭೆ (ಇಂಡಿಯನ್ ನ್ಯಾಶನಲ್ ಕಾಂಗ್ರೆಸ್) ಈ ಸಂಸ್ಥೆಯನ್ನು ಸ್ಥಾಪಿಸಿದ ಮುಖಂಡರು ಯಾರು ಯಾರು? ಇದನ್ನು ಸ್ಥಾಪಿಸುವ ಉದ್ದೇಶವೇನು?**

**ಉ. :**— ದಾದಾಭಾಯಿ ನವರೋಜಿ, ಫಿರೋಜ ಶಹಾ ಮೆಥಾ, ನ್ಯಾ. ರಾನಡೆ, ಪಂಡಿತ ಮಾಲವೀಯ, ಸರ್ ಎ.ಓ. ಹ್ಯೂಮ, ಸರ್ ವೆಂಡರ್‌ಬರ್ನ ಈ ಮೊದಲಾದ ಮುಖಂಡರು ಕೂಡಿ ಭಾರತ ರಾಷ್ಟ್ರಸಭೆಯನ್ನು ಸ್ಥಾಪಿಸಿದರು. ಇದರ ಮೊದಲ ಅಧಿವೇಶನವು ಮುಂಬಯಿಯಲ್ಲಿ ಕ್ರಿ. ಶ. ೧೮೮೫ ರಲ್ಲಿ ಆಯಿತು. ಮತ್ತು ೨ ನೆಯ ೩ ನೆಯ ಅಧಿವೇಶನಗಳು ಅನುಕ್ರಮವಾಗಿ ಕ್ರಿ. ಶ. ೧೮೮೬ ಮತ್ತು ಕ್ರಿ. ಶ ೧೮೮೭ ರಲ್ಲಿ ಕಲಕತ್ತೆ ಮತ್ತು ಮದ್ರಾಸ ಪಟ್ಟಣಗಳಲ್ಲಾದವು. ಈ ಮೂರೂ ಅಧಿವೇಶನಗಳು ಲಾರ್ಡ ಡಫರೀನನ ಕಾಲದಲ್ಲಿಯೇ ಆದವು.

**ಉದ್ದೇಶ** — ಭಾರತೀಯರ ಆಶೆ ಆಕಾಂಕ್ಷೆಗಳನ್ನು ಸರಕಾರಕ್ಕೆ ತಿಳಿಸುವದು; ಭಾರತದ ರಾಜಕೀಯ, ಆರ್ಥಿಕ, ಸಾಮಾಜಿಕ ಉನ್ನತಿಯನ್ನು ಸಾಧಿಸುವದು.

**ಪ್ರ. :— ಲಾರ್ಡ ಕರ್ಝನನ ಆಳಿಕೆಯಿಂದ ಹಿಂದುಸ್ಥಾನದ ರಾಷ್ಟ್ರೀಯ ಚಳವಳಿಯು ಮತ್ತಷ್ಟು ಹೆಚ್ಚಾಯಿತು. ಎಂಬ ಹೇಳಿಕೆಗೆ ತಕ್ಕ ಐತಿಹಾಸಿಕ ಕಾರಣಗಳನ್ನು ಕೊಡಿರಿ.**

**ಉ. :**— ಲಾರ್ಡ ಕರ್ಝನನು ಕ್ರಿ. ಶ. ೧೮೯೮–೧೯೦೫ ರ ವರೆಗೆ ವ್ಹಾಯಿಸರಾಯನಾಗಿದ್ದನು. ಇದಕ್ಕೂ ಮೊದಲು ಅವನು ಭಾರತ ಮಂತ್ರಿಯ ಸಹಾಯಕನಾಗಿ ಕೆಲಸಮಾಡಿದ್ದರಿಂದಲೂ ಹಿಂದುಸ್ಥಾನಕ್ಕೆ ನಾಲ್ಕು ಸರತಿ ಬಂದು ಹೋದದರಿಂದಲೂ ಇಲ್ಲಿಯ ಪರಿಸ್ಥಿತಿಯನ್ನು ಚೆನ್ನಾಗಿ ಅರಿತವನಾಗಿದ್ದನು. ಅಲ್ಲದೆ ಹೆಸರಾದ ಮುತ್ಸದ್ದಿಯೂ ಸಾಮ್ರಾಜ್ಯದ ತೀವ್ರ ಅಭಿಮಾನಿಯೂ ದುರಾಗ್ರಹಿಯೂ ಆಗಿದ್ದನು.

ಹಿಂದುಸ್ಥಾನದಲ್ಲಿ ಇವನ ಕಾಲದಲ್ಲಿ ರಾಷ್ಟ್ರೀಯ ಆಂದೋಲನವು ಬಲಗೊಳ್ಳುತ್ತಲಿದ್ದಿತು ಹಿಂದೀಯರಲ್ಲಿ ಭೇದಬುದ್ಧಿಯನ್ನು ನೆಲೆಗೊಳಿಸಿ ಅದರ ಬಲದಿಂದ ರಾಜ್ಯವಾಳುವ ಹಿಡಿತವು ಚುರುಕು ಬುದ್ಧಿಯ ಪರಕೀಯರಲ್ಲಿ ಇರುವದು ಸಹಜ. ಕರ್ಝನನು ಪೂರ್ವ ಬಂಗಾಲದ ಕೆಲವು ಜಿಲ್ಹೆಗಳನ್ನು ಆಸಾಮಕ್ಕೆ ಕೂಡಿಸಿ ಆ ಭಾಗವನ್ನು ಪಶ್ಚಿಮ ಬಂಗಾಲದಿಂದ ಬೇರೆ ಮಾಡುವ ವಿಚಾರವನ್ನು ನಡೆಯಿಸಿದನು. ಪೂರ್ವಬಂಗಾಲ ಇಲಾಖೆಯ ೨ ಕೋಟಿ ಜನಸಂಖ್ಯೆಯಲ್ಲಿ ೧ ಕೋಟಿ ೮೦ ಲಕ್ಷ ಜನಸಂಖ್ಯೆಯು ಮುಸಲ್ಮಾನರದಾಗುತ್ತಿದ್ದಿತು. ಕರ್ಝನನ ಅಂತರಂಗವನ್ನು ಬಂಗಾಲಿಗಳು ತಿಳಿದು, ಪ್ರಚಂಡವಾದ

ಪ್ರತಿಕಾರವನ್ನು ನಡೆಯಿಸಿದರು, ಆದರೂ ಕರ್ಝನನು ಬಂಗಾಲದ ವಿಭಜನೆ ನಿಶ್ಚಿತವೆಂದು ಸಾರಿದನು ಬಂಗಾಲದ ಜೊತೆಗೆ ಪಂಜಾಬ, ಮುಂಬಯಿ, ಮದ್ರಾಸ ಮುಂತಾದ ಕಡೆಗಳಲ್ಲಿ ಬಂಗಾಲಿಗಳ ಚಳವಳಿಗೆ ಬೆಂಬಲ ದೊರೆಯ ಹತ್ತಿತು ಸ್ವದೇಶಿ, ಬಹಿಷ್ಕಾರ, ರಾಷ್ಟ್ರೀಯ ಶಿಕ್ಷಣ, ಸ್ವರಾಜ್ಯ ಈ ಸ್ವಾತಂತ್ರ್ಯದ ಮೆಟ್ಟಲುಗಳ ಅವಲಂಬನೆಯಿಂದ ಚಳವಳಿಯು ಉಗ್ರವಾಯಿತು. ಕೆಲವು ಕಡೆಗಳಲ್ಲಿ ಕೊಲೆಗಳೂ ಸಂಭವಿಸಿದವು. ಮುಂದಾಳುಗಳ ಮೇಲೆ ರಾಜದ್ರೋಹದ ಖಟ್ಲೆಗಳಾಗಹತ್ತಿದವು. ಆಪತ್ತಿಗೆ ಹೆದರಿ ಚಳವಳಿ ಹಿಮ್ಮೆಟ್ಟದೆ ಮುಂದಡಿ ಇಡಹತ್ತಿತು. ಕ್ರಿ. ಶ. ೧೯೧೧ ರಲ್ಲಿ ಬಂಗಾಲದ ವಿಭಜನೆಯು ರದ್ದಾಯಿತು. ಭಾರತೀಯರ ಪ್ರಯತ್ನಕ್ಕೆ ಫಲಸಿಕ್ಕಿತು. ಹೀಗಾಗಿ ಕರ್ಝನನ ಆಳಿಕೆಯು ರಾಷ್ಟ್ರೀಯ ಚಳವಳಿಯನ್ನು ಮುರಿಯುವ ಬದಲು ಅದನ್ನು ಹಬ್ಬಿಸಿತು.

**ಪ್ರ. :— ಮೋರ್ಲೆಮಿಂಟೊ ಸುಧಾರಣೆಗಳು, ೧ ನೆಯ ಮಹಾಯುದ್ಧ, ಮೌಂಟ-ಫರ್ಡ ಆಕ್ಟ, ರೌಲೆಟ್ ಆಕ್ಟ, ಜಾಲಿಯನವಾಲಾ ಬಾಗದ ಕೊಲೆ ಇವುಗಳ ಬಗೆಗೆ ಟಿಪ್ಪಣೆಗಳನ್ನು ಬರೆಯಿರಿ.**

**ಉ.** :— ಮೋರ್ಲೆ-ಮಿಂಟೋ ಸುಧಾರಣೆಗಳು— (ಕ್ರಿ. ಶ. ೧೯೦೯) ಈ ಕಾಲದಲ್ಲಿ ಭಾರತದ ಮಂತ್ರಿಯಾಗಿದ್ದ ಮೋರ್ಲೆ ಮತ್ತು ವ್ಹಾಯಿಸರಾಯನಾಗಿದ್ದ ಮಿಂಟೋ ಇವರು ಜನರ ಬೇಡಿಕೆಗಳನ್ನು ವಿಚಾರಿಸಿ, ರಾಜ್ಯ ಕಾರಭಾರದಲ್ಲಿ ಜನತೆಗೆ ಹೆಚ್ಚು ಅಧಿಕಾರಗಳು ಸಿಗುವಂತಹ ಕೆಲವು ಸೂಚನೆಗಳನ್ನು ಪಾರ್ಲಮೆಂಟಿನ ಮುಂದೆ ಇಟ್ಟರು— ಅದಕ್ಕನುಸಾರವಾಗಿ ಪಾರ್ಲಮೆಂಟಿನಲ್ಲಿ ಮೋರ್ಲೆ-ಮಿಂಟೋ ಸುಧಾರಣೆಗಳು ಎಂಬ ಕಾಯಿದೆಯು ಪಾಸಾಯಿತು. ಇದರಿಂದ (೧) ಭಾರತಮಂತ್ರಿ, ವ್ಹಾಯಿಸರಾಯ, ಗವ್ಹರ್ನರ ಇವರ ಕಾರ್ಯಕಾರೀ ಮಂಡಲಗಳಲ್ಲಿ ಹಿಂದೀಯರ ನೇಮಣೂಕಿಯಾಯಿತು. (೨) ವರಿಷ್ಠ ಮತ್ತು ಪ್ರಾಂತಿಕ ಕಾಯದೆ ಮಂಡಲಗಳ ಸದಸ್ಯರ ಸಂಖ್ಯೆಯು ಹೆಚ್ಚಾಯಿತು. (೩) ಪ್ರಾಂತಿಕ ಮಂಡಲಗಳಲ್ಲಿ ಸರಕಾರೇತರ ಸದಸ್ಯರ ಬಹುಮತವಾಯಿತು. (೪) ಅಲ್ಪಸಂಖ್ಯಾಕರಿಗಾಗಿ ಸ್ಥಳಗಳು ಕಾದಿಡಲ್ಪಟ್ಟವು. (೫) ಗೊತ್ತುವಳಿಗಳನ್ನು ಪಾಸುಮಾಡಿಕೊಳ್ಳುವ, ಅಂದಾಜ ಪತ್ರಿಕೆಯನ್ನು ಚರ್ಚಿಸುವ ಮುಂತಾದ ಅಧಿಕಾರಗಳು ಸದಸ್ಯರಿಗೆ ದೊರೆತವು.

**೧ ನೆಯ ಮಹಾಯುದ್ಧ**—(೧೯೧೪-೧೯೧೮)—ಕ್ರಿ. ಶ. ೧೯೧೪ ರ ಜೂನ ೨೮ ನೆಯ ದಿನ ಒಬ್ಬ ಸರ್ವಿಯನನಿಂದ ಶಿರಾಜಿವೊ ಎಂಬಲ್ಲಿ ಆಸ್ಟ್ರಿಯದ ಅರಸುಮಗನ ಕೊಲೆಯಾಯಿತು. ಈ ಕೊಲೆಯು ಸರ್ವಿಯದ ಸರಕಾರದ ಬೆಂಬಲದಿಂದಲೆ ಆಯಿತೆಂದು ತಿಳಿದು ಆಸ್ಟ್ರಿಯದವರು ಸರ್ವಿಯದ ಮೇಲೆ ಯುದ್ಧ ಸಾರಿದರು. ಜರ್ಮನಿ, ಬಲ್ಗೇರಿಯಾ, ತುರ್ಕಸ್ಥಾನಗಳು ಆಸ್ಟ್ರಿಯದ ಪಕ್ಷವನ್ನೂ ರಶಿಯಾ, ಇಂಗ್ಲಂಡ, ಫ್ರಾನ್ಸ, ಇತಲಿ, ಅಮೇರಿಕೆ ಇವು ಸರ್ವಿಯದ ಪಕ್ಷವನ್ನೂ ವಹಿಸಿದವು.

ಇಂಗ್ಲಂಡವು ಯುದ್ಧದಲ್ಲಿ ತೊಡಗಿದ್ದರಿಂದ ಅದರ ಕೈಯೊಳಗಿನ ಹಿಂದುಸ್ಥಾನವೂ ಅದರಿಗೆ ನೆರವಾಗಬೇಕಾಯಿತು. ಈ ದೇಶದಿಂದ ಲಕ್ಷ ಗಟ್ಟಲೆ ಹಣವೂ ಪೂರೈಸಲ್ಪಟ್ಟಿತು. ಫ್ರಾನ್ಸ, ಮೆಸೊಪೊಟೊಮಿಯಾ, ಪೂರ್ವ ಆಫ್ರಿಕಾ ಮುಂತಾದ ಕಡೆಗಳಲ್ಲಿ ಹಿಂದೀ ವೀರರು ಪರಾಕ್ರಮದಿಂದ ಕಾದಿ ಹೆಸರುಪಡೆದರು.

ಕ್ರಿ. ಶ. ೧೯೧೮ ರ ನವಂಬರ ೧೧ ನೆಯ ದಿನ ಈ ಮೊದಲನೆಯ ಮಹಾಯುದ್ಧವು ಮುಗಿಯಿತು. ಜರ್ಮನಿಯ ಪಕ್ಷವು ಸೋತಿತು. ವರ್ಸೆಲೀಸ ಎಂಬಲ್ಲಿ ಒಪ್ಪಂದವಾಯಿತು.

**ಮಾಂಟೆಫರ್ಡ ಆಕ್ಟ**— ಕ್ರಿ. ಶ. ೧೯೧೯— ಮಹಾಯುದ್ಧವು ಆರಂಭವಾದಂದಿನಿಂದ ಹಿಂದುಸ್ಥಾನದ ರಾಜಕೀಯ ಚಟುವಟಿಕೆಯು ಮತ್ತೆ ತಲೆಯೆತ್ತಿತು. ಸ್ವಯಂನಿರ್ಣಯದ ತತ್ತ್ವವು ಸರ್ವಸಮ್ಮತವಾದುದರಿಂದ ಇದೇ ದೃಷ್ಟಿಯಿಂದ ಹಿಂದೀಯರ ಬೇಡಿಕೆಗಳು ಬಲಗೊಳ್ಳಹತ್ತಿದವು. ಆಗ ಭಾರತ ಮಂತ್ರಿ ಮಾಂಟೆಗ್ಯೂವು "ಹಿಂದುಸ್ಥಾನದಲ್ಲಿ ಕ್ರಮಕ್ರಮವಾಗಿ ಹೊಣೆಗಾರಿಕೆಯುಳ್ಳ ಸ್ವರಾಜ್ಯವು ಸ್ಥಾಪಿಸಲ್ಪಡುವದು;" ಎಂದು ಸಾರಿದನು. ಮತ್ತು ಕ್ರಿ.ಶ. ೧೯೧೮ ರಲ್ಲಿ ಅವನು ಈ ದೇಶಕ್ಕೆ ಬಂದು ವ್ಹಾಯಿಸರಾಯನಾದ ಚೇಮ್ಸಫರ್ಡನೊಡನೆ ಮುಖ್ಯ ಮುಖ್ಯ ಭಾಗಗಳಲ್ಲಿ ಸಂಚರಿಸಿ ಪ್ರಮುಖರ ವಿಚಾರಗಳನ್ನು ಗ್ರಹಿಸಿದ ಬಳಿಕ ಇಬ್ಬರೂ ಕೂಡಿ ಮಾಂಟಫರ್ಡ ಆಕ್ಟ ಎಂಬ ಸುಧಾರಣಾ ಕಾಯ್ದೆಯನ್ನು ಪಾರ್ಲಮೆಂಟಿನಿಂದ ಪಾಸುಮಾಡಿಸಿಕೊಂಡರು. ಇದರಿಂದ (೧) ವ್ಹಾಯಸರಾಯನ (ವರಿಷ್ಠ) ಕಾರ್ಯಕಾರೀ ಮಂಡಲದ ಮೂರು ಸ್ಥಳಗಳು ಹಿಂದೀಸಭಾಸದರಿಗೆ ದೊರೆತವು. (೨) ವ್ಹಾಯಿಸರಾಯನ ನೆರವಿಗೆ ಲೋಕಪ್ರತಿನಿಧಿಗಳ ಬಹುಮತವಿರುವ ವರಿಷ್ಠ ಕಾಯದೆ ಮಂಡಲ

(ಲೆಜಿಸ್ಲೇಟಿವ್ಹ ಅಸೆಂಬ್ಲಿ) ಮತ್ತು ಕೌನ್ಸಿಲ ಆಫ್ ಸ್ಟೇಟ ಎಂಬ ಎರಡು ಸಭೆಗಳು ಉಂಟಾದವು. (೩) ಪರರಾಷ್ಟ್ರಗಳ ಮತ್ತು ಸಂಸ್ಥಾನಿಕರ ಸಂಬಂಧವ್ಯವಹಾರ, ಸೈನ್ಯ ಮತ್ತು ಹಡಗುಪಡೆ, ರೇಲ್ವೆ, ಪೋಸ್ಟ ಮತ್ತು ತಂತಿ, ಅಫು, ಕರ, ಟಂಕಸಾಲೆ, ಸಾಲ ಈ ಖಾತೆಗಳು ವರಿಷ್ಠ ಸರಕಾರದ ಕಡೆಗೂ ಉಳಿದ ಖಾತೆಗಳು ಪ್ರಾಂತಿಕ ಸರಕಾರದ ಕಡೆಗೂ ಕೊಡಲ್ಪಟ್ಟವು. (೪) ಅಪ್ರತ್ಯಕ್ಷ ಆರಿಸುವಿಕೆಯು ನಿಂತುಹೋಗಿ, ಮತದಾರರು ಉಮೇದವಾರರಿಗೆ ಪ್ರತ್ಯಕ್ಷ ಮತಕೊಡುವ ಪದ್ಧತಿಯು ಆರಂಭಿಸಲ್ಪಟ್ಟಿತು.

ಹೀಗೆ ಜನತೆಗೆ ಹೆಚ್ಚಿನ ಹಕ್ಕುಗಳು ಕೊಡಲ್ಪಟ್ಟರೂ ಪ್ರಸಂಗದಲ್ಲಿ ವ್ಹಾಯಿಸರಾಯ ಮತ್ತು ಗವ್ಹರ್ನರ ಇವರಿಗೆ, ಪಾಸಾದ ಕಾಯಿದೆಗಳನ್ನು ಬದಿಗಿರಿಸುವ ಮತ್ತು ಬೇಕಾದ ಕಾಯದೆ (ಆರ್ಡಿನನ್ಸು) ಗಳನ್ನು ಅಮಲಿನಲ್ಲಿ ತರುವ ವಿಶೇಷ ಅಧಿಕಾರಗಳು ದೊರೆತವು!

**ರೌಲೆಟ್ ಆಕ್ಟ**— ಕ್ರಿ. ಶ. ೧೯೧೯ ಈ ದೇಶದಲ್ಲಿ ಹಲವರು ಬ್ರಿಟಿಷರ ವಿರುದ್ಧವಾಗಿ ಜರ್ಮನರೊಡನೆ ಒಳಸಂಚು ನಡೆಸಿದ್ದರೆಂದು ಸಂಶಯಗೊಂಡು ಸರಕಾರದವರು ಆ ಪರಿಸ್ಥಿತಿಯ ವಿಚಾರಣೆಗಾಗಿ ರೌಲೆಟ್ ಎಂಬ ನ್ಯಾಯಾಧೀಶನ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ನಿಯಮಿಸಿದ್ದರು. ಈ ಸಮಿತಿಗೆ ರೌಲೆಟ್ ಸಮಿತಿ ಎಂಬ ಹೆಸರು. ಈ ಸಮಿತಿಯ ಸಲಹೆಯ ಮೇರೆಗೆ ರೌಲೆಟ್ ಆಕ್ಟ ಎಂಬ ಕಾಯದೆ ಪಾಸಾಯಿತು. ಇದರಿಂದ ಇಂಥ ಕ್ರಾಂತಿಕಾರರನ್ನು ಉಗ್ರವಾಗಿ ಶಿಕ್ಷಿಸುವ ಅಧಿಕಾರವು ವರಿಷ್ಠ ಅಧಿಕಾರಿಗಳಿಗೆ ಉಂಟಾಯಿತು.

**ಜಾಲಿಯನವಾಲಾಬಾಗದ ಕೊಲೆ** — ಈ ಕಾಯದೆಯ ವಿರುದ್ಧವಾಗಿ ದೇಶದಲ್ಲಿ ತೀವ್ರ ಅಸಂತೋಷವು ಹರಡಿತು. ಈ ಬಗೆಗೆ ಲೋಕಮತವನ್ನು ವ್ಯಕ್ತಪಡಿಸುವದಕ್ಕಾಗಿ ಅಮೃತಸರ ಜಾಲಿಯನವಾಲಾ ಬಾಗದಲ್ಲಿ ದೊಡ್ಡ ಸಭೆ ಸೇರಿತು. ಜನರಲ್ ಡಾಯರನೆಂಬ ಸೈನ್ಯಾಧಿಕಾರಿಯು ನೂರು ಜನ ಸೈನಿಕರೊಂದಿಗೆ ಸಭೆಯ ಸ್ಥಳಕ್ಕೆ ಬಂದು ಪೂರ್ವ ಸೂಚನೆ ಕೊಡದೆ ಗುಂಡಿನ ಸುರಿಮಳೆ ಮಾಡಿಸಿದನು. ಐದು ಜನರು ಸತ್ತು ನೂರಾರು ಜನರು ಗಾಯಗೊಂಡರು. ಆಗ ಮಹಾತ್ಮಾಜಿಯವರು ಸತ್ಯಾಗ್ರಹವನ್ನು ನಿಲ್ಲಿಸಿದರು. ಇಂಥ ಅಸುರೀಕೃತ್ಯಗಳನ್ನು ತಡೆಯುವ ಉಪಾಯಗಳನ್ನು ವಿಚಾರವಂತರಾದ ಭಾರತೀಯರು ಚಿಂತಿಸಹತ್ತಿದರು.

**ಪ್ರ :— ಲಾರ್ಡ ರೀಡಿಂಗ್ ಮತ್ತು ಲಾರ್ಡ ಆಯರ್ವಿನ್ ಇವರ ಆಳಿಕೆಯಲ್ಲಿ ಸಂಭವಿಸಿದ ಮಹತ್ವದ ಸಂಗತಿಗಳ ಬಗೆಗೆ ಟಿಪ್ಪಣಿಗಳನ್ನು ಬರೆಯಿರಿ.**

**ಉ :— ಲಾರ್ಡ ರೀಡಿಂಗ** (ಕ್ರಿ. ಶ. ೧೯೨೧-೧೯೨೬) ಇವನು ಇಂಗ್ಲಂಡದ ಸುಪ್ರಸಿದ್ಧ ನ್ಯಾಯಾಧೀಶನೆಂದು ಹೆಸರು ಪಡೆದಿದ್ದನು. ಆಗಿನ ಹೊಸ ಸುಧಾರಣೆಗಳು ಅದೇ ಬಳಕೆಯಲ್ಲಿ ಬಂದಿದ್ದವು. ರಾಷ್ಟ್ರೀಯ ಮಹಾಸಭೆಯವರು ಈ ಸುಧಾರಣೆಗಳು ಅಸಮಾಧಾನಕರವೆಂದು ಸಾರಿದ್ದರು. ಇವನ ಆಳಿಕೆಯಲ್ಲಿ ಸಂಭವಿಸಿದ ಸಂಗತಿಗಳು: ೧. ಹೊಸ ಕೌನ್ಸಿಲುಗಳ ಆರಂಭ– ಮೌಂಟ ಫರ್ಡ ಸುಧಾರಣೆಗಳಿಂದುಂಟಾದ ಹೊಸಕೌನ್ಸಿಲುಗಳನ್ನು ತೆರೆಯುವ ಸಮಾರಂಭವು ಡ್ಯೂಕ ಆಫ್ ಕನಾಟ್ ಅವರಿಂದ ಆಯಿತು. ೨. ಪ್ರಿನ್ಸ್ ಆಫ್ ವೇಲ್ಸರ ಆಗಮನ– ಕ್ರಿ. ಶ. ೧೯೨೧ರ ಕೊನೆಗೆ ಎಡ್ವರ್ಡ ಆಲ್ಬರ್ಟರವರು ಈ ದೇಶಕ್ಕೆ ಬಂದು ದೊಡ್ಡ ದೊಡ್ಡ ಪಟ್ಟಣಗಳನ್ನು ಸಂದರ್ಶಿಸಿದರು. ಪುಣೆಯಲ್ಲಿ ಶಿವಾಜಿ ಸ್ಮಾರಕ ಸಮಾರಂಭವು ಇವರ ಕೈಯಿಂದ ನೆರವೇರಿತು. ೩. ಸಾಮ್ರಾಜ್ಯ ಪರಿಷತ್ತು– ಬ್ರಿಟಿಷ ಸಾಮ್ರಾಜ್ಯದ ವಸಾಹತುಗಳಲ್ಲಿ ಹಿಂದೀಯರನ್ನು ಪಕ್ಷಪಾತ ಬುದ್ಧಿಯಿಂದ ನಡೆಯಿಸಿಕೊಳ್ಳುವಂಥ ಕಾಯದೆಗಳಾಗಿದ್ದವು. ಇವುಗಳ ವಿರುದ್ಧವಾಗಿ ಈ ಪರಿಷತ್ತಿನಲ್ಲಿ ತೀವ್ರ ಚರ್ಚೆಯಾಗಿ ಹಿಂದೀಯರಿಗೆ ಸಮಾನತೆಯ ಹಕ್ಕುಗಳಿರಬೇಕೆಂಬ ಗೊತ್ತಾಯಿತು. ೪. ಮೊಪಲಾ ಜನರ ದಂಗೆ– ಮಲಬಾರದ ಮೊಪಲಾ ಎಂಬ ಮುಸಲ್ಮಾನರು ಧರ್ಮಾಂಧರಾಗಿ, ಅಲ್ಲಿಯ ಹಿಂದುಗಳನ್ನು ಬಲಾತ್ಕಾರದಿಂದ ಕುಲಗೆಡಿಸುತ್ತ ಕೊಳ್ಳೆ ಕೊಲೆ ಸುಲಿಗೆಗಳನ್ನು ಮಾಡುತ್ತ ಹಾಹಾಕಾರವನ್ನುಂಟುಮಾಡಿದರು. ಸರಕಾರದವರು ಸೈನ್ಯದ ಬಲದಿಂದ ಶಾಂತತೆಯನ್ನು ಸ್ಥಾಪಿಸಿದರು. ೫. ಅಸಹಕಾರದ ಆಂದೋಲನ– ರೀಡಿಂಗನ ಆಳಿಕೆಯ ಮಧ್ಯದವರೆಗೆ ಈ ಅಸಹಕಾರದ ಆಂದೋಲನವು ಭರದಿಂದ ನಡೆಯಿತು. ಹೊಸ ಕೌನ್ಸಿಲುಗಳೊಡನೆ ರಾಷ್ಟ್ರಮಹಾಸಭೆಯವರು ತಮ್ಮ ಸಂಬಂಧವನ್ನಿಡಲಿಲ್ಲ. ಅವರು ಶಾಲೆ, ಕಾಲೇಜು, ಪದವಿ ಇವುಗಳನ್ನು ತ್ಯಜಿಸಹಚ್ಚಿ ಖಾದಿ ಪ್ರಸಾರ, ರಾಷ್ಟ್ರೀಯ ಶಿಕ್ಷಣ, ಅಸ್ಪೃಶ್ಯತಾ ನಿವಾರಣೆ ಈ ವಿಧಾಯಕ ಕಾರ್ಯಗಳನ್ನೂ ಕೈಕೊಂಡರು. ಈ ಚಟುವಟಿಕೆಗಳನ್ನು ಹತ್ತಿಕ್ಕಲು ಸರಕಾರವು ಉಗ್ರಉಪಾಯಗಳನ್ನು ಅವಲಂಬಿಸಿತು. ಕ್ರಿ. ಶ. ೧೯೨೩ ರಲ್ಲಿ ತುರ್ಕಸ್ಥಾನದಲ್ಲಿ ರಾಜ್ಯಕ್ರಾಂತಿಯಾಗಿ ಪ್ರಜಾಸತ್ತಾತ್ಮಕ ರಾಜ್ಯದ ಸ್ಥಾಪನೆ

ಯಾಯಿತು. ಅದರ ಪರಿಣಾಮವಾಗಿ ಭಾರತದಲ್ಲಿ ನಡೆದಿದ್ದ ಖಿಲಾಫತ ಚಟು ವಟಿಕೆಯು ನಿಂತುಹೋಯಿತು. ಅಸಹಕಾರದ ಕಸುವು ಕಡಿಮೆಯಾಯಿತು.

೬. ಉಳಿದ ಕೆಲಸಗಳು –ಕ್ರಿ. ಶ. ೧೯೨೫ರಲ್ಲಿ ನಿಜಾಮನು ವರ್‍ಹಾಡ ಪ್ರಾಂತವು ತನಗೆ ಮರಳಿ ದೊರೆಯಬೇಕೆಂದು ಕೇಳಿಕೊಂಡನು. ಆಗ ರೀಡಿಂಗನು ಅದು ಮರಳಿ ದೊರೆಯಲಾರದೆಂದು ತಿಳಿಸಿದನು. ವೆಚ್ಚದಲ್ಲಿ ಕಡಿತವನ್ನು ಸೂಚಿಸುವ ಇಂಚ್‍ಕೆಪ್‍ಕಮಿಟಿಯ ಅಭಿಪ್ರಾಯದಂತೆ ಬೇರೆ ಬೇರೆ ಖಾತೆಗಳ ವೆಚ್ಚವು ಕಡಿಮೆ ಮಾಡಲ್ಪಟ್ಟಿತು. ಸ್ಯಾಂಡಹರ್‍ಸ್ಟದ ಮಿಲಿಟರಿ ಕಾಲೇಜಿಗೆ ಹಿಂದೀಯ ರನ್ನು ಕಳುಹಿಸಲು ಆರಂಭವಾಯಿತು. ಮಡಿಮನ್ ಕಮಿಟಿಯು, ಮಾಂಟೆಗ್ಯೂ ಚೆಮ್ಸಫರ್ಡ ಸುಧಾರಣೆಯ ಬಗೆಗೆ ಚರ್ಚೆಮಾಡಿ ತನ್ನ ಅಭಿಪ್ರಾಯವನ್ನು ಸಿದ್ಧಪಡಿಸಿತು. ಬಳಿಕ ರೀಡಿಂಗನು ಇಂಗ್ಲಂಡಕ್ಕೆ ಹೋಗಿ, ಭಾರತ ಮಂತ್ರಿ ಯೊಡನೆ ವಿಚಾರವಿನಿಮಯ ಮಾಡಿ ಮರಳಿ ಬಂದು "ಎಲ್ಲ ಪಕ್ಷದವರು ಕೂಡಿ ಒಮ್ಮತದ ಬೇಡಿಕೆಯನ್ನು ಸಿದ್ಧಪಡಿಸಿದರೆ ಅದನ್ನು ವಿಚಾರಿಸುವೆವು;" ಎಂದು ಪ್ರಸಿದ್ಧಿಸಿದನು. ಇಷ್ಟಕ್ಕೆ, ಅವಧಿ ಮುಗಿದದರಿಂದ ರೀಡಿಂಗನು ಹೋಗಿ ಲಾರ್ಡ ಆಯರ್ವಿನ್ನನು ವ್ಹಾಯಿಸರಾಯನಾದನು.

**ಲಾರ್ಡ ಆಯರ್ವಿನ್** (ಕ್ರಿ. ಶ. ೧೯೨೬–೩೧) :—ಇವನು ಒಕ್ಕಲು ತನದ ಸುಧಾರಣೆಗೆ ಹೆಚ್ಚು ಮನಸ್ಸುಹಾಕಿದನು. ಕ್ರಿ ಶ. ೧೯೨೬ರಲ್ಲಿ ಪುಣೆಯಲ್ಲಿ ಒಕ್ಕಲುತನದ ದೊಡ್ಡ ಪ್ರದರ್ಶನವಾಯಿತು. ಇದೇ ವರ್ಷ ಅಲ್ಲಲ್ಲಿ ಹಿಂದು ಮುಸಲ್ಮಾನರಲ್ಲಿ ದಂಗೆಗಳಾದವು. ಹಿಂದುಸಂಘಟನೆಯ ಮುಂದಾಳುಗಳಾದ ಸ್ವಾಮಿ ಶ್ರದ್ಧಾನಂದಜಿಯವರ ಕೊಲೆಯಾಯಿತು. ಸುಧಾರಣಾಕಾಯದೆಯ ವಿಚಾರಕ್ಕಾಗಿ ಪಾರ್ಲಿಮೆಂಟಿನಿಂದ ಸಾಯಮನ್ ಕಮಿಶನ್ನು ನಿಯಮಿಸಲ್ಪ ಟ್ಟಿತು. ಈ ಕಮಿಶನಿನಲ್ಲಿ ಹಿಂದೀಯರ ಸೇರ್ಪಡೆಯಾಗಿರಲಿಲ್ಲ. ಇದರಿಂದ ಹಲವರು ಮುಂದಾಳುಗಳು ಇದರೊಡನೆ ಸಂಬಂಧವನ್ನಿಡಲಿಲ್ಲ. ಕಮಿಶನಿನ ವರು ಎರಡು ಸರತಿ ಹಿಂದುಸ್ಥಾನಕ್ಕೆ ಬಂದುಹೋದ ಬಳಿಕ ತಮ್ಮ ವರದಿ ಯನ್ನು ಪ್ರಸಿದ್ಧಿಸಿದರು. **ನೆಹರು ರಿಪೋರ್ಟ** (ಕ್ರಿ. ಶ. ೧೯೨೮) :— ಸಾಯ ಮನ್ ಕಮಿಶನಿನಲ್ಲಿ ಹಿಂದೀಯರನ್ನು ತೆಗೆದುಕೊಳ್ಳಬೇಕು, ಎಂಬ ಬೇಡಿಕೆ ಯನ್ನು ಪಾರ್ಲಿಮೆಂಟಿನವರು ಮನ್ನಿಸಲಿಲ್ಲ. ಆಗ ಎಲ್ಲ ಪಕ್ಷಗಳ ಮುಂದಾಳು ಗಳು ಒಂದಾಗಿ ಲಖನೌದಲ್ಲಿ ಕೂಡಿ ಒಮ್ಮತದ ಬೇಡಿಕೆಯನ್ನು ನಜ್ಜುಗೊಳಿಸು ವದಕ್ಕಾಗಿ ಪಂ. ಮೋತೀಲಾಲ ನೆಹರು ಅವರು ಅಧ್ಯಕ್ಷರಾಗಿರುವ ಒಂದು

ಕಮಿಟಿಯನ್ನು ನಿಯಮಿಸಿದರು. ಈ ಕಮಿಟಿಯವರು ವಸಾಹತುಗಳಲ್ಲಿರು ವಂತಹ ಸ್ವರಾಜ್ಯ ಯೋಜನೆಯನ್ನು ಸಿದ್ಧಪಡಿಸಿದರು. ಇದೇ ಸುಪ್ರಸಿದ್ಧವಾದ ನೆಹರು ರಿಪೋರ್ಟು. **೧ನೆಯ ರಾವುಂಡ್ ಟೇಬಲ್ ಕಾನ್ಫರನ್ಸ** (ಕ್ರಿ. ಶ. ೧೯೩೦) :– ಸಾಯಮನ್ ಕಮಿಶನಿನ ವರದಿಯ ವಿಚಾರಣೆಗಾಗಿ ಈ ರಾವುಂಡ ಟೇಬಲ್ ಕಾನ್ಫರನ್ಸ ಅಥವಾ ದುಂಡುಮೇಜಿನ ಪರಿಷತ್ತು ಲಂಡನದಲ್ಲಿ ಕೂಡಿತು. ಇದರೊಡನೆ ರಾಷ್ಟ್ರಸಭೆಯವರು ಸಹಕರಿಸಲಿಲ್ಲ. ಅವರು ಪಂ. ಜವಾಹರಲಾಲರ ಅಧ್ಯಕ್ಷತೆಯಲ್ಲಿ ಪೂರ್ಣಸ್ವಾತಂತ್ರ್ಯವೇ ಕಾಂಗ್ರೆಸಿನ ಗುರಿ ಎಂದು ಸಾರಿದರು; ಮತ್ತು ಮಹಾತ್ಮಾ ಗಾಂಧಿಯವರ ನೇತೃತ್ವದಲ್ಲಿ ಕಾಯದೆ ಭಂಗದ ಚಳವಳಿಯನ್ನು ಆರಂಭಿಸಿದರು. ಸರಕಾರದವರು ಆರ್ಡಿನನ್ಸ (ಒಟ್ಟಿ ಹುಕುಮು) ಗಳನ್ನು ತೆಗೆದು ದಬ್ಬಾಳಿಕೆಯನ್ನು ನಡೆಸಿದರು. ಸಾವಿರಗಟ್ಟಲೆ ಜನರು ಸೆರೆಮನೆ ಸೇರಿದರು. **೨ ನೆಯ ರಾವುಂಡ್ ಟೆಬಲ್ ಕಾನ್ಫರನ್ಸ** (ಕ್ರಿ. ಶ. ೧೯೩೧):–ದಬ್ಬಾಳಿಕೆಯಿಂದ ಚಳವಳಿ ನಿಲ್ಲದೆಂದು ತಿಳಿದು ಸರಕಾರವು ಮ. ಗಾಂಧಿ ಮೊದಲಾದವರನ್ನು ಬಿಡುಗಡೆ ಮಾಡಿತು. ಮುಂದೆ ಗಾಂಧಿ ಆಯರ್ವಿನರಲ್ಲಿ ಕರಾರುಗಳಾದವು. ಆಗ ದೇಶದಲ್ಲಿ ಶಾಂತತೆಯ ವಾತಾ ವರಣವು ಉಂಟಾಯಿತು. ರಾಜ್ಯಘಟನೆಯ ಚರ್ಚೆಗಾಗಿ ಈ ೨ನೆಯ ರಾ. ಟೇ. ಕಾನ್ಫರನ್ಸು ನೆರೆಯುವದು ಗೊತ್ತಾಯಿತು. ಇದೇ ವರ್ಷ ಆಯರ್ವಿನನ ಆಳಿಕೆ ಮುಗಿಯಿತು.

**ಪ್ರ:—ಲಾರ್ಡ ವಿಲಿಂಗಡನ್ ಮತ್ತು ಲಾರ್ಡ ಲಿನಲಿಥ್‌ಗೋ ಇವರ ಆಳಿಕೆ ಯಲ್ಲಿ ವರ್ತಿಸಿದ ಮಹತ್ವದ ಸಂಗತಿಗಳ ಟಿಪ್ಪಣಿ ಬರೆಯಿರಿ.**

**ಉ:- ಲಾರ್ಡ ವಿಲಿಂಗ್ಡನ್** (ಕ್ರಿ. ಶ. ೧೯೩೧–೩೬)– ಇವನು ಕ್ರಿ. ಶ. ೧೯೧೪ ರಿಂದ ೧೯೧೮ ರ ವರೆಗೆ ಮುಂಬಯಿ ಇಲಾಖೆಯ ಗವ್ಹರ್ನರನಿದ್ದನು. ಆದದರಿಂದ ಈ ದೇಶದ ಪರಿಸ್ಥಿತಿಯನ್ನು ತಿಳಿದವನಾಗಿದ್ದನು. ಅಲ್ಲದೆ ಇವನು ವಸಾಹತಿಯ ಸ್ವರಾಜ್ಯವು ಹಿಂದುಸ್ಥಾನದಲ್ಲಿ ಸ್ಥಾಪಿಸಲ್ಪಡಬೇಕೆಂಬ ಅಭಿ ಪ್ರಾಯದವನಾಗಿದ್ದನು. ಕ್ರಿ. ಶ. ೧೯೩೧ ರ ಸುಮಾರಕ್ಕೆ ೨ನೆಯ ರಾವುಂಡ್ ಟೇಬಲ್ ಕಾನ್ಫರನ್ಸು ಪ್ರಾರಂಭವಾಯಿತು. ಮಹಾತ್ಮಾ ಗಾಂಧಿಯವರು ಈ ಕಾನ್ಫರನ್ಸಿನ ಕೆಲಸದಲ್ಲಿ ಮನಃಪೂರ್ವಕವಾದ ಸಹಕಾರವನ್ನು ನೀಡಿದರು. ಅದ ರಲ್ಲಿ ರಾಜ್ಯಘಟನೆಯ ಬಹುತರ ಎಲ್ಲ ಅಂಗಗಳ ಸಾಮಾನ್ಯ ಸ್ವರೂಪವು ನಿರ್ಣಯಿಸಲ್ಪಟ್ಟಿತು. ಜಾತೀಯ ಹಕ್ಕುಗಳ ವಿಷಯವು ಮಾತ್ರ ಹಾಗೆಯೆ

ಉಳಿಯಿತು. ಇದನ್ನು ಮುಖ್ಯಮಂತ್ರಿಗಳು ತಮ್ಮ ಕಡೆಗೆ ಇಟ್ಟುಕೊಂಡರು. ಕಾನ್ಫರನ್ಸು ಮುಗಿಯಿತು.

ಇತ್ತ ಹಿಂದುಸ್ಥಾನದಲ್ಲಿ ವಿಲಿಂಗ್ಡನನ ಆಳಿಕೆಯಲ್ಲಿಯೂ ಕೆಲವು ಆರ್ಡಿನನ್ಸುಗಳು ಹೊರಟವು. ಸಾವಿರಾರು ಜನರು ಮತ್ತೆ ಸೆರೆಮನೆಯನ್ನು ಸೇರಿದರು. ಮುಂದೆ ಕ್ರಿ. ಶ. ೧೯೩೨ ರಲ್ಲಿ ಮುಖ್ಯಮಂತ್ರಿಗಳು ಜಾತಿನಿರ್ಣಯವನ್ನು ಪ್ರಸಿದ್ಧಿಸಿದರು. ಅದರಲ್ಲಿ ಅಸ್ಪೃಶ್ಯರಿಗಾಗಿ ಸ್ವತಂತ್ರಮತದಾರ ಸಂಘವಿರಬೇಕೆಂದು ಸೂಚಿಸಿದ್ದರು. ಇದರಿಂದ ಮ. ಗಾಂಧಿಯವರಿಗೆ ಬಹಳ ವ್ಯಸನವಾಯಿತು. ಅವರು ಡಾ. ಅಂಬೇಡಕರರ ಒಪ್ಪಿಗೆಯೊಂದಿಗೆ ಹಿಂದುಮಾತ್ರರಿಗೆಲ್ಲ ಒಂದೇ ಮತದಾರ ಸಂಘವಿರಬೇಕೆಂದು ತಿಳುಹಿಸಿದರು. ಅದರಿಂದ ಜಾತಿನಿರ್ಣಯದಲ್ಲಿ ತಕ್ಕ ಬದಲಾವಣೆಗಳುಂಟಾದವು. **೩ನೆಯ ರಾವುಂಡ್ ಟೇಬಲ್ ಕಾನ್ಫರನ್ಸು.** ಕ್ರಿ. ಶ. ೧೯೩೨ :—ಈ ಕಾನ್ಫರನ್ಸಿನಲ್ಲಿ ರಾಜ್ಯಘಟನೆಯ ಕೆಲಸವು ಪೂರ್ಣವಾಯಿತು. ಕ್ರಿ. ಶ. ೧೯೩೩ರ ಮಾರ್ಚದಲ್ಲಿ ಬ್ರಿಟಿಶ ಸರಕಾರದವರಿಂದ ರಾಜ್ಯಘಟನೆಯ ಸಂಬಂಧದ ಶುಭ್ರಪತ್ರಿಕೆ (ವ್ಹಾಯಿಟ್ ಪೇಪರು) ಪ್ರಸಿದ್ಧವಾಯಿತು. ಬಳಿಕ ಜಾಯಿಂಟ ಸಿಲೆಕ್ಟ ಕಮಿಟಿಯು ಒಂದುವರೆ ವರ್ಷಗಳ ವರೆಗೆ ವಿಚಾರಣೆ ನಡೆಯಿಸಿ ಕ್ರಿ. ಶ. ೧೯೩೪ರಲ್ಲಿ ತನ್ನ ವರದಿಯನ್ನು ಒಪ್ಪಿಸಿತು. ಈ ವರದಿಯನ್ವಯ ಕ್ರಿ. ಶ. ೧೯೩೫ ರ ಹಿಂದುಸ್ಥಾನದ ಕಾಯದೆಯು ಪಾರ್ಲಿಮೆಂಟಿನಲ್ಲಿ ಪಾಸಾಯಿತು. ಮುಂದೆ ಈ ಕಾಯದೆಯಂತೆ ಕ್ರಿ. ಶ. ೧೯೩೭ ರ ಎಪ್ರಿಲ್ ೧ ನೆಯ ದಿನಾಂಕದಿಂದ ರಾಜ್ಯಕಾರಭಾರವು ಸಾಗಹತ್ತಿತು.

ಬಿಹಾರ ಪ್ರಾಂತದಲ್ಲಿ ಮತ್ತು ಕ್ವೇಟಾಪಟ್ಟಣದಲ್ಲಿ ತೀವ್ರ ಸ್ವರೂಪದ ಭೂಕಂಪವಾಗಿ ಜನರ ಜೀವಿತ-ವಿತ್ತಗಳ ಅಪಾರ ಹಾನಿಯು ಸಂಭವಿಸಿತು. ಈ ಪ್ರಸಂಗದಲ್ಲಿ ಸರಕಾರವೂ ರಾಷ್ಟ್ರಸಭೆಯವರೂ ಪರಿಶ್ರಮವಹಿಸಿ ಕಷ್ಟಕ್ಕೀಡಾದ ಜನರಿಗೆ ಸಹಾಯವನ್ನು ಸಲ್ಲಿಸಿದರು. ಕ್ರಿ. ಶ. ೧೯೩೬ರಲ್ಲಿ ವಿಲಿಂಗ್ಡನನು ಹೋಗಿ ಲಾರ್ಡ ಲಿನ್‌ಲಿಥ್‌ಗೋ ಇವನು ವ್ಹಾಯಿಸರಾಯನಾದನು.

**ಲಾರ್ಡ ಲಿನ್‌ಲಿಥ್‌ಗೋ** (ಕ್ರಿ. ಶ. ೧೯೩೬—೪೩) :— ಇವನು ಈ ಮೊದಲು ಒಕ್ಕಲುತನದ ಸಮಿತಿಯ ಅಧ್ಯಕ್ಷನಾಗಿ ಈ ದೇಶಕ್ಕೆ ಬಂದು ಹೋಗಿದ್ದದರಿಂದ ಇಲ್ಲಿಯ ಪರಿಸ್ಥಿತಿಯನ್ನು ತಿಳಿದವನಾಗಿದ್ದನು. ಕ್ರಿ. ಶ. ೧೯೩೭ ರ ಫೆಬ್ರುವರಿ ತಿಂಗಳಲ್ಲಿ ಚುನಾವಣೆಯಾಯಿತು. ಎಂಟು ಪ್ರಾಂತಗಳಲ್ಲಿ

ಕಾಂಗ್ರೆಸಿಗೆ ಬಹುಮತವು ದೊರೆತು ಅವುಗಳಲ್ಲಿ ಕಾಂಗ್ರೆಸಮಂತ್ರಿಮಂಡಲಗಳು ರಚಿತವಾದವು. ಕಾಂಗ್ರೆಸಮಂತ್ರಿಮಂಡಲಗಳ ಕಾರಭಾರವು ಕ್ರಿ. ಶ. ೧೯೩೭ ರಿಂದ ೩೯ ರ ವರೆಗೆ ಸಾಗಿತು.

**೨ನೆಯ ಮಹಾಯುದ್ಧ** (ಕ್ರಿ. ಶ. ೧೯೩೯–೧೯೪೫) ಕ್ರಿ. ಶ. ೧೯೩೭ ರಲ್ಲಿ ರಚಿಸಲ್ಪಟ್ಟ ಮಂತ್ರಿಮಂಡಲಗಳು ಎಂಟು ಪ್ರಾಂತಗಳಲ್ಲಿ ತಮ್ಮ ಕಾರ ಭಾರವನ್ನು ಸಾಗಿಸುತ್ತ ಸಾಧ್ಯವಾದ ಹಲವು ಸುಧಾರಣೆಗಳನ್ನು ಮಾಡತೊಡಗಿದ್ದವು. ಅಷ್ಟರಲ್ಲಿ ಕ್ರಿ ಶ. ೧೯೩೯ರ ಸಪ್ಟಂಬರ ೧ ನೆಯ ದಿನಾಂಕಕ್ಕೆ ೨ ನೆಯ ಜಾಗತಿಕ ಮಹಾಯುದ್ಧವು ಆರಂಭವಾಯಿತು. ಜರ್ಮನಿಯು ಪೋಲಂಡದ ಮೇಲೆ ದಾಳಿಮಾಡಿ ಈ ಯುದ್ಧವನ್ನು ಹೂಡಿತು. ಕ್ರಿ. ಶ. ೧೯೪೦ ರ ಜೂನ ತಿಂಗಳ ಕೊನೆಯ ವರೆಗೆ ಪೋಲಂಡ, ಡೆನ್ಮಾರ್ಕ, ನಾರ್ವೆ, ಲಕ್ಸೆಂಬರ್ಗ, ಹಾಲಂಡ, ಬೆಲ್ಜಮ್, ಫ್ರಾನ್ಸ ಇವು ಜರ್ಮನಿಯ ಕೈಸೇರಿದವು. ರಶಿಯವು ಸಮಯಸಾಧಿಸಿ ಲುಥಿಯಾನಿಯಾ, ಲಟೇವ್ಹಿಯಾ, ಇಸ್ಥೋನಿಯಾ, ಫಿನ ಲಂಡ ಈ ದೇಶಗಳ ಮೇಲೆ ತನ್ನ ಅಧಿಕಾರವನ್ನು ಸ್ಥಾಪಿಸಿತು. ಇಟಲಿಯು ಜರ್ಮನಿಯ ಪಕ್ಷವಹಿಸಿ ಯುದ್ಧದಲ್ಲಿ ಸೇರಿತು. ಕ್ರಿ ಶ. ೧೯೪೧ ರ ಕೊನೆಯ ವರೆಗೆ ಜರ್ಮನಿಯು ಆಗ್ನೇಯದ ಎಲ್ಲ ಬಾಲ್ಕನ್ ರಾಷ್ಟ್ರಗಳನ್ನು ಆಕ್ರಮಿಸಿತು. ಮತ್ತು ಉತ್ತರ ಆಫ್ರಿಕದ ಲಿಬಿಯದ ಮೇಲೆಯೂ ತನ್ನ ಪ್ರಭಾವವನ್ನು ಬೀರಿತು. ಇಂಗ್ಲಂಡವು ಜರ್ಮನಿಯ ಬಾಂಬುಗಳ ದಾಳಿಗಳನ್ನು ಸಹಿಸುತ್ತ ಧೈರ್ಯದಿಂದ ಉಪಾಯವನ್ನು ಚಿಂತಿಸುತ್ತಲಿದ್ದಿತು. ಜರ್ಮನಿಗೆ ಜಯದ ಮದ ವೇರಿತು. ಅದು ರಶಿಯದ ಮೇಲೆ ದಾಳಿಮಾಡಿ ಆರು ತಿಂಗಳಲ್ಲಿ ಒಂದು ಸಾವಿರ ಮೈಲುಗಳ ಪ್ರದೇಶವನ್ನು ಆಕ್ರಮಿಸಿತು. ಅತ್ತ ಜಪಾನವೂ ಕ್ರಿ. ಶ. ೧೯೪೧ ರ ಕೊನೆಗೆ ಜರ್ಮನಿಯ ಪಕ್ಷದಿಂದ ಯುದ್ಧದಲ್ಲಿ ಧುಮುಕಿತು. ಜಪಾನ-ಚೀನಗಳ ನಡುವೆ ಮೊದಲಿನಿಂದಲೇ ಯುದ್ಧವು ನಡೆದಿದ್ದಿತು. ಈಗ ಜಪಾನವು ಮಲಯಾ, ಸಿಂಗಾಪುರಗಳನ್ನು ವಶಮಾಡಿಕೊಂಡು ಬ್ರಹ್ಮದೇಶವನ್ನು ಹೊಕ್ಕಿತು. ಕೂಡಲೆ ಅಮೇರಿಕೆಯು ಕೇವಲ ಸಹಾಯ-ಸಹಾನುಭೂತಿಗಳ ಧೋರಣೆಯನ್ನು ಬಿಟ್ಟು ಪ್ರತ್ಯಕ್ಷ ಯುದ್ಧದಲ್ಲಿ ಸೇರಿತು. ಈಗ ಇಂಗ್ಲಂಡ, ರಶಿಯಾ, ಚೀನ, ಅಮೇರಿಕೆ ಇವು ಒಂದಾಗಿ ಜರ್ಮನಿ ಮೊದಲಾದ ವೈರಿ ರಾಷ್ಟ್ರಗಳ ಮೇಲೆ ಹುರಿಯಾದವು. ಇದರ ಪರಿಣಾಮವಾಗಿ ಕ್ರಿ. ಶ. ೧೯೪೨ ರಲ್ಲಿ ಜರ್ಮನಿಗೆ ಸ್ಟಾಲಿನಗ್ರಾಡ ದಲ್ಲಿ ಮೊದಲನೆಯ ಸೋಲುಂಟಾಯಿತು. ಕ್ರಿ. ಶ. ೧೯೪೩ ರ ಕೊನೆಗೆ ಜರ್ಮ

ನಿಯು ಉತ್ತರ ಆಫ್ರಿಕೆಯಿಂದ ಕಾಲ್ಕಿತ್ತಿಗೆಯಿತು. ಮುಂದೆ ಜರ್ಮನಿಗೆ ಪೂರ್ಣ ಸೋಲುಂಟಾಗಿ ಕ್ರಿ. ಶ. ೧೯೪೫ ರ ಮೇ ತಿಂಗಳ ೭ ನೆಯ ದಿನಾಂಕಕ್ಕೆ ಯುರೋಪದಲ್ಲಿಯ ಯುದ್ಧವು ನಿಂತಿತು ಮುಂದೆ ಅಗಸ್ಟ ೧೫ ನೆಯ ದಿನಾಂಕಕ್ಕೆ ೨ ನೆಯ ಮಹಾಯುದ್ಧವು ಪೂರಾ ಮುಗಿಯಿತು.

ಈ ಮಹಾಯುದ್ಧವು ನಡೆದಿರುವಾಗಲೆ ಕ್ರಿ. ಶ. ೧೯೪೩ ರಲ್ಲಿ ಲಿನ್‌ಲಿಥಗೋ ಇವನ ಆಳಿಕೆ ಮುಗಿದು ಲಾರ್ಡ ವೆವ್ಹೆಲ್ ಇವನು ವ್ಹಾಯಿಸ ರಾಯನಾಗಿ ಬಂದನು.

**ಪ್ರ:—ಲಾರ್ಡ ವೆವ್ಹೆಲ್ ಮತ್ತು ಲಾರ್ಡ ಲುಯಿ ಮಾವುಂಟ್ ಬ್ಯಾಟನ್ ಇವರ ಆಳಿಕೆಯಲ್ಲಿ ವರ್ತಿಸಿದ ಮಹತ್ವದ ಘಟನೆಗಳ ಬಗೆಗೆ ಟಿಪ್ಪಣಿಗಳನ್ನು ಬರೆಯಿರಿ.**

**ಉ:—** ಲಾರ್ಡ ವೆವ್ಹೆಲ್ (ಕ್ರಿ. ಶ. ೧೯೪೩–೪೭) :–ಇವನು ೨ನೆಯ ಮಹಾಯುದ್ಧದಲ್ಲಿ ಇತಲಿಯ ಸೈನ್ಯವನ್ನು ಇದಿರಿಸಿ ಅಬಸೀನಿಯವನ್ನು ತಿರುಗಿ ತೆಗೆದುಕೊಂಡನು. ಅಲ್ಲದೆ, ಲಿಬಿಯಾ, ಸೋರೆನಿಕಾ ಪ್ರಾಂತಗಳನ್ನು ಗೆದ್ದು ಕೊಂಡು ಬ್ರಿಟಿಶರನ್ನು ದಣಿಸಿದ್ದ ಜರ್ಮನ್ ಸೇನಾಪತಿ ರೋಮೆಲನನ್ನು ಧೈರ್ಯದಿಂದ ಕಾದಿ ಸೋಲಿಸಿದನು. ಇಂಥ ಸಮರ್ಥನನ್ನು ಪಾರ್ಲಮೆಂಟಿ ನವರು ಬೇಕೆಂತ ವ್ಹಾಯಿಸರಾಯನನ್ನಾಗಿ ಹಿಂದುಸ್ಥಾನಕ್ಕೆ ಕಳುಹಿದರು. ಏಕೆಂದರೆ ಆಗ ಮಹಾಯುದ್ಧದ ಬೇಗೆಯು ಹಿಂದುಸ್ಥಾನದ ಬಾಗಿಲಿಗೆ ಬಂದಿದ್ದಿತು. ಜನತೆಯು ಸ್ವಾತಂತ್ರ್ಯಕ್ಕಾಗಿ ಆತುರಗೊಂಡು ಬೇಕಾದ ತ್ಯಾಗವನ್ನು ಮಾಡಿ ಹೋರಾಟಕ್ಕೆ ಸಿದ್ಧವಾಗಿದ್ದಿತು. ಅಂಥದರಲ್ಲಿಯೇ ಬಂಗಾಲದಲ್ಲಿಯ ಬರಗಾಲ, ದೇಶದಲ್ಲೆಲ್ಲ ಉಂಟಾಗಿದ್ದ ಆಹಾರಧಾನ್ಯಗಳ ಕೊರತೆ ಇವು ಜನರನ್ನು ಹಣ್ಣುಮಾಡಿದ್ದವು.

**ರಾಷ್ಟ್ರಸಭೆಯ ಯುದ್ಧ–ವಿರೋಧ:—**ಕ್ರಿ. ಶ. ೧೯೩೯ ರಲ್ಲಿ ೨ ನೆಯ ಮಹಾಯುದ್ಧವು ಆರಂಭವಾದ ಕೂಡಲೆ ವ್ಹಾಯಿಸರಾಯನು ರಾಷ್ಟ್ರಸಭೆಯ ಒಪ್ಪಿಗೆಯಿಲ್ಲದೆ ಭಾರತದ ಪರವಾಗಿ ಯುದ್ಧಸಾರಿದನು. ಇದು ರಾಷ್ಟ್ರಸಭೆಯ ಮುಂದಾಳುಗಳಿಗೆ ಸಹನವಾಗಲಿಲ್ಲ. ಅವರು ಮಂತ್ರಿಮಂಡಲಕ್ಕೆ ರಾಜೀನಾಮೆ ಕೊಟ್ಟು ಹೊರಬಿದ್ದು ಸರಕಾರವನ್ನು ಬಲವಾಗಿ ವಿರೋಧಿಸತೊಡಗಿದರು. ಆಗ ವ್ಹಾಯಿಸರಾಯನು ಭಾರತ–ಬ್ರಿಟನ್ನುಗಳ ನಡುವೆ ಅನುಕೂಲವಾತಾವರಣವನ್ನು ಉಂಟುಮಾಡಿಕೊಳ್ಳುವ ಉದ್ದೇಶದಿಂದ ಎಲ್ಲ ಪಕ್ಷಗಳ

ಮುಂದಾಳುಗಳ ಪರಿಷತ್ತನ್ನು ನೆರೆಯಿಸಿ ಚರ್ಚೆಯನ್ನು ನಾಗಿಸಿದನು. ಆಗ ಮಹಾತ್ಮರು, ಶಾಸನಸಭೆಗಳನ್ನು ರಚಿಸುವ ಅಧಿಕಾರವನ್ನು ಭಾರತೀಯರಿಗೆ ಕೊಡುವ ವರೆಗೆ ಸರಕಾರದೊಂದಿಗೆ ಸಹಕಾರವು ಶಕ್ಯವಿಲ್ಲೆಂದು ತಿಳಿಸಿದರು. ವ್ಹಾಯಿಸರಾಯನ ಉದ್ದೇಶವು ಕೈಗೂಡಲಿಲ್ಲ. ಮಹಾತ್ಮರು ಮತ್ತೆ ಶಾಸನ ಭಂಗದ ಚಳವಳಿಯನ್ನು ಹೂಡಿದರು. ವ್ಹಾಯಿಸರಾಯನು ತನ್ನ ಕಾರ್ಯಕಾರೀ ಮಂಡಲದ ಸಭಾಸದರ ಸಂಖ್ಯೆಯನ್ನು ಹೆಚ್ಚಿಸಿ, ಆ ಸ್ಥಳಗಳಿಗೆ ಹಿಂದೀಯರನ್ನು ಆರಿಸಿದನು. ಆರಿಸಲ್ಪಟ್ಟವರು ಸರಕಾರದ ಒಲವಿನಂತೆ ನಡೆಯುವ ಹಿಂದೀ ಯರೇ ಆಗಿದ್ದರು. ಆದದರಿಂದ ಇದರಿಂದಲೂ ಮುಂದಾಳುಗಳ ಸಮಾಧಾನ ವಾಗಲಿಲ್ಲ. ಚಳವಳಿಯು ಹಾಗೆಯೆ ಸಾಗಿತು. ಕ್ರಿ. ಶ. ೧೯೪೧ ರಲ್ಲಿ ಅಮೇರಿ ಕೆಯ ಅಧ್ಯಕ್ಷರಾದ ರೂಜವೆಲ್ಟ, ಇಂಗ್ಲಂಡದ ಮುಖ್ಯಮಂತ್ರಿ ಚರ್ಚಿಲ್ ಇವರು ಕೂಡಿ ಮಹಾಯುದ್ಧ ಮುಗಿದ ಬಳಿಕ ಎಲ್ಲ ರಾಷ್ಟ್ರಗಳಿಗೆ ಸ್ವಾತಂ ತ್ರ್ಯವು ದೊರೆಯುವದು ಎಂದು ಸಾರಿದರು. ಈ ಸಾರುವಿಕೆಯು 'ಅಟಲಾಂಟಿಕ ಘೋಷಣೆ'' ಎಂದು ಹೆಸರಾಯಿತು. ಇದನ್ನು ನಿಜವೆಂದು ನಂಬಿದ ಭಾರತೀ ಯರು ಕೆಲಮಟ್ಟಿಗೆ ಸಮಾಧಾನ ಹೊಂದಿದರು. ಆದರೆ ಮುಂದೆ ಈ ಘೋಷ ಣೆಯು ಯುರೋಪಕ್ಕೆ ಮಾತ್ರ ಅನ್ವಯಿಸುವದೆಂಬ ತಿದ್ದುಪಡೆಯು ಪ್ರಕಟ ವಾಯಿತು. ಇದರಿಂದ ಘೋಷಣೆಯನ್ನು ನಂಬಿದವರು ಸಹ ರೊಚ್ಚಿಗೆದ್ದು ಸರಕಾರವನ್ನು ಪ್ರತಿಭಟಿಸಲು ಸಿದ್ಧರಾದರು. ಮಹಾತ್ಮರ ಕಾಯದೆ–ಭಂಗದ ಚಳವಳಿ ಮತ್ತೆ ಆರಂಭವಾಯಿತು. ಮುಂದಾಳುಗಳು ಸೆರೆಮನೆ ಕಂಡರು. ಇದೇ ಸಮಯಕ್ಕೆ ಜಪಾನವು ಇಂಗ್ಲಂಡ ಅಮೇರಿಕೆಗಳ ವಿರುದ್ಧ ಯುದ್ಧ ಸಾರಿತು. ಅದು ಅಯ್ದೇ ತಿಂಗಳುಗಳಲ್ಲಿ ಮಲಯಾ, ಸಿಂಗಾಪುರ, ಬ್ರಹ್ಮದೇಶ, ಅಂದಮಾನ ಇವುಗಳನ್ನು ಗೆದ್ದುಕೊಂಡು ಭಾರತ–ಸಿಲೋನಗಳ ಮೇಲೆ ಬಾಂಬು ಎಸೆಯಲಾರಂಭಿಸಿತು. ಅತ್ತ ಇಜಿಪ್ತದಲ್ಲಿ ಕಾಲುಚಾಚಲು ಅವಕಾಶ ದೊರೆಯದ್ದರಿಂದ ಜರ್ಮನರು ಕಾಕೇಸಸ್ ಮಾರ್ಗವಾಗಿ ಭಾರತಕ್ಕೆ ಬರಲು ಹವಣಿಸಹತ್ತಿದರು. ಬ್ರಿಟಿಶರಿಗೆ ವಿವಂಚನೆ ಉಂಟಾಯಿತು. ಪಾರ್ಲಿಮೆಂಟಿ ನವರು ಭಾರತದ ಪರಿಸ್ಥಿತಿಯನ್ನು ವಿಚಾರಿಸಿ, ತಕ್ಕ ಉಪಾಯವನ್ನು ಸೂಚಿ ಸಲು ಸ್ಟ್ಯಾಫೋರ್ಡ ಕ್ರಿಪ್ಸ ಎಂಬ ಮುತ್ಸದ್ದಿಯನ್ನು ಕಳುಹಿದರು. ಕ್ರಿಪ್ಸನು ಭಾರತಕ್ಕೆ ಬಂದು ದಿಲ್ಲಿಯಲ್ಲಿ ಮುಖಂಡರ ಜೊತೆಯಲ್ಲಿ ಮಾತುಕಥೆ ನಡೆಯಿಸಿದನು. ಮತ್ತು ಕ್ರಿ. ಶ. ೧೯೪೨ ರ ಎಪ್ರಿಲ್ ತಿಂಗಳಲ್ಲಿ, ಯುದ್ಧದ

ತರುವಾಯ ವಸಾಹತುಗಳಲ್ಲಿರುವಂತಹ ಸ್ವರಾಜ್ಯದ ಯೋಜನೆಯನ್ನು ಭಾರತಕ್ಕೆ ಅನ್ವಯಿಸುವದಾಗಿ ಪ್ರಕಟಿಸಿದನು. ಈ ಯೋಜನೆಯು ಹಲವು ದೋಷಗಳಿಂದ ಕೂಡಿರುವದೆಂದು ತಿಳಿದು ಎಲ್ಲ ಪಕ್ಷದವರು ಇದನ್ನು ತಿರಸ್ಕರಿಸಿದರು!

ಈ ರೀತಿ ತಮ್ಮ ಆಕಾಂಕ್ಷೆಗಳು ಬ್ರಿಟಿಶರಿಂದ ಪೂರ್ಣವಾಗುವ ಆಶೆಯಿಲ್ಲೆಂದು ಮನಗಂಡು ಮಹಾತ್ಮಾಜಿಯವರು ಚಲೇಜಾವ್ (ಕ್ವಿಟ್ ಇಂಡಿಯಾ) ಎಂಬ ಆಂದೋಲನವನ್ನು ಕ್ರಿ. ಶ. ೧೯೪೨ ರ ಅಗಸ್ಟ ತಿಂಗಳಲ್ಲಿ ಆರಂಭಿಸಿದರು. ಸರಕಾರವು ಕಠೋರವಾದ ದಬ್ಬಾಳಿಕೆಯಿಂದ ಈ ಆಂದೋಲನವನ್ನು ಅಡಗಿಸಲು ಪ್ರಯತ್ನಿಸಿತು.

**ಸಂಪೂರ್ಣ ಸ್ವಾತಂತ್ರ್ಯದ ಬೇಡಿಕೆಗೆ ಮನ್ನಣೆ**— ೨ನೆಯ ಮಹಾಯುದ್ಧವು ನಡೆದಿರುವಾಗ ಮಲಯಾ-ಸಿಂಗಾಪುರಗಳಲ್ಲಿ ಸುಭಾಸಚಂದ್ರ ಬೋಸರ ಮುಂದಾಳುತನದಲ್ಲಿ *ಆಝಾದ ಹಿಂದ ಸೈನ್ಯವು ಸಿದ್ಧವಾಗಿ ಭಾರತದ ಸ್ವಾತಂತ್ರ್ಯದ ಪ್ರಾಪ್ತಿಗಾಗಿ ಮಾಡಿದ ಸಶಸ್ತ್ರಕ್ರಾಂತಿಯ ಪ್ರಯತ್ನವು ಬೈಲಿಗೆ ಬಂದಿತು. ಆಗ ಆ ಸೈನ್ಯದ ಪ್ರಮುಖರಾಗಿದ್ದ ಕ್ಯಾಪ್ಟನ್ ಶಹಾನವಾಜಖಾನ ಮೊದಲಾದವರ ವಿಚಾರಣೆಯಾಗಿ ಅವರು ದೋಷಮುಕ್ತರಾದರು. ಭಾರತೀಯರು ಇವರೆಲ್ಲರನ್ನು ಗೌರವಿಸಿದರು. ಇದೇ ಸಮಯಕ್ಕೆ ಹಿಂದೀ ಹಡಗುಪಡೆಯ ಕೆಲಸಗಾರರು ಸಂಪು ಮಾಡಿದರು. ಆಹಾರ ಧಾನ್ಯದ ಅಭಾವದಿಂದ ಅಲ್ಲಲ್ಲಿ ಜನರಿಗೆ ಉಪವಾಸ ಬೀಳುವ ಪ್ರಸಂಗವು ಒದಗಿತು. ಭಾರತದ ಈ ಪರಿಸ್ಥಿತಿಯನ್ನು ಸೂಕ್ಷ್ಮವಾಗಿ ಅರಿತುಕೊಂಡ ಬ್ರಿಟಿಶ ಮುತ್ಸದ್ದಿಗಳು ಭಾರತದಲ್ಲಿ ರಾಷ್ಟ್ರೀಯ ಸರಕಾರವು ಸ್ಥಾಪಿಸಲ್ಪಡುವದು ಅತ್ಯವಶ್ಯವೆಂದು ಅಭಿಪ್ರಾಯವನ್ನು ವ್ಯಕ್ತಪಡಿಸಹತ್ತಿದರು. ಆದದರಿಂದ ಪಾರ್ಲಿಮೆಂಟಿನಿಂದ ಮಿ. ಪೆಥಿಕ್ ಲಾರೆನ್ಸ, ಸರ್ ಸ್ಟ್ಯಾಫೋರ್ಡ ಕ್ರಿಪ್ಸ, ಮಿ. ಅಲೆಕ್ಝಾಂಡರ ಈ ಮೂವರು ಮುತ್ಸದ್ದಿಗಳು ಕಳುಹಿಸಲ್ಪಟ್ಟರು. ಇವರ ಯೋಜನೆಗಳನ್ನು ಕೂಡ ಭಾರತೀಯರು ಒಪ್ಪಲಿಲ್ಲ ಕೊನೆಯಲ್ಲಿ ಇವರು ಸಂಪೂರ್ಣ ಸ್ವಾತಂತ್ರ್ಯದ ಬೇಡಿಕೆಯನ್ನು ಮನ್ನಿಸಿ, ಕೂಡಲೆ ನಡುವಿನ ಕಾಲದಲ್ಲಿ ಕಾರಭಾರವನ್ನು ಸಾಗಿಸುವ ರಾಷ್ಟ್ರೀಯ ಸರಕಾರವನ್ನು ಸ್ಥಾಪಿಸಬೇಕೆಂದು ಸೂಚಿಸಿದರು. ಈ ಸೂಚನೆಯಂತೆ ೧೯೪೬ ನೆಯ ಮೇ ತಿಂಗಳ ೧೬ ನೆಯ ದಿನಾಂಕಕ್ಕೆ ಒಂದು ಯೋಜನೆಯು ಪ್ರಕಟವಾಯಿತು. ಈ ಯೋಜನೆಯಂತೆ ಕ್ರಿ. ಶ. ೧೯೪೬ ರ ಸಪ್ಟಂಬರದಲ್ಲಿ ಪಂ. ಜವಾಹರಲಾಲರ ಹಿರಿಯತನದಲ್ಲಿ ನಡುಗಾಲ

ಸರಕಾರದ ಮಂತ್ರಿಮಂಡಲವು ರಚಿತವಾಯಿತು. ಪಂ. ಜವಾಹರಲಾಲರು ಮುಖ್ಯಮಂತ್ರಿಗಳಾದರು. ಮುಸ್ಲಿಮ ಲೀಗು ಇದರಲ್ಲಿ ಭಾಗವಹಿಸಿತು. ಮುಂದೆ ಡಿಸೆಂಬರ ತಿಂಗಳಲ್ಲಿ ಘಟನಾಸಮಿತಿಯ ಮೊದಲನೆಯ ಸಭೆಯು ದಿಲ್ಲಿಯಲ್ಲಿ ನೆರೆಯಿತು. ಮು. ಲೀಗಿನವರು ಅದರೊಡನೆ ಸಹಕರಿಸಲಿಲ್ಲ. ರಾಷ್ಟ್ರಸಭೆ-ಮುಸ್ಲಿಮ ಲೀಗುಗಳಲ್ಲಿ ಸಹಕಾರವನ್ನು ಉಂಟುಮಾಡುವ ಪ್ರಯತ್ನವನ್ನು ವೆವ್ಹೆಲ್ಲನು ನಡೆಯಿಸಿದನು ಅವನು ಪಂ. ಜವಾಹರಲಾಲ ಮತ್ತು ಬ್ಯಾ. ಜಿನ್ನಾ ಇವರೊಡನೆ ಈ ವಿಷಯದ ವಿಚಾರಣೆಗಾಗಿ ಇಂಗ್ಲಂಡಕ್ಕೆ ಹೋಗಿ ಬಂದನು. ಮುಂದೆ ಕ್ರಿ. ಶ. ೧೯೪೭ ರ ಜನೇವರಿಯಲ್ಲಿ ಘಟನಾ ಸಮಿತಿಯ ಎರಡನೆಯ ಸಭೆ ನೆರೆಯಿತು. ಆಗ ಕೂಡ ಮುಸ್ಲಿಮ ಲೀಗಿನವರು ಸಹಕರಿಸಲಿಲ್ಲ. ಮುಂದೆ ಕ್ರಿ. ಶ. ೧೯೪೭ ರ ಫೆಬ್ರುವರಿ ತಿಂಗಳಲ್ಲಿ ಇಂಗ್ಲಂಡದ ಮುಖ್ಯಮಂತ್ರಿಗಳಾದ ಮಿ. ಆಟ್ಲೆ ಇವರು "ಕ್ರಿ. ಶ. ೧೯೪೮ ರ ಜೂನ ತಿಂಗಳ ಸುಮಾರಿಗೆ ಬ್ರಿಟಿಶರು ಭಾರತದ ಮೇಲಿರುವ ತಮ್ಮ ಅಧಿಕಾರವನ್ನು ಹೊಣೆಗಾರ ಜನರ ಕಡೆಗೆ ಒಪ್ಪಿಸಿಕೊಡುವರು. ಸಂಸ್ಥಾನಿಕರ ಮೇಲಿರುವ ಸಾರ್ವಭೌಮಾಧಿಕಾರವು ಇಲ್ಲದಂತಾಗಿ ಅವರಿಗೆ ಮೊದಲಿನ ಅಧಿಕಾರವು ಉಂಟಾಗುವದು. ಈ ಕಾರ್ಯದ ಪೂರ್ವಸಿದ್ಧತೆಗಾಗಿ ವೆವ್ಹೆಲ್ಲನ ಸ್ಥಳದಲ್ಲಿ ಲಾರ್ಡ ಮೌಂಟಬ್ಯಾಟನನು ವ್ಹಾಯಿಸರಾಯನಾಗುವನು." ಎಂದು ಘೋಷಣೆಯನ್ನು ಮಾಡಿದರು.

**ಮೌಂಟಬ್ಯಾಟನ್** (ಕ್ರಿ. ಶ. ೧೯೪೭-೧೯೫೦) :—ಕ್ರಿ. ಶ. ೧೯೪೭ ರ ಜೂನ ತಿಂಗಳ ಮೂರನೆಯ ದಿನ ಮೌಂಟಬ್ಯಾಟನನು ಅಧಿಕಾರ ಒಪ್ಪಿಸುವ ಬಗೆಗೆ ವಿವರವಾದ ಯೋಜನೆಯನ್ನು ಪ್ರಸಿದ್ಧಿಸಿದನು ಅದರ ಸಾರಾಂಶವು :— ಕ್ರಿ. ಶ. ೧೯೪೭ ರ ಅಗಸ್ಟ ೧೫ ರಿಂದ ಭಾರತದಲ್ಲಿ ವಸಾಹತಿಯ ಸ್ವರೂಪದ ಸರಕಾರವು ಸ್ಥಾಪಿಸಲ್ಪಡಬೇಕು. ಬ್ರಿಟಿಶರು ಕ್ರಿ. ಶ. ೧೯೪೮ ರ ಜೂನದಲ್ಲಿ ಈ ದೇಶದಿಂದ ತೊಲಗಲು ಸಿದ್ಧರಿರಬೇಕು. ಶಕ್ಯವಿದ್ದ ಮಟ್ಟಿಗೆ ಭಾರತವು ಅಖಂಡವಿರಬೇಕು. ಅದು ಸಾಧ್ಯವೇ ಆಗದಿದ್ದಲ್ಲಿ ಪಂಜಾಬ, ಬಂಗಾಲ ಈ ಪ್ರಾಂತಗಳನ್ನು ವಿಭಾಗಿಸಬೇಕು. ಪಶ್ಚಿಮಪಂಜಾಬ, ಪೂರ್ವಬಂಗಾಲ, ಸಿಂಧ ಈ ಪ್ರಾಂತಗಳನ್ನು ಪಾಕಿಸ್ತಾನಕ್ಕೆ ಸೇರಿಸಬೇಕು. ಬಲೂಚಿಸ್ತಾನ, ಸರಹದ್ದ ಪ್ರಾಂತ ಇವುಗಳ ಜನಮತದಂತೆ ಅವು ಸ್ವತಂತ್ರವಾಗಿ ಇರಬಹುದು. ಇಲ್ಲವೆ ಪಾಕಿಸ್ತಾನಕ್ಕೆ ಸೇರಬಹುದು. ಆಸಾಮದ ಸಿಲ್ಹೇಟ ಈ ಬಹುಸಂಖ್ಯ ಮುಸ್ಲಿಮರಿರುವ ಜಿಲ್ಹೆಯನ್ನು ಪೂರ್ವಬಂಗಾಲಕ್ಕೆ ಸೇರಿಸಬೇಕು. ಬ್ರಿಟಿಶರು

ತೊಲಗಿದ ಬಳಿಕ ಸಂಸ್ಥಾನಿಕರಿಗೆ ಅವರ ಪೂರ್ವದ ಸ್ವತಂತ್ರವಾದ ಅಧಿಕಾರವು ಉಂಟಾಗುವದು. ಅವರು ಸ್ವತಂತ್ರರಾಗಿ, ಇರಬಹುದು: ಪಾಕಿಸ್ತಾನಕ್ಕೆ ಇಲ್ಲವೆ ಭಾರತಕ್ಕೆ ಸೇರಬಹುದು.

**ಸ್ವಾತಂತ್ರ್ಯದ ಘೋಷಣೆ:**—ಮೌಂಟಬ್ಯಾಟನನ ಯೋಜನೆಯಂತೆ ಹಿಂದೀ ಸ್ವಾತಂತ್ರ್ಯಕ್ಕೆ ಮನ್ನಣೆಯನ್ನು ಕೊಡುವ ಕಾಯದೆಯು ೧೯೪೭ ರ ಜುಲೈ ೧೮ ನೆಯ ದಿನ ಬ್ರಿಟಿಶ ಪಾರ್ಲಿಮೆಂಟಿನಲ್ಲಿ ಪಾಸಾಯಿತು ಅದಕ್ಕೆ ಬಾದಶಹರ ಸಮ್ಮತಿ ದೊರೆಯಿತು. ಮತ್ತು ಮರುದಿನ ಎಂದರೆ ದಿನಾಂಕ ೧೯ ಕ್ಕೆ ಹಿಂದುಸ್ಥಾನ, ಪಾಕಿಸ್ತಾನ ಇವು ಸ್ವತಂತ್ರ ರಾಷ್ಟ್ರಗಳಾದವೆಂದು ಪ್ರಸಿದ್ಧ ವಾಯಿತು. ಬ್ಯಾ. ಜಿನ್ನಾ ಅವರು ಪಾಕಿಸ್ಥಾನದ ಗವ್ಹರ್ನರ ಜನರಲ ರಾದರು; ಮೌಂಟಬ್ಯಾಟನನು ಹಿಂದುಸ್ಥಾನದ ಗವ್ಹರ್ನರ ಜನರಲನಾದನು. ದಿನಾಂಕ ೧೫, ಅಗಸ್ಟ ೧೯೪೭ ನೆಯ ದಿನ ಸ್ವಂತತ್ರ ಸರಕಾರಗಳ ಕಾರ ಭಾರವು ಆರಂಭವಾಯಿತು. ಬ್ರಿಟಿಶರ ಮೇಲಧಿಕಾರವು ಇಲ್ಲದಂತಾಗಿ ಭಾರತ ಮತ್ತು ಪಾಕಿಸ್ತಾನ ಇವುಗಳಿಗೆ ಪಸಾಹತಿಯ ಸ್ವರಾಜ್ಯವು ದೊರೆಯಿತು. ಅಂದು ದಿಲ್ಲಿಯಲ್ಲಿ ನೆಹರು ಮೌಂಟಬ್ಯಾಟನರು ಭಾರತದ ರಾಷ್ಟ್ರಧ್ವಜಕ್ಕೆ ವಂದನೆಗಳನ್ನು ಅರ್ಪಿಸಿದರು; ದೇಶದಲ್ಲೆಲ್ಲ ಸ್ವಾತಂತ್ರ್ಯದ ಉತ್ಸವವು ನೆರವೇರಿ ಸಲ್ಪಟ್ಟಿತು.

**ಪ್ರ:—ನಿರ್ವಾಸಿತರ ಸಮಸ್ಯೆ, ರಜಾಕಾರರ ಹಾವಳಿ, ಸಂಸ್ಥಾನಗಳ ವಿಲೀನೀ ಕರಣ, ಭಾರತದ ರಾಜ್ಯಘಟನೆ ಇವುಗಳ ಬಗೆಗೆ ಟಿಪ್ಪಣಿಗಳನ್ನು ಬರೆಯಿರಿ.**

**ಉ:— ನಿರ್ವಾಸಿತರ ಸಮಸ್ಯೆ:**— ಭಾರತದ ವಿಭಜನೆಯ ಕಾಲಕ್ಕೆ ಭಾರತ ಮತ್ತು ಪಾಕಿಸ್ತಾನ ಇವುಗಳಲ್ಲಿ ಉಳಿಯುವ ಅಲ್ಪಸಂಖ್ಯಾಕರ ವಿಷಯವು ದುರ್ಲಕ್ಷಿಸಲಾಯಿತು. ಪರಸ್ಪರರಲ್ಲಿ ಸೌಹಾರ್ದಭಾವನೆಯು ಸಹಜವಾಗಿ ನೆಲೆ ಗೊಳ್ಳಬಹುದೆಂಬ ವಿಶ್ವಾಸದಿಂದ ಅದು ದುರ್ಲಕ್ಷಿಸಲ್ಪಟ್ಟಿರಬೇಕು. ಆದರೆ ಮುಂದೆ ಉಂಟಾದ ಪರಿಣಾಮವನ್ನು ಅನುಭವಿಸಿದ ಬಳಿಕ ಅಲ್ಪಸಂಖ್ಯಾಕರ ಸಮಸ್ಯೆಯನ್ನು ಬಿಡಿಸದಿದ್ದದ್ದು ತಪ್ಪಾಯಿತೆಂದು ಎನಿಸದೆ ಇರಲಿಲ್ಲ. ಎರಡೂ ದೇಶಗಳ ಅಲ್ಪಸಂಖ್ಯಾಕರು ಅಲ್ಲಿ ಇರಲು ಹೆದರಹತ್ತಿದರು. ಲಕ್ಷಗಟ್ಟಲೆ ಹಿಂದು ಗಳು ಪಾಕಿಸ್ತಾನದಿಂದ ಹಿಂದುಸ್ಥಾನಕ್ಕೆ ಬಂದರು. ಮತ್ತು ಅದೇ ರೀತಿಯಲ್ಲಿ ಮುಸಲ್ಮಾನರು ಹಿಂದುಸ್ಥಾನದಿಂದ ಪಾಕಿಸ್ತಾನಕ್ಕೆ ಹೋದರು. ಇಷ್ಟಕ್ಕೆ ಈ ಸಮಸ್ಯೆ ಬಗೆಹರಿಯಲಿಲ್ಲ. ಎರಡೂ ದೇಶಗಳಲ್ಲಿ ಅಲ್ಪಸಂಖ್ಯಾಕರ ಮೇಲಿನ ಸೇಡಿನ ಬುದ್ಧಿಯು ಬೆಳೆದುಬಂದದರಿಂದ ಎರಡೂ ಕಡೆಗಳಲ್ಲಿ ಅಲ್ಪಸಂಖ್ಯಾಕರ

ಮೇಲೆ ಹೃದಯದ್ರಾವಕವಾದ ಅತ್ಯಾಚಾರಗಳು ನಡೆದವು. ಪಾಕಿಸ್ತಾನದಿಂದ ಭಾರತಕ್ಕೆ ಬಂದ ನಿರ್ವಾಸಿತರ ಯೋಗಕ್ಷೇಮವನ್ನು ನೋಡುವದು, ಪಾಕಿಸ್ತಾನದಲ್ಲಿ ಅವರು ಬಿಟ್ಟುಬಂದ ಆಸ್ತಿಗಳ ಬಗೆಗೆ ಪರಿಹಾರವನ್ನು ಪಡೆಯುವದು ಮುಂತಾದ ಹಲವು ಮಹತ್ತ್ವದ ಕೆಲಸಗಳ ಭಾರವು ಭಾರತ ಸರಕಾರದ ಮೇಲೆ ಬಿದ್ದಿತು. ನಿರ್ವಾಸಿತರ ಸಮಸ್ಯೆ ಎಂಬುದು ಇದೇ.

**ಸಂಸ್ಥಾನಗಳ ವಿಲೀನೀಕರಣ :**—ಭಾರತದ ಹೊಸರಾಜ್ಯ ವ್ಯವಸ್ಥೆಯ ಕಾಲಕ್ಕೆ ಎಷ್ಟೋ ಸಂಸ್ಥಾನಗಳು ಸಂಘರಾಜ್ಯಗಳಲ್ಲಿ ಕೂಡಿಕೊಂಡವು:—ಮುಧೋಳ, ರಾಮದುರ್ಗ, ಸವಣೂರು ಮೊದಲಾದ ಸಂಸ್ಥಾನಗಳು ಮುಂಬಯಿರಾಜ್ಯದಲ್ಲಿ ಸೇರಿದವು. ಕೆಲವು ಸಂಸ್ಥಾನಗಳು ಅನುಕೂಲವಾಗುವಂತೆ ಒಟ್ಟಾಗಿ ಸಂಘರಾಜ್ಯಗಳನ್ನು ಮಾಡಿಕೊಂಡವು. ಸೌರಾಷ್ಟ್ರ, ಮಧ್ಯಭಾರತ, ವಿಂಧ್ಯಪ್ರದೇಶ, ರಾಜಸ್ಥಾನ, ಪೂರ್ವ–ಪಂಜಾಬದ ಸಂಸ್ಥಾನಗಳು, ಹಿಮಾಚಲ ಪ್ರದೇಶ, ತ್ರಾವಣಕೋರ–ಕೋಚೀನ ಇವು ಏಳು ಸಂಘರಾಜ್ಯಗಳಾಗಿ ಭಾರತದ ಒಕ್ಕೂಟದಲ್ಲಿ ಸೇರಿರುತ್ತವೆ. ರಜಾಕಾರರ ಕ್ರೂರಹಾವಳಿಯು ಭಾರತ ಸರಕಾರದಿಂದ ಅಡಗಿಸಲ್ಪಟ್ಟ ಬಳಿಕ ಹೈದರಾಬಾದ ಸಂಸ್ಥಾನವು ಭಾರತ ಒಕ್ಕೂಟದ ಒಂದು ರಾಜ್ಯವಾಗಿದೆ ನಿಜಾಮರು ಅದರ ರಾಜಪ್ರಮುಖರಾಗಿರುವರು. ಕಾಶ್ಮೀರದ ವಿಷಯವು ನೆನೆಗುದಿಗೆ ಬಿದ್ದಿರುವದು; ಅದರ ನಿರ್ಣಯವು ಬೇಗ ಆಗುವ ಲಕ್ಷಣವು ಕಾಣುವದಿಲ್ಲ.

**ಸ್ವತಂತ್ರ ಭಾರತದ ರಾಜ್ಯಘಟನೆ:** — ಸ್ವರಾಜ್ಯ ಪ್ರಾಪ್ತಿಯ ನಂತರ ಭಾರತದ ಹೊಸರಾಜ್ಯಘಟನೆಯನ್ನು ಸಿದ್ಧಪಡಿಸುವದಕ್ಕಾಗಿ ಶ್ರೀ. ಬಾಬು ರಾಜೇಂದ್ರ ಪ್ರಸಾದರ ಅಧ್ಯಕ್ಷತೆಯಲ್ಲಿ ಒಂದು ಘಟನಾಸಮಿತಿಯು ನಿಯಮಿಸಲ್ಪಟ್ಟಿತು. ಡಾಕ್ಟರ ಆಂಬೇಡಕರ, ಶ್ರೀ. ಮುನಶಿ, ಶ್ರೀ. ಅಲ್ಲಾಡಿ ಕೃಷ್ಣಸ್ವಾಮಿ ಅಯ್ಯರ, ಶ್ರೀ. ಗೋಪಾಲಸ್ವಾಮಿ ಅಯ್ಯಂಗಾರ ಮೊದಲಾದ ಕಾಯದೆ ಪಂಡಿತರು ಈ ಸಮಿತಿಯ ಸಹಕಾರಿಗಳಾಗಿದ್ದರು. ಈ ಸಮಿತಿಯ ಕಾರ್ಯವು ಸುಮಾರು ಮೂರು ವರ್ಷ ನಡೆದು ಕ್ರಿ. ಶ. ೧೯೪೯ ರ ಡಿಸೆಂಬರ ತಿಂಗಳಲ್ಲಿ ಘಟನೆಯು ಸ್ವೀಕೃತವಾಯಿತು. ಈ ಘಟನೆಯಂತೆ ಕ್ರಿ. ಶ. ೧೯೫೦ ನೆಯ ಇಸವಿಯ ಜನೇವರಿ ೨೬ ನೆಯ ದಿನ ಭಾರತವು ಸಾರ್ವಭೌಮ ಪ್ರಜಾಸತ್ತಾತ್ಮಕ ಗಣರಾಜ್ಯವಾಯಿತು. ಅಂದು ಗವ್ಹರ್ನರ ಜನರಲರ ಆಳಿಕೆ ಕೊನೆಗಂಡಿತು; ಶ್ರೀ. ಬಾಬು ರಾಜೇಂದ್ರ ಪ್ರಸಾದರು ಈ ಗಣರಾಜ್ಯದ ಮೊದಲನೆಯ ಅಧ್ಯಕ್ಷರಾದರು.

---

# ಸಂಕೀರ್ಣ ಪ್ರಶ್ನೆಗಳು.

ಪ್ರ:— ಕೆಳಗೆ ಕೆಲವು ಪ್ರಸಿದ್ಧ ವ್ಯಕ್ತಿಗಳ ಮತ್ತು ಅವರ ಕಾರ್ಯಕ್ಷೇತ್ರಗಳ ಹೆಸರುಗಳು ಕೊಟ್ಟಿವೆ. ಅವುಗಳನ್ನು ಒಂದಕ್ಕೊಂದು ಹೊಂದಿಕೆಯಾಗುವಂತೆ ಬರೆಯಿರಿ. (೧೯೪೯)

ರಾಮದಾಸ, ರವೀಂದ್ರನಾಥ ಠಾಕೂರ, ಮಹಾತ್ಮಾ ಗಾಂಧಿ, ಅರವಿಂದ ಘೋಷ, ಸ್ವಾಮಿ ರಮಾನಂದ ತೀರ್ಥ, ಗುರುನಾನಕ, ಪಾಂಡಿಚೇರಿ, ಸಾಬರಮತಿ ಆಶ್ರಮ, ಪಂಜಾಬ, ಹೈದರಾಬಾದ, ಮಹಾರಾಷ್ಟ್ರ, ಶಾಂತಿನಿಕೇತನ.

ಉ:—ರಾಮದಾಸ .... ಮಹಾರಾಷ್ಟ್ರ.
ರವೀಂದ್ರನಾಥ ಠಾಕೂರ ... ಶಾಂತಿನಿಕೇತನ.
ಮಹಾತ್ಮಾ ಗಾಂಧಿ .... ಸಾಬರಮತಿ ಆಶ್ರಮ.
ಅರವಿಂದ ಘೋಷ ... ಪಾಂಡಿಚೇರಿ.
ಸ್ವಾಮಿರಮಾನಂದತೀರ್ಥ .... ಹೈದರಾಬಾದ (ದಕ್ಷಿಣ).
ಗುರುನಾನಕ ... ಪಂಜಾಬ.

ಪ್ರ:—ಕೆಳಗೆ ಕೊಟ್ಟ ಐತಿಹಾಸಿಕ ಸಂಗತಿಗಳಲ್ಲಿ ತಪ್ಪು ಯಾವವು? ಒಪ್ಪು ಯಾವವು? ಹೇಳಿರಿ. (೧೯೫೦)

೧. ಔರಂಗಜೇಬನು ಶಾಹುವಿನ ಬಿಡುಗಡೆ ಮಾಡಿದನು.

೨. ಬಾಳಾಜಿ ವಿಶ್ವನಾಥನು ಜಹಗೀರಿ ಪದ್ಧತಿಯನ್ನು ತೆಗೆದುಹಾಕಿದನು.

೩. ಬಕ್ಸಾರಕಾಳಗದಿಂದ ಬಂಗಾಲ ಮತ್ತು ಬಿಹಾರ ಇವುಗಳಿಗೆ ಇಂಗ್ಲಿಷರೇ ಒಡೆಯರಾದರು.

೪. ಕ್ಲೈವನು ಹಿಂದುಸ್ಥಾನದ ಮೊದಲನೆಯ ಗವ್ಹರ್ನರ ಜನರಲನು.

೫. ಕಾರ್ನವಾಲೀಸನು ಸಹಾಯಕ-ಸೈನ್ಯಪದ್ಧತಿಯನ್ನು ಜಾರಿಯಲ್ಲಿ ತಂದನು.

೬. ಪ್ಲಾಸೀಕಾಳಗದ ಸೋಲಿಗೆ ಉಮಿಚಂದನೇ ಕಾರಣನು.

೭. ಸವಾಯಿ ಮಾಧವರಾಯನು ಪೇಶ್ವೆಯರಲ್ಲಿ ಬಹಳ ದೊಡ್ಡವನೆಂದು ತಿಳಿದಿದ್ದಾರೆ.

೮. ವಿಲಿಯಮ್ ಬೆಂಟಿಂಕನು ಪೆಂಡಾರಿಗಳ ಸದ್ದನ್ನು ಅಡಗಿಸಿದನು.

೯. ಡಾಲಹೌಸಿಯು ಪೇಗೂ ಪ್ರಾಂತವನ್ನು ಬ್ರಿಟಿಶರ ರಾಜ್ಯಕ್ಕೆ ಕೂಡಿಸಿ ಕೊಂಡನು.

೧೦ ತಮ್ಮ ತಮ್ಮ ಜಾತಿಗಳ ಪರವಾಗಿ ಪ್ರತಿನಿಧಿಗಳನ್ನು ಕಳುಹಿಸುವ ಹಕ್ಕು ೧೯೪೭ ರ ಆಕ್ಟಿನಿಂದ ಸಿಕ್ಕಿತು.

**ಉ:**—(೧) ತಪ್ಪು. (೨) ತಪ್ಪು. (೩) ಒಪ್ಪು (೪) ತಪ್ಪು. (೫) ತಪ್ಪು. (೬) ಒಪ್ಪು. (೭) ಒಪ್ಪು. (೮) ಒಪ್ಪು. (೯) ಒಪ್ಪು. (೧೦) ತಪ್ಪು.

**ಪ್ರ:— ಕೆಳಗೆ ಕೆಲವು ಐತಿಹಾಸಿಕ ಸಂಗತಿಗಳೂ ಅವುಗಳಿಗೆ ಸಂಬಂಧಿಸಿದ ಸುಪ್ರಸಿದ್ಧ ವ್ಯಕ್ತಿಗಳ ಹೆಸರುಗಳೂ ಕೊಟ್ಟಿವೆ. ಅವುಗಳನ್ನು ಒಂದಕ್ಕೊಂದು ಹೊಂದಿಕೆಯಾಗುವಂತೆ ಬರೆಯಿರಿ. (೧೯೪೯)**

**ಸಂಗತಿಗಳು:—(೧) ಸಹಗಮನ ಪದ್ಧತಿಯ ನಿರ್ಮೂಲನ. (೨) ಹಿಂದೀಯರಿಗೆ ಮುದ್ರಣಸ್ವಾತಂತ್ರ್ಯ ಕೊಟ್ಟಿದ್ದು. (೩) ದಿಲ್ಲಿಗೆ ಹಿಂದುಸ್ಥಾನದ ರಾಜಧಾನಿಯ ಗೌರವ ಉಂಟಾದದ್ದು. (೪) ಜಾಲಿಯನವಾಲಾಬಾಗದ ಕೊಲೆ. (೫) ಸಾರ್ವಜನೀಯ ಶಿಕ್ಷಣ ಖಾತೆಯ ಸ್ಥಾಪನೆ. (೬) ವಿಶ್ವವಿದ್ಯಾಲಯಗಳ ಕಟ್ಟಳೆ. (೭) ಬಂಗಾಲದಲ್ಲಿ ದುಹೇರಿ ಕಾರಭಾರದ ಪ್ರಾರಂಭ (೮) ಸರಂಜಾಮಿ ಪದ್ಧತಿ.**

**ಸುಪ್ರಸಿದ್ಧವ್ಯಕ್ತಿಗಳು:—ಲಾರ್ಡ ಡಾಲಹೌಸಿ, ಲಾರ್ಡ ರಿಪನ್, ವಿಲಿಯಮ್ ಬೆಂಟಿಂಕ್, ಕ್ಲೈವ, ಬಾಳಾಜಿ ವಿಶ್ವನಾಥ, ಲಾರ್ಡ ಕರ್ಝನ್, ಜನರಲ್ ಡಾಯರ, ಲಾರ್ಡ ಹಾರ್ಡಿಂಜ್.**

**ಉ:**— ಸಂಗತಿಗಳ ಅನುಕ್ರಮದಂತೆ ಅವುಗಳಿಗೆ ಸಂಬಂಧಿಸಿದ ಸುಪ್ರಸಿದ್ಧ ವ್ಯಕ್ತಿಗಳ ಹೆಸರುಗಳು ಕೊಟ್ಟಿವೆ

(೧) ವಿಲಿಯಮ್ ಬೆಂಟಿಂಕ್ (೨) ಲಾರ್ಡ ರಿಪನ್ (೩) ಲಾರ್ಡ ಹಾರ್ಡಿಂಜ್ (೪) ಜನರಲ್ ಡಾಯರ್ (೫) ಲಾರ್ಡ ಡಾಲಹೌಸಿ, (೬) ಕರ್ಝನ್ (೭) ಕ್ಲೈವ (೮) ಬಾಳಾಜಿ ವಿಶ್ವನಾಥ.

**ಪ್ರ:—ಹೈದರಾಬಾದ ಸಂಸ್ಥಾನದಲ್ಲಿ ರಜಾಕಾರರು ನಡೆಸಿದ ಅತ್ಯಾಚಾರದ ವಿರುದ್ಧ ತೆಗೆದುಕೊಳ್ಳಲ್ಪಟ್ಟ ಪೋಲೀಸ ಕ್ರಮದ ಬಗೆಗೆ ಟಿಪ್ಪಣಿ ಬರೆಯಿರಿ.**

**ಉ:**— ಭಾರತಕ್ಕೆ ಸ್ವಾತಂತ್ರ್ಯವು ದೊರೆತ ಬಳಿಕ ಹಲವು ಸಂಸ್ಥಾನಗಳು ಭಾರತದ ಸಂಘರಾಜ್ಯದಲ್ಲಿ ವಿಲೀನವಾದವು. ಸೌರಾಷ್ಟ್ರ, ರಾಜಸ್ಥಾನ, ವಿಂಧ್ಯಪ್ರದೇಶ, ಮಧ್ಯಭಾರತ, ತ್ರಾವಣಕೋರ-ಕೋಚೀನ, ಪೂರ್ವ-ಪಂಜಾಬ ಸಂಸ್ಥಾನಗಳು, ಹಿಮಾಚಲ ಪ್ರದೇಶ ಈ ಏಳು ಭಾಗಗಳ ಸಂಸ್ಥಾನಗಳು ಸಂಘರಾಜ್ಯಗಳಾಗಿ ಭಾರತದೊಂದಿಗೆ ಕೂಡಿಕೊಂಡವು. ಇದರ ಪರಿಣಾಮವಾಗಿ ಹೈದ್ರಾಬಾದ ಸಂಸ್ಥಾನದ ಪ್ರಜೆಗಳಲ್ಲಿಯೂ ಲೋಕರಾಜ್ಯದ ಆಕಾಂಕ್ಷೆಯು ಬಲವಾಗಹತ್ತಿತು. ಇದನ್ನು ಸಹಿಸಲಾರದೆ ರೊಚ್ಚಿಗೆದ್ದ ರಜಾಕಾರರು ರಾಜ್ಯದ ತುಂಬ ಭಯಂಕರ ಅತ್ಯಾಚಾರಗಳಿಂದ ಪ್ರಜೆಗಳನ್ನು ಹಿಂಸಿ

ಸಿದರು. ಭಾರತ ಸರಕಾರವು ಕೆಲಕಾಲ ವಿಚಾರಮಗ್ನವಾಗಿದ್ದು ಕೊನೆಗೆ ೧೯೪೮ ರ ಸಪ್ಟೆಂಬರ ತಿಂಗಳಲ್ಲಿ ಶಾಂತತೆಯನ್ನು ನೆಲೆಗೊಳಿಸುವದಕ್ಕಾಗಿ ಪೋಲೀಸಕ್ರಮವನ್ನು ಕೈಕೊಂಡಿತು. ಹೈದ್ರಾಬಾದದ ರಾಜ್ಯದಲ್ಲಿ ಭಾರತ ಸೈನ್ಯವು ಸೇರಿ ನಾಲ್ಕೇ ದಿನಗಳಲ್ಲಿ ರಜಾಕಾರರ ಬಲವನ್ನು ಮುರಿದು ರಾಜ್ಯದಲ್ಲಿ ಶಾಂತತೆಯನ್ನು ನೆಲೆಗೊಳಿಸಿತು.

**ಪ್ರ:-ಕೆಳಗೆ ಕೆಲವು ಜನರ ಹೆಸರು ಕೊಟ್ಟಿವೆ. ಪ್ರತಿಯೊಬ್ಬರ ವಿಷಯವಾಗಿ ಒಂದೊಂದು ಮಹತ್ವದ ಸಂಗತಿಯನ್ನು ಬರೆಯಿರಿ. (೧೯೪೭)**

**(ಅ) ಹಿಮೂ (ಬ) ಅಹಮ್ಮದಶಾಹ ಅಬ್ದಾಲಿ (ಕ) ದಾದಾಜಿ ಕೋಂಡದೇವ.**

**ಉ:**— (ಅ) ದಿಲ್ಲಿಯಲ್ಲಿ ಹಿಂದುರಾಜ್ಯವನ್ನು ಸ್ಥಾಪಿಸಲು ಪ್ರಯತ್ನಿಸಿದವರಲ್ಲಿ ಇವನು ಒಬ್ಬನು. ಇವನನ್ನು ೧೫೫೬ ರಲ್ಲಿ ಬಹರಾಮನು ಪಾನಿಪತದಲ್ಲಿ ಸೋಲಿಸಿ ಕೊಂದನು (ಬ) ೧೭೬೧ ರಲ್ಲಿ ಅಹಮ್ಮದಶಾಹ ಅಬ್ದಾಲಿಗೂ ಮರಾಠರಿಗೂ ಪಾನಿಪತದಲ್ಲಿ ಮೂರನೆಯ ಭೀಕರ ಯುದ್ಧವಾಗಿ ಎರಡೂ ಪಕ್ಷಗಳಿಗೆ ಅಪಾರ ಹಾನಿಯಾಯಿತು. (ಕ) ಶಿವಾಜಿಗೆ ರಾಜ್ಯಕಾರಭಾರದ ಮತ್ತು ಯುದ್ಧಕಲೆಯ ಶಿಕ್ಷಣವನ್ನು ಕೊಟ್ಟು ಅವನನ್ನು ಸಮರ್ಥ ಪುರುಷನನ್ನು ಮಾಡಿದ ಶ್ರೇಯಸ್ಸು ದಾದಾಜಿ ಕೋಂಡದೇವನಿಗೆ ಸಲ್ಲುವದು.

**ಪ್ರ:—ಕೆಳಗೆ ಕೆಲವು ಹೆಸರು ಕೊಟ್ಟಿವೆ. ಈ ಮಹನೀಯರು ಯಾರು? (೧೯೪೭)**

**(೧) ಸ್ಟಾಲಿನ್ (೨) ಟ್ರೂಮನ್ (೩) ಚಿಯಾಂಗ-ಕೈ-ಶೇಕ (೪) ಆಟ್ಲಿ.**

**ಉ:**—(೧) ರಶಿಯದ ಸೋವ್ಹಿಯಟ್ ಸರಕಾರದ ಸರ್ವಾಧಿಕಾರಿ. (೨) ಅಮೇರಿಕೆಯ ಸಂಯುಕ್ತ ಸಂಸ್ಥಾನಗಳ ಎಂದರೆ ಯು. ಎಸ್. ಎ. ದ ಹಿಂದಿನ ಅಧ್ಯಕ್ಷನು. (೩) ರಾಷ್ಟ್ರೀಯ ಚೀನ ಎಂಬ ಪಕ್ಷದ ಮುಂದಾಳು. (೪) ಇಂಗ್ಲಂಡದ ಹಿಂದಿನ ಮುಖ್ಯಮಂತ್ರಿಯು.

**ಪ್ರ:—ಕೆಳಗೆ ಕೆಲವು ವ್ಯಕ್ತಿಗಳ ಹೆಸರುಗಳೂ ಐತಿಹಾಸಿಕ ಸಂಗತಿಗಳೂ ಕೊಟ್ಟಿವೆ. ಆ ಆ ವ್ಯಕ್ತಿಗಳಿಗೆ ಸಂಬಂಧಿಸಿದ ಸಂಗತಿಗಳನ್ನು ಅವರವರ ಹೆಸರುಗಳ ಮುಂದೆ ಬರೆಯಿರಿ. (೧೯೪೦)**

**ವ್ಯಕ್ತಿಗಳ ಹೆಸರು:— ರಿಪನ್, ಹರ್ಷ, ತಾರಾಬಾಯಿ, ವಿಲಿಂಗ್ಡನ್, ಎರಡನೆಯ ಚಾರ್ಲಸ್, ಘೋರೀ ಮಹಮ್ಮದ, ಶಿವಾಜಿ, ಚಾಮುಂಡರಾಯ, ರಾಮರಾಯ, ಬೆಂಟಿಂಕ್.**

ಐ. ಸಂಗತಿಗಳು:—ರಕ್ಕಸ ತಂಗಡಗಿ ಕಾಳಗ, ಸತಿಹೋಗುವದನ್ನು ನಿಲ್ಲಿಸಿದ್ದು, ಶ್ರವಣಬೆಳಗೊಳದ ಗೋಮಟೇಶ್ವರನ ಸ್ಥಾಪನೆ, ಕೊಲ್ಹಾಪುರದಲ್ಲಿ ಹೊಸ ಸಿಂಹಾಸನದ ಸ್ಥಾಪನೆ, ಮುನಿಸಿಪಾಲಿಟಿಗಳ ಸ್ಥಾಪನೆ, ರಿಝರ್ವ ಬ್ಯಾಂಕಿನ ಸ್ಥಾಪನೆಯಾಯಿತು, ಬೆಳವಡಿಯ ಮುತ್ತಿಗೆ, ಮುಂಬಯಿ ದ್ವೀಪವನ್ನು ಕಂಪನಿಯವರು ಕೊಂಡದ್ದು, ಹೂವೆನ್‌ತ್ಸಾಂಗನ ಆಗಮನ, ಸ್ಥಾನೇಶ್ವರದ ಮೊದಲನೆಯ ಯುದ್ಧ.

**ಉ:**— ರಿಪನ್ — ಮ್ಯುನಸಿಪಾಲಿಟಿಗಳ ಸ್ಥಾಪನೆ.
ಹರ್ಷ — ಹೂವೆನ್‌ತ್ಸಾಂಗನ ಆಗಮನ.
ತಾರಾಬಾಯಿ — ಕೊಲ್ಹಾಪುರದಲ್ಲಿ ಹೊಸ ಸಿಂಹಾಸನದ ಸ್ಥಾಪನೆ.
ವಿಲಿಂಗ್ಡನ್ — ರಿಝರ್ವ ಬ್ಯಾಂಕಿನ ಸ್ಥಾಪನೆ.
ಎರಡನೆಯ ಚಾರ್ಲಸ್ — ಮುಂಬಯಿ ದ್ವೀಪವನ್ನು ಕಂಪನಿಯವರು ಕೊಂಡದ್ದು.
ಘೋರಿ ಮುಹಮ್ಮದ — ಸ್ಥಾನೇಶ್ವರದ ಮೊದಲನೆಯ ಯುದ್ಧ
ಶಿವಾಜಿ — ಬೆಳವಡಿಯ ಮುತ್ತಿಗೆ.
ಚಾಮುಂಡರಾಯ — ಶ್ರವಣಬೆಳಗೊಳದ ಗೋಮಟೇಶ್ವರನ ಸ್ಥಾಪನೆ.
ರಾಮರಾಯ — ರಕ್ಕಸ ತಂಗಡಗಿಯ ಕಾಳಗ
ಬೆಂಟಿಂಕ್ — ಸತಿಹೋಗುವದನ್ನು ನಿಲ್ಲಿಸಿದ್ದು.

ಪ್ರ:— ಕೆಳಗೆ ಕೆಲವು ಐತಿಹಾಸಿಕ ಸುಪ್ರಸಿದ್ಧ ಕಾಳಗಗಳ ಮತ್ತು ಅವುಗಳಿಗೆ ಸಂಬಂಧಿಸಿದ ವ್ಯಕ್ತಿಗಳ ಹೆಸರುಗಳು ಕೊಟ್ಟಿವೆ. ಅವುಗಳನ್ನು ಒಂದಕ್ಕೊಂದು ಹೊಂದಿಕೆಯಾಗುವಂತೆ ಬರೆಯಿರಿ. (೧೯೪೯)

ಕಾಳಗಗಳ ಹೆಸರುಗಳು:—ಪಾನಿಪತದ ೨ ನೆಯ ಕಾಳಗ, ಹಳದೀ ಘಟ್ಟದ ಸಂಗರ, ಬಕ್ಸಾರ ಕಾಳಗ, ವಾಂಡಿವಾಷದ ಕಾಳಗ, ನೇಪಾಳದ ಯುದ್ಧ, ದೋಆಬದ ಯುದ್ಧ.

ವ್ಯಕ್ತಿಗಳ ಹೆಸರುಗಳು:— ಅಕ್ಬರಲೋನಿ, ಸರ್ ಆಯರ್ ಕೂಟ್, ಮಹಾಬಂದೂಲ, ಪ್ರತಾಪಸಿಂಹ, ಹೆಕ್ಟರ ಮನ್ರೋ, ಹಿಮೂ.

**ಉ:**— ಪಾನಿಪತದ ೨ ನೆಯ ಕಾಳಗ — ಹಿಮೂ.
ಹಳದೀಘಟ್ಟದ ಸಂಗರ — ಪ್ರತಾಪಸಿಂಹ.
ಬಕ್ಸಾರದ ಕಾಳಗ — ಹೇಕ್ಟರ್ ಮನ್ರೋ.
ವಾಂಡಿವಾಷ ಕಾಳಗ — ಸರ್ ಆಯರ್ ಕೂಟ್.

| | |
|---|---|
| ನೇಪಾಳದ ಯುದ್ಧ | ಅಕ್ಟರಲೋನಿ. |
| ದೋಆಬದ ಯುದ್ಧ | ಮಹಾಬಂದೂಲ. |

ಪ್ರ:— ಕೆಳಗಿನ ಮಾತುಗಳನ್ನು ಯಾರು ಯಾವ ಪ್ರಸಂಗದಲ್ಲಿ ಆಡಿರುವರು?

(೧) ಕುರಾಣದ ಸಾಕ್ಷಿಯಾಗಿ ಹೇಳುವೆನು; ಇಂದಿನಿಂದ ನಾನು ಸರಾಯಿಯನ್ನು ಕುಡಿಯುವದಿಲ್ಲ.

(೨) ಸಿಯಾ ಪಂಥವನ್ನು ಸ್ವೀಕರಿಸಿದರೆ ನಿನಗೆ ನೆರವು ಸಿಗುವದು.

(೩) ನನ್ನ ನೆನಪಿಗಾಗಿ ಒಂದು ಸುಂದರವಾದ ಮಂದಿರವನ್ನು ಕಟ್ಟಿಸು.

(೪) ಕೊಲೆಕಡಿಕ ಪೇಶ್ವೆಯ ರಾಜ್ಯದಲ್ಲಿ ನಿಂತು ನೀರು ಕುಡಿಯಲು ಸಹ ನನ್ನ ಮನಸ್ಸಿಲ್ಲ.

ಉ:— (೧) ಬಾಬರನು ಸಿಕ್ರಿ-ಯುದ್ಧದ ಪ್ರಸಂಗದಲ್ಲಿ

(೨) ಹುಮಾಯೂನನು ನೆರವನ್ನು ಕೋರಿದಾಗ ಇರಾಣದ ಬಾದಶಹನು ಅಂದ ಮಾತು.

(೩) ಮುಮತಾಜ ಬೇಗಮಳು ಸಾಯುವಾಗ ಅಂದ ಮಾತು.

(೪) ಪ್ರಭುಣೆ ರಾಮಶಾಸ್ತ್ರಿಯು ನಾರಾಯಣರಾಯನ ಕೊಲೆಗೆ ಕಾರಣವಾದ ರಘುನಾಥರಾಯನನ್ನು ಉದ್ದೇಶಿಸಿ ಆಡಿದ ಮಾತು.

ಪ್ರ:— ಕೆಳಗೆ ಕೆಲವು ಐತಿಹಾಸಿಕ ಸಂಗತಿಗಳೂ ಇಸವಿಗಳೂ ಕೊಟ್ಟಿವೆ. ಅವುಗಳನ್ನು ಹೊಂದಿಸಿ ಕಾಲಾನುಕ್ರಮದಿಂದ ಬರೆಯಿರಿ. (೧೯೫೦)

ಸಂಗತಿಗಳು:— ಹಿಂದುಸ್ಥಾನದ ಸ್ವಾತಂತ್ರ್ಯದ ಮೊದಲನೆಯ ಯುದ್ಧ; ಮುಜಫರಪುರದಲ್ಲಿ ಮೊದಲನೆಯ ಬಾಂಬು ಒಗೆಯಲ್ಪಟ್ಟಿತು; ಕಾಯದೆಭಂಗ ಚಳವಳಿ; ಬಂಗಾಲದ ವಿಭಜನೆ; ಕಿತ್ತೂರ ಬಂಡಾಯ; ಪೇಶ್ವೆರಾಜ್ಯದ ಕೊನೆ; ವೆಲ್ಲೂರ ದಂಗೆ; ಭಾರತವು ಸ್ವತಂತ್ರವಾದುದು; ಹೊಸ ಸಂಯುಕ್ತ ರಾಜ್ಯ ಪದ್ಧತಿಯ ಪ್ರಾರಂಭ; ಶ್ರೀರಂಗ ಪಟ್ಟಣದ ಮುತ್ತಿಗೆ.

ಇಸವಿಗಳು :— ೧೮೧೮, ೧೮೦೬, ೧೮೨೪, ೧೯೦೫, ೧೯೩೦, ೧೯೩೭, ೧೯೪೭, ೧೮೫೭, ೧೯೦೮, ೧೭೯೯.

| | |
|---|---|
| ಉ:— ಶ್ರೀರಂಗ ಪಟ್ಟಣದ ಮುತ್ತಿಗೆ | ೧೭೯೯ |
| ವೆಲ್ಲೂರ ದಂಗೆ | ೧೮೦೬ |
| ಪೇಶ್ವೆರಾಜ್ಯದ ಕೊನೆ | ೧೮೧೮ |

ಕಿತ್ತೂರ ಬಂಡಾಯ ೧೮೨೪
ಹಿಂದುಸ್ಥಾನದ ಸ್ವಾತಂತ್ರ್ಯದ ಮೊದಲನೆಯ ಯುದ್ಧ ೧೮೫೭
ಬಂಗಾಲದ ವಿಭಜನೆ ೧೯೦೫
ಮುಜಫರಪುರದಲ್ಲಿ ಮೊದಲನೆಯ ಬಾಂಬು ಒಗೆಯಲ್ಪಟ್ಟಿತು. ೧೯೦೮
ಕಾಯದೆಭಂಗ ಚಳವಳಿ ೧೯೩೦
ಹೊಸ ಸಂಯುಕ್ತ ರಾಜ್ಯ ಪದ್ಧತಿಯ ಪ್ರಾರಂಭ ೧೯೩೭
ಭಾರತವು ಸ್ವತಂತ್ರವಾದುದು ೧೯೪೭

ಪ್ರ:— ಹೋಮಗಾರ್ಡ್ಸ ಎಂದರೇನು? ಅವರನ್ನು ಯಾಕೆ ನೇಮಿಸಿರುವರು? (೧೯೫೦)

ಪ್ರ:— ಕೆಳಗೆ ಹೇಳಿದ ವ್ಯಕ್ತಿಗಳ ಹೆಸರುಗಳನ್ನು ಕಾಲಾನುಕ್ರಮದಂತೆ ಬರೆಯಿರಿ.

ಅಕಬರ, ಶೇರಶಾಹ, ನಾನಾ ಫಡಣವೀಸ, ಲೋ. ಟಿಳಕ, ಕ್ಲೈವ, ಔರಂಗಜೇಬ, ಕ್ಯಾನಿಂಗ, ವೆಲ್ಲಸ್ಲಿ, ನಾದಿರಶಾಹ, ಶಿವಾಜಿ.

ಉ:—(೧) ಶೇರಶಾಹ, (೨) ಅಕಬರ (೩) ಔರಂಗಜೇಬ (೪) ಶಿವಾಜಿ (೫) ನಾದಿರಶಾಹ (೬) ಕ್ಲೈವ (೭) ನಾನಾಫಡಣವೀಸ (೮) ವೆಲ್ಲಸ್ಲಿ (೯) ಕ್ಯಾನಿಂಗ (೧೦) ಲೋ. ಟಿಳಕ.

ಪ್ರ:—ಕೆಳಗೆ ಬರೆದ ಮಾತುಗಳನ್ನು ಯಾರು ಯಾವ ಪ್ರಸಂಗದಲ್ಲಿ ಆಡಿರುವರು?

(೧) ಶಿಯಾ ಪಂಥವನ್ನು ಸ್ವೀಕರಿಸಿದರೆ ನನ್ನ ನೆರವು ನಿನಗೆ ದೊರೆಯುವದು.
(೨) ನನ್ನ ನೆನಪಿಗಾಗಿ ಒಂದು ಸುಂದರವಾದ ಕಟ್ಟಡವನ್ನು ಕಟ್ಟಿಸಬೇಕು.
(೩) ಸ್ವರಾಜ್ಯವು ನನ್ನ ಜನ್ಮಸಿದ್ಧವಾದ ಹಕ್ಕು; ಅದನ್ನು ನಾನು ದೊರಕಿಸಿಯೇ ತೀರುವೆನು.
(೪) ಸಂಭಾಜಿಯು ತಪ್ಪಿಗಾಗಿ ನೀವು ಮರಾಠರ ರಾಜ್ಯಕ್ಕೆ ಕೇಡನ್ನು ಬಗೆಯುವದು ಸರಿಯಾಗುವದಿಲ್ಲ.
(೫) ಇವನು ಎಲ್ಲಿ ರಾಜ್ಯವನ್ನು ಕಳೆದುಕೊಳ್ಳುವನೋ!

ಉ:— (೧) ಇರಾಣದ ಶಾಹನು. ಹುಮಾಯೂನನು ನೆರವಿನ ಅಪೇಕ್ಷೆಯಿಂದ ಶಾಹನನ್ನು ಕಂಡಾಗ.

(೨) ಮುಮತಾಜ ಮಹಾಲಳು. ಸಾಯುವ ಮೊದಲು.

(೩) ಲೋ. ಟಿಳಕರು. ರಾಜದ್ರೋಹದ ಆರೋಪದ ವಿಚಾರಣೆಯ ಪ್ರಸಂಗದಲ್ಲಿ.

(೪) ಮರಾಠಾ ಸರದಾರ ಖಂಡೋಬಲ್ಲಾಳನು. ಜಿಂಜಿಯ ಕೋಟೆಯನ್ನು ಮೊಗಲರು ಮುತ್ತಿದಾಗ.

(೫) ಹೈದರನು. ತನ್ನ ಮಗ ಟೀಪುವಿನ ಸ್ವಭಾವದೋಷಗಳನ್ನು ನೆನೆದಾಗ.

**ಪ್ರ:— ಮುಂದೆ ಬರೆದ ಸಂಗತಿಗಳ ಆವಶ್ಯಕತೆಯನ್ನು ಸ್ಪಷ್ಟಗೊಳಿಸಿರಿ. ಅಸ್ಪೃಶ್ಯತೆಯ ನಿವಾರಣೆ, ಸಾಕ್ಷರತೆಯ ಪ್ರಸಾರ, ಗ್ರಾಮೋದ್ಯೋಗ, ಗ್ರಾಮ ಪಂಚಾಯತಿ.**

**ಉ :— (೧) ಅಸ್ಪೃಶ್ಯತಾನಿವಾರಣೆ:—** ಅಸ್ಪೃಶ್ಯತೆಯನ್ನು ಇರಿಸು ವದು ಉಳಿದ ಭಾರತೀಯರಿಗೆ ನಾಚಿಕೆಯ ಮಾತು (೨) ರಾಷ್ಟ್ರದ ಒಂದು ಅಂಗವನ್ನು ಬಲಗುಂದಿಸುವದು ರಾಷ್ಟ್ರಕ್ಕೆ ಅಪಾಯಕರವು. (೩) ಎಲ್ಲರಲ್ಲಿಯೂ ರಾಷ್ಟ್ರದ ಬಗೆಗೆ ಉತ್ಕಟವಾದ ಅಭಿಮಾನವು ಉಂಟಾಗಲು, ಎಲ್ಲರಿಗೂ ಸರಿ ಯಾದ ಪರಿಸ್ಥಿತಿಯನ್ನು ಒದಗಿಸಿ ಕೊಡಲೇಬೇಕು. (೪) ವಿಧರ್ಮಿಗಳ ಧರ್ಮ ಪ್ರಸಾರಕ್ಕೆ ನಾವೇ ಆಸ್ಪದ ಮಾಡಿಕೊಟ್ಟಂತಾಗುತ್ತದೆ; ಎಂದರೆ ನಮ್ಮ ಕಾಲ ಮೇಲೆ ನಾವೇ ಕಲ್ಲು ಹಾಕಿಕೊಂಡಂತಾಗುತ್ತದೆ. ಆದದರಿಂದ ಅಸ್ಪೃಶ್ಯತೆ ಯನ್ನು ಎಲ್ಲರೂ ಮೊದಲು ಮನಸ್ಸಿನಿಂದ ಕಿತ್ತಿ ಹಾಕಬೇಕು.

**ಸಾಕ್ಷರತೆಯ ಪ್ರಸಾರ :** — (೧) ಜನರು ಓದು-ಬರೆಹ ಬಲ್ಲವರಾಗಿ ದ್ದರೆ ಅವರಿಗೆ ನಾಗರಿಕತೆಯ ಶಿಕ್ಷಣ ಕೊಡಲು ಅನುಕೂಲವಾಗುತ್ತದೆ. (೨) ಲೋಕರಾಜ್ಯದ ಕಾರಭಾರವನ್ನು ಸಾಗಿಸುವದಕ್ಕೆ ತಕ್ಕ ಹುರಿಯಾಳುಗಳನ್ನು ಆರಿಸಿಕೊಡಲು ಮತದಾರರು ರಾಷ್ಟ್ರದ ಪರಿಸ್ಥಿತಿಯ ಸರಿಯಾದ ತಿಳಿವಳಿಕೆ ಯುಳ್ಳವರಿರಬೇಕು. ಓದು-ಬರೆಹ ಕೂಡ ಅರಿಯದ ಜನರು ಹುರಿಯಾಳುಗಳ ಜಾಹೀರಾತುಗಳಿಗೂ ಅವರ ಪ್ರಚಾರಕರ ಮಾತಿಗೂ ಬಲಿಬೀಳುವರು. ಅಯೋಗ್ಯ ಜನರು ಆರಿಸಲ್ಪಟ್ಟು ಆಡಳಿತವು ಕೆಟ್ಟುಹೋಗುವದು. ಆದದರಿಂದ ಸಾಕ್ಷರತೆಯು ಅವಶ್ಯವು. (೩) ಸಾಕ್ಷರಿಗಳು ತಮ್ಮ ತಮ್ಮ ಮನೆತನ, ಉದ್ಯೋಗ, ವ್ಯವಹಾರ, ಪ್ರವಾಸ ಮೊದಲಾದವನ್ನು ನಿರಕ್ಷರಿಗಳಿಗಿಂತ ಹೆಚ್ಚು ಜಾಣತನದಿಂದ ತೊಂದರೆಯಿಲ್ಲದಂತೆ ಸಾಗಿಸಲು ಸಮರ್ಥರಾಗುವರು.

**ಗ್ರಾಮೋದ್ಯೋಗ:—** ಒಕ್ಕಲುತನದ ಉದ್ಯೋಗದಲ್ಲಿ ವರ್ಷದಲ್ಲಿ ಕೆಲವು ದಿನ ತೆರಪಿಲ್ಲದೆ ದುಡಿಯಬೇಕಾಗುವದು. ಕೆಲವು ದಿನ ಅರ್ಧ-

ಮರ್ಥ ಕೆಲಸವಿರುವದು, ಕೆಲವು ದಿನ ಕೆಲಸವೇ ಇರುವದಿಲ್ಲ. ಆದದರಿಂದ ತೆರವು ಇರುವಾಗ ಗಂಡಸರಿಗೂ ಹೆಣ್ಣುಮಕ್ಕಳಿಗೂ ಅನುಕೂಲವಾದ ಉದ್ಯೋಗ-ಕೈಗಾರಿಕೆ ಮುಂತಾದವು ಅವಶ್ಯವಾಗಿರುತ್ತವೆ. ಅವಿಲ್ಲದ್ದರಿಂದ ಅಷ್ಟು ಮಟ್ಟಿಗೆ ಉತ್ಪನ್ನವು ಕಡಿಮೆಯಾಗುವದು. ಬೆಳೆಗೇಡಾದ ಕಾಲಕ್ಕಂತೂ ಹಳ್ಳಿಯ ಒಕ್ಕಲಿಗರ ಸ್ಥಿತಿಯು ಶೋಚನೀಯವಾಗುವದು. ಯಂತ್ರಗಾರಿಕೆಯ ಈಗಿನ ಕಾಲದಲ್ಲಿ ವಿದೇಶಗಳಿಂದ ಬರುವ ಸರಕುಗಳನ್ನು ಪೇಟೆಗಳಿಂದ ಕೊಂಡೊಯ್ಯುವ ರೂಢಿಯು ಹೆಚ್ಚಾಗಿದೆ. ಇದು ೧೦೦ ಕ್ಕೆ ೭೫ ರಷ್ಟು ಹಳ್ಳಿಗರ ಜನಸಂಖ್ಯೆ ಇರುವ ನಮ್ಮ ದೇಶಕ್ಕೆ ಅತ್ಯಂತ ಹಾನಿಕರವು. ಆದದರಿಂದ ಉಪಯುಕ್ತವಾದ ಸುಧಾರಿಸಿದ ಗ್ರಾಮೋದ್ಯೋಗಗಳು ಗ್ರಾಮಗಳಲ್ಲಿ ನಡೆಯುವದು ಅವಶ್ಯವಾಗಿದೆ.

**ಗ್ರಾಮಪಂಚಾಯತಿ:**— ನಮ್ಮ ದೇಶವು ಗ್ರಾಮಗಳ ದೇಶವು; ಎಂದರೆ ೧೦೦ ಕ್ಕೆ ೭೫ ರಷ್ಟು ಜನಸಂಖ್ಯೆಯು ಹಳ್ಳಿಗಳಲ್ಲಿಯೇ ವಾಸಿಸುವದು. ಈ ಹಳ್ಳಿಗಳು ಸುಧಾರಿಸಿದರೆ ಮಾತ್ರ ದೇಶದ ಸುಧಾರಣೆಯಾದಂತಾಗುವದು. ಕೇವಲ ಪಟ್ಟಣಗಳ ಸುಧಾರಣೆಯಿಂದ ಸುಧಾರಣೆಯ ಕಾರ್ಯವು ಸಫಲವಾಗಲಾರದು. ಅಂತೆಯೆ ಗ್ರಾಮಗಳ ಸುಧಾರಣೆಯ ಕಾರ್ಯವನ್ನು ಈಗಿನ ಜನತಾ ಸರಕಾರವು ಕೈಕೊಂಡಿದೆ. ಗ್ರಾಮಗಳಲ್ಲಿ ಗ್ರಾಮಪಂಚಾಯತಿ ಎಂಬ ಸಂಸ್ಥೆಯನ್ನು ಸ್ಥಾಪಿಸಿ ಆ ಸಂಸ್ಥೆಯ ಮೂಲಕ ಗ್ರಾಮದ ಜನರೇ ತಮ್ಮ ಗ್ರಾಮದ ಹಿತದ ಕೆಲಸಗಳನ್ನು ಮಾಡಿಕೊಳ್ಳುವದು; ಸರಕಾರದ ನೆರವಿನಿಂದ ಜರುಗುವ ಕೆಲಸಗಳಿಗೆ ನೆರವಾಗಿ ಅವುಗಳಿಂದ ತಮ್ಮ ಗ್ರಾಮಕ್ಕೆ ಸರಿಯಾದ ಉಪಯೋಗವಾಗುವಂತೆ ನೋಡಿಕೊಳ್ಳುವದು; ರಾಷ್ಟ್ರದ ಉನ್ನತಿಯ ದೃಷ್ಟಿಯಿಂದ ಗ್ರಾಮವು ಯೋಗ್ಯನಾಗರಿಕರುಳ್ಳದ್ದಿರುವಂತೆ ಯತ್ನಿಸುವದು; ಇವು ಈ ಗ್ರಾಮಪಂಚಾಯತಿಯಿಂದ ಆಗುವ ಕಾರ್ಯಗಳಾಗಿವೆ. ಆದದರಿಂದ ಗ್ರಾಮಪಂಚಾಯತಿಗಳು ಅತ್ಯವಶ್ಯವಾದವುಗಳೆಂದು ಸ್ಪಷ್ಟವಾಗುವದು.

**ಪ್ರ:— ಗ್ರಾಮಪಂಚಾಯತಿಯ ಘಟನೆ, ಕೆಲಸಗಳು, ಉತ್ಪನ್ನ ಇವುಗಳ ಸ್ವರೂಪವನ್ನು ವಿವರಿಸಿರಿ.**

**ಉ:— ಗ್ರಾಮಪಂಚಾಯತಿಯ ಘಟನೆ**—ಗ್ರಾಮದ ಜನರ ಮತದಾನದಿಂದ ಗೊತ್ತಾದಷ್ಟು ಸದಸ್ಯರನ್ನು ಆರಿಸುವರು. ಆರಿಸಿಬಂದ ಸದಸ್ಯರು ತಮ್ಮೊಳಗಿನ ಒಬ್ಬನನ್ನು ಮುಖ್ಯನನ್ನಾಗಿ ಆರಿಸುವರು. ಆ ಮುಖ್ಯನಿಗೆ ಸರ

ಪಂಚ ಎಂಬ ಹೆಸರು. ಈ ಸರಸಂಚನು ಉಳಿದ ಸದಸ್ಯರ ಸಹಾಯದಿಂದ ಗ್ರಾಮಪಂಚಾಯತಿಯ ಕೆಲಸಗಳನ್ನು ಸಾಗಿಸುವನು. ಲೆಕ್ಕಪತ್ರಗಳ ಕೆಲಸಕ್ಕಾಗಿ ಸೆಕ್ರೆಟರಿ ಎಂಬ ನೌಕರನಿರುವನು. ಗ್ರಾಮಪಂಚಾಯತಿಯ ಸದಸ್ಯರು ಕೂಡಿ ತಮ್ಮೊಳಗಿನ ಐಯ್ದು ಜನರನ್ನು ಆರಿಸಿ ಒಂದು ನ್ಯಾಯಮಂಡಲವನ್ನು ರಚಿಸಿಕೊಳ್ಳುವರು.

**ಗ್ರಾಮಪಂಚಾಯತಿಯ ಕೆಲಸಗಳು:** — ಊರ ಸ್ವಚ್ಛತೆ, ನೀರಿನ ಪೂರೈಕೆ, ದಾರಿಗಳ ಸುಧಾರಣೆ, ರೋಗಗಳನ್ನು ತಡೆಯುವ ಮತ್ತು ಕಳೆಯುವ ಉಪಾಯಗಳನ್ನು ಕೈಕೊಳ್ಳುವದು, ದೀಪ ಹಚ್ಚಿಸುವದು, ಸಂತೆ—ಪೇಟೆ—ಜಾತ್ರೆಗಳ ವ್ಯವಸ್ಥೆಯನ್ನು ಕಾಯ್ದುಕೊಳ್ಳುವದು, ಇವು ಗ್ರಾಮಪಂಚಾತಿಯ ಕೆಲಸಗಳಾಗಿವೆ.

**ಗ್ರಾ. ಪಂ. ಉತ್ಪನ್ನ:**—ಊರ ತೆರಿಗೆಯ ೧೦೦ ರಲ್ಲಿ ೧೫ ರಷ್ಟು ಹಣವು ಗ್ರಾಮಪಂಚಾಯತಿಗಳಿಗೆ ದೊರೆಯುವದು. ಜಿಲ್ಹೆಯ ಲೋಕಲ್ ಬೋರ್ಡು ಗಳಿಂದ ಸಹಾಯಧನವು ಸಿಗುವದು. ಕೊಂಡವಾಡೆಯ ಉತ್ಪನ್ನ, ಮನೆಪಟ್ಟಿ, ಸರಕುಗಳ ಮೇಲಿನ ಕರ, ಜಾತ್ರೆಗಳ ಕಾಲದ ತಲೆಪಟ್ಟಿ ಇವುಗಳ ಹಣವೂ ಕೈಗೆ ಬರುವದು. ಇವು ಗ್ರಾಮಪಂಚಾಯತಿಗಳ ಉತ್ಪನ್ನದ ಮಾರ್ಗಗಳಾಗಿವೆ.

**ಪ್ರ:—ಲೋಕಲ್ ಬೋರ್ಡುಗಳ ಘಟನೆ, ಕಾರ್ಯ, ಉತ್ಪನ್ನ ಇವುಗಳ ಬಗೆಗೆ ಟಿಪ್ಪಣಿಗಳನ್ನು ಬರೆಯಿರಿ.**

**ಉ:— ಲೋಕಲ್ ಬೋರ್ಡಿನ ಘಟನೆ** —ಜಿಲ್ಹೆಯ ಲೋಕಸಂಖ್ಯೆಗೆ ತಕ್ಕಂತೆ, ೩೫ ರಿಂದ ೫೦ ರ ವರೆಗೆ ಸದಸ್ಯರು ಪ್ರೌಢಮತದಾನ ಪದ್ಧತಿಯಿಂದ ಆರಿಸಲ್ಪಡುವರು. ಒಮ್ಮೆ ಆರಿಸಿಬಂದ ಸದಸ್ಯರು ಮೂರು ವರ್ಷಗಳ ವರೆಗೆ ಕೆಲಸ ನೋಡುವರು. ಈ ಸದಸ್ಯರು ತಮ್ಮೊಳಗಿನ ಒಬ್ಬನನ್ನು ಪ್ರೆಸಿಡೆಂಟನನ್ನಾಗಿ, ಇನ್ನೊಬ್ಬನನ್ನು ವ್ಹಾಯಿಸ್ ಪ್ರೆಸಿಡೆಂಟನನ್ನಾಗಿ ಆರಿಸುವರು. ಅಲ್ಲದೆ ಬೇರೆ ಬೇರೆ ಕೆಲಸಗಳಿಗಾಗಿ ಒಂದೊಂದು ಕಮಿಟಿಯನ್ನು ಗೊತ್ತು ಮಾಡುವರು. ಜಿಲ್ಹಾ ಸ್ಕೂಲ ಬೋರ್ಡು, ಸ್ಟ್ಯಾಂಡಿಂಗ ಕಮಿಟಿ, ಬಜೆಟ್ ಕಮಿಟಿ, ಆರೋಗ್ಯ ಕಮಿಟಿ ಮುಂತಾದ ಕಮಿಟಿಗಳನ್ನು ರಚಿಸಿಕೊಳ್ಳುವರು, ಪ್ರತಿಯೊಂದು ಕಮಿಟಿಯ ಮುಖ್ಯನಿಗೆ ಚೇಅರಮನ್ ಎಂಬ ಹೆಸರು. ಎಲ್ಲ ಸದಸ್ಯರು ಸಂಬಳವಿಲ್ಲದೆ ಕೆಲಸ ಮಾಡುವರು. ಅವರಿಗೆ ಭತ್ತೆಯು ಮಾತ್ರ ದೊರೆಯುತ್ತದೆ.

ಚೀಫ ಆಫೀಸರ, ಹೆಲ್ಥ ಆಫೀಸರ, ಇಂಜಿನಿಯರ ಮೊದಲಾದ ಮುಖ್ಯ ಅಧಿಕಾರಿಗಳೂ ಉಳಿದ ನೌಕರರೂ ಬೋರ್ಡಿನ ಕೆಲಸವನ್ನು ಮಾಡುವರು.

**ಲೋ. ಬೋರ್ಡಿನ ಕೆಲಸಗಳು:**— (೧) ಜಿಲ್ಹೆಯ ಪ್ರಾಥಮಿಕ ಶಿಕ್ಷಣದ ವ್ಯವಸ್ಥೆಯನ್ನಿಡುವದು. (೨) ಜಿಲ್ಹೆಯಲ್ಲಿ ಕೆರೆಬಾವಿಗಳ ಮೂಲಕ ನೀರಿನ ಪೂರೈಕೆಯನ್ನು ಮಾಡುವದು. (೩) ಜಿಲ್ಹೆಯ ಆರೋಗ್ಯರಕ್ಷಣೆಯನ್ನು ಮಾಡುವದು. (೪) ಮಾರ್ಗ, ಧರ್ಮಶಾಲೆ, ಬಾವಿ, ಕೆರೆ, ಕಾಲುವೆ, ಪೂಲು ಇವುಗಳ ದುರಸ್ತಿ ಮತ್ತು ಹೊಸ ಕಟ್ಟಡಗಳನ್ನು ಕಟ್ಟಿಸುವದು. (೫) ಮಾರ್ಗಗಳ ಎಡ-ಬಲಗಳಲ್ಲಿ ಗಿಡಗಳನ್ನು ಹಚ್ಚಿಸುವದು; ಅವುಗಳನ್ನು ರಕ್ಷಿಸುವದು.

**ಲೋ. ಬೋರ್ಡಿನ ಉತ್ಪನ್ನ:**— (೧) ಹೊಲದ ತೆರಿಗೆಯ ಮೇಲೆ ರೂಪಾಯಿಗೆ ಮೂರು ಆಣೆಗಳಂತೆ ಜಮೆಯಾಗುವ ಲೋಕಲ್ ಫಂಡಿನ ಹಣವು. (೨) ಸರಕಾರದಿಂದ ಶಿಕ್ಷಣಕಾರ್ಯಕ್ಕಾಗಿ ದೊರೆಯುವ ಸಹಾಯ ಧನ (ಗ್ರ್ಯಾಂಟು). (೩) ಜಕಾತಿಯ ಉತ್ಪನ್ನ (೪) ದೊಡ್ಡ ಜಾತ್ರೆಗಳು, ದವಾಖಾನೆಗಳು, ನಾವುಗಳು ಇವುಗಳ ಮೂಲಕ ಬರುವ ಹಣ. (೫) ಶಾಲೆಗಳ ವಿದ್ಯಾರ್ಥಿಗಳಿಂದ ಬರುವ ಫೀ ಹಣ. ಇವು ಲೋ. ಬೋರ್ಡಿನ ಉತ್ಪನ್ನದ ಬಾಬುಗಳಾಗಿವೆ.

**ಪ್ರ:— ಮುನಿಸಿಪಾಲಿಟಿಗಳ ಕಾರ್ಯ, ರಚನೆ, ಉತ್ಪನ್ನ ಇವುಗಳ ಬಗೆಗೆ ಟಿಪ್ಪಣಿಗಳನ್ನು ಬರೆಯಿರಿ.**

**ಉ:**—ಪಟ್ಟಣಗಳ ಮಾರ್ಗಗಳು, ಆರೋಗ್ಯ, ಶಿಕ್ಷಣ, ಪೇಟೆಗಳ ವ್ಯವಸ್ಥೆ ಮುಂತಾದವು ಮುನಿಸಿಪಾಲಿಟಿಯ ಕೆಲಸಗಳು. ಊರ ಜನಸಂಖ್ಯೆಗೆ ತಕ್ಕಂತೆ ಸದಸ್ಯರ ಸಂಖ್ಯೆಯು ಗೊತ್ತುಮಾಡಲ್ಪಟ್ಟಿರುವದು. ಈ ಸದಸ್ಯರು ಆ ಪಟ್ಟಣದ ಪ್ರೌಢಮತದಾರರಿಂದ ಆರಿಸಲ್ಪಡುವರು. ಈ ಸದಸ್ಯರು ತಮ್ಮ ಮುಖ್ಯಸ್ಥನನ್ನು ಎಂದರೆ ಪ್ರೆಸಿಡೆಂಟನನ್ನು ಆರಿಸಿಕೊಳ್ಳುವರು. ಮತ್ತು ಸ್ಟ್ಯಾಂಡಿಂಗ ಕಮಿಟಿ, ಸ್ಕೂಲ ಕಮಿಟಿ, ಆರೋಗ್ಯ ಕಮಿಟಿ, ಇವುಗಳನ್ನು ರಚಿಸಿಕೊಳ್ಳುವರು. ಈ ಕಮಿಟಿಗಳ ಮುಖ್ಯಸ್ಥನಿಗೆ ಚೇಅರಮನ್ ಎನ್ನುವರು. ಮುಸಿನಿಪಾಲಿಟಿಯ ಸದಸ್ಯರಿಗೆ ಸಂಬಳವಿರುವದಿಲ್ಲ. ಸಂಬಳದ ಮುಖ್ಯ ಅಧಿಕಾರಿಯು ಚೀಫ್ ಆಫೀಸರನು. ಮನೆಪಟ್ಟಿ, ಕಸಪಟ್ಟಿ, ಭಂಗಿಪಟ್ಟಿ, ಅಂಗಡಿ

ಗಳ ಮೇಲಿನ ಪಟ್ಟಿ, ಸಂತೆಯು ಕಾಲದಲ್ಲಿ ವಸೂಲಾದ ಬಯಲ ಅಂಗಡಿಗಳ ಮೇಲಿನ ಪಟ್ಟಿ, ಸರಕುಗಳ ಮತ್ತು ವಾಹನಗಳ ಮೇಲಿನ ಜಕಾತಿ, ಸರಕಾರಿ ಗ್ರ್ಯಾಂಟು ಇವುಗಳಿಂದ ಮುನಿಸಿಪಾಲಿಟಿಗೆ ಹಣವು ದೊರೆಯುತ್ತದೆ.

**ಪ್ರ:— ನಾಗರಿಕನ ಕರ್ತವ್ಯಗಳೂ ಹಕ್ಕುಗಳೂ ಯಾವವು?**

**ಉ:**— ನಾಗರಿಕನು ರಾಷ್ಟ್ರದ ಘಟಕವಾಗಿದ್ದಾನೆ. ಶಾಸನ ಸಂಸ್ಥೆಯು ಸುಸೂತ್ರವಾಗಿ ನಡೆಯಲು ನಾಗರಿಕರ ಸಹಕಾರವು ಅತ್ಯವಶ್ಯವು. ನಾಗರಿಕನಿಗೆ ಕೆಲವು ಹಕ್ಕುಗಳಿರುವಂತೆ ಅವನು ಅವಶ್ಯವಾಗಿ ಕೆಲವು ಕರ್ತವ್ಯಗಳನ್ನು ಮಾಡಲೇ ಬೇಕಾಗುತ್ತದೆ ನಾಗರಿಕನಿಗೆ ಇರುವ ಹಕ್ಕುಗಳು—(೧) ನಾಗರಿಕನ ಜೀವಿತ ವಿತ್ತಗಳ ರಕ್ಷಣೆಯನ್ನು ಮಾಡುವ ಹೊಣೆಯು ಸರಕಾರದ ಮೇಲಿದೆ. (೨) ನಾಗರಿಕನು ಶಿಕ್ಷಣವನ್ನು ಪಡೆಯಲು ಮತ್ತು ಆಸ್ತಿಯನ್ನು ಗಳಿಸಲು ಯೋಗ್ಯನಾಗಿರುವನು. (೩) ಅನ್ಯಾಯದ ವಿರುದ್ಧವಾಗಿ ಹೋರಾಡಿ ನ್ಯಾಯವನ್ನು ಪಡೆಯುವದು. (೪) ಆತ್ಮರಕ್ಷಣೆಯ ವ್ಯವಸ್ಥೆಯನ್ನು ಮಾಡಿಕೊಳ್ಳುವದು. (೫) ನಾಗರಿಕನು ಆಚಾರ, ವಿಚಾರ, ಉಚ್ಚಾರಗಳಿಂದ ಸ್ವತಂತ್ರನು. ಎಂದರೆ ಅವನು ಮನಸೊಪ್ಪಿದ ರೀತಿಯಲ್ಲಿ ಆಚರಣೆಯನ್ನಿಡಬಹುದು; ತನ್ನ ಮತವನ್ನು ಮುದ್ರಿಸಿ ಪ್ರಕಟಿಸಲು, ಸಭೆಗೂಡಿಸಿ ಜನರಿಗೆ ತಿಳಿಸಲು ಹಕ್ಕುಳ್ಳವನಿರುವನು. (೬) ಸದಸ್ಯನಾಗಿ ಆರಿಸಲ್ಪಡಬೇಕೆಂದು ಹುರಿಯಾಳಾಗಿ ನಿಲ್ಲಲು ಇಲ್ಲವೆ, ನಿಂತ ಹುರಿಯಾಳುಗಳಲ್ಲಿ ತನಗೆ ಬೇಕಾದ ಹುರಿಯಾಳಿಗೆ ಮತಕೊಡಲು ಬರುವದು.

**ಪ್ರ:— ಘಟನಾ ಪರಿಷತ್ತಿನ ಬಗೆಗೆ ವಿವರಣೆ ಬರೆಯಿರಿ.**

**ಉ:**— ಸ್ವತಂತ್ರ ಭಾರತ ಘಟನೆಯನ್ನು ತಯಾರಿಸುವದಕ್ಕಾಗಿ ಬಾಬೂ ರಾಜೇಂದ್ರ ಪ್ರಸಾದರ ಅಧ್ಯಕ್ಷತೆಯಲ್ಲಿ ಘಟನಾ ಪರಿಷತ್ತು ಕೂಡಿತ್ತು. ಈ ಪರಿಷತ್ತಿನವರು ಘಟನೆಯ ಕರಡನ್ನು ತಯಾರಿಸಲು ಡ್ಯಾ. ಅಂಬೇಡಕರರ ಅಧ್ಯಕ್ಷತೆಯಲ್ಲಿ ಒಂದು ಘಟನಾ ಸಮಿತಿಯನ್ನು ನಿಯಮಿಸಿದರು. ಈ ಸಮಿತಿಯು ೧೪೧ ದಿವಸಗಳ ವರೆಗೆ ಪರಿಶ್ರಮಗೊಂಡು ಘಟನೆಯ ಕರಡನ್ನು ತಯಾರಿಸಿತು. ಈ ಸಮಿತಿಯಲ್ಲಿ ಪ್ರಸಿದ್ಧರಾದ ಬಹುಜನ ಘಟನಾ ತಜ್ಞರು ದುಡಿದರು. ಬಳಿಕ ಘಟನಾ ಪರಿಷತ್ತಿನವರು ಈ ಕರಡಿನಲ್ಲಿ ಬಹುಮತದಿಂದ ಅವಶ್ಯವೆನಿಸಿದ ಹೆಚ್ಚು-ಕಡಿಮೆಗಳನ್ನು ಮಾಡಿ, ಭಾರತದ ಘಟನೆಯನ್ನು ಸ್ವೀಕರಿಸಿದರು. ಈ ಕಾರ್ಯಕ್ಕೆ ೨ ವರ್ಷ ೧೧ ತಿಂಗಳು ೧೭ ದಿನಗಳ ಅವಧಿಯು

ಬೇಕಾಯಿತು. ಈ ಘಟನೆಯಂತೆ ದಿನಾಂಕ ೨೬ ಜನವರಿ ೧೯೫೦ ರಿಂದ ಭಾರತದ ಕಾರಭಾರವು ನಡೆಯಹತ್ತಿತು.

**ಪ್ರ:— ಭಾರತದ ರಾಜ್ಯ ಘಟನೆಯಂತೆ ಭಾರತದಲ್ಲಿ ಎಷ್ಟು ವಿಭಾಗಗಳು ಮಾಡಲ್ಪಟ್ಟಿವೆ? ಆ ವಿಭಾಗಗಳು ಯಾವವು? ಮತ್ತು ಪ್ರತಿಯೊಂದು ವಿಭಾಗದಲ್ಲಿ ಸೇರಿದ ಘಟಕರಾಜ್ಯಗಳಾವವು?**

**ಉ:—** ಭಾರತ ರಾಜ್ಯ-ಘಟನೆಯಂತೆ ಭಾರತದಲ್ಲಿ ಅ, ಬ, ಕ, ಡ ಎಂದು ನಾಲ್ಕು ವಿಭಾಗಗಳು ಮಾಡಲ್ಪಟ್ಟಿವೆ.

(ಅ) ವಿಭಾಗದಲ್ಲಿ (೧) ಆಸಾಮು, (೨) ಪಶ್ಚಿಮ ಬಂಗಾಲ, (೩) ಬಿಹಾರ, (೪) ಉತ್ತರ ಪ್ರದೇಶ, (೫) ಪೂರ್ವ ಪಂಜಾಬ, (೬) ಮಧ್ಯಪ್ರದೇಶ, (೭) ಮುಂಬಯಿ, (೮) ಮದ್ರಾಸ, (೯) ಓರಿಸಾ ಎಂಬ ಘಟಕ ರಾಜ್ಯಗಳಿವೆ.

(ಬ) ಮೊದಲಿನ ದೊಡ್ಡ ದೊಡ್ಡ ಸಂಸ್ಥಾನಗಳು ಮತ್ತು ಸಣ್ಣ ಸಣ್ಣ ಸಂಸ್ಥಾನಗಳಿಂದಾದ ಸಂಘಗಳು ಈ ವಿಭಾಗದಲ್ಲಿ ಕೂಡಿವೆ. ಅವುಗಳ ವಿವರ:- (೧) ಹೈದರಾಬಾದ, (೨) ಜಮ್ಮು-ಕಾಶ್ಮೀರ, (೩) ಮಧ್ಯಭಾರತ, (೪) ಮೈಸೂರು, (೫) ಪತಿಯಾಲಾ ಸಂಘ, (೬) ರಾಜಸ್ಥಾನ, (೭) ಸೌರಾಷ್ಟ್ರ, (೮) ವಿಂಧ್ಯ ಪ್ರದೇಶ, (೯) ತ್ರಾವಣಕೋರ-ಕೋಚೀನ ಇವು ಈ ವಿಭಾಗದಲ್ಲಿ ಸೇರಿದ ಘಟಕ ರಾಜ್ಯಗಳು.

(ಕ) ಈ ವಿಭಾಗದಲ್ಲಿ (೧) ಅಜಮೀರ, (೨) ಭೋಪಾಳ, (೩) ವಿಲಾಸಪುರ, (೪) ಕುಚಬಿಹಾರ, (೫) ಕುರ್ಗ, (೬) ದಿಲ್ಲಿ, (೭) ಹಿಮಾಚಲಪ್ರದೇಶ, (೮) ಕಚ್ಛ, (೯) ಮಣಿಪುರ, (೧೦) ತ್ರಿಪುರಾ ಎಂಬ ಘಟಕರಾಜ್ಯಗಳಿವೆ.

(ಡ) ಅಂದಮಾನ, ನಿಕೋಬಾರ ಇವು ಈ ವಿಭಾಗದ ಘಟಕ ರಾಜ್ಯಗಳು.

**ಪ್ರ:— ರಾಷ್ಟ್ರಾಧ್ಯಕ್ಷ ಮತ್ತು ಉಪರಾಷ್ಟ್ರಾಧ್ಯಕ್ಷ ಇವರ ಆಯ್ಕೆ, ಅರ್ಹತೆ, ಇವರು ಮಾಡತಕ್ಕ ಕೆಲಸಗಳು ಇವುಗಳ ಬಗೆಗೆ ಟಿಪ್ಪಣಿ ಬರೆಯಿರಿ.**

**ಉ:—ಆಯ್ಕೆ**– ರಾಷ್ಟ್ರದ ಮುಖ್ಯ ಅಧಿಕಾರಿಯಾದ ರಾಷ್ಟ್ರಾಧ್ಯಕ್ಷನನ್ನು ಕೇಂದ್ರಪಾರ್ಲಿಮೆಂಟಿನ ಎರಡೂ ಸಭಾಗೃಹಗಳ ಲೋಕನಿಯುಕ್ತ ಸಭಾಸದರು ಮತ್ತು ಘಟಕ ರಾಜ್ಯಗಳ ವಿಧಾನ ಸಭೆಯ ಸಭಾಸದರು ಇವರು ಗುಪ್ತ ಮತದಾನ ಪದ್ಧತಿಯಿಂದ ಆರಿಸುವರು.

ಉಪರಾಷ್ಟ್ರಾಧ್ಯಕ್ಷನನ್ನು ಕೇಂದ್ರ ಪಾರ್ಲಿಮೆಂಟಿನ ಎರಡೂ ಸಭಾಗೃಹಗಳ ಸಭಾಸದರು ಗುಪ್ತ ಮತದಾನ ಪದ್ಧತಿಯಿಂದ ಆರಿಸುವರು.

**ಅರ್ಹತೆ:—** ರಾಷ್ಟ್ರಾಧ್ಯಕ್ಷನಾಗಲು, ಅವನು ಭಾರತದ ನಾಗರಿಕನಿರಬೇಕು; ಅವನ ವಯಸ್ಸು ೩೫ ವರ್ಷಗಳಿಗಿಂತ ಕಡಿಮೆ ಇರಕೂಡದು; ಅವನು ವಿಧಾನ ಸಭೆಯ ಸಭಾಸದನಿರಬಾರದು; ಎಂಬ ನಿಯಮಗಳಿಗೆ ಒಳಪಟ್ಟು ಬೇಕಾದವರು ಹುರಿಯಾಳಾಗಿ ನಿಲ್ಲಬಹುದು.

ಉಪರಾಷ್ಟ್ರಾಧ್ಯಕ್ಷನ ಸ್ಥಳಕ್ಕೆ (೧) ಭಾರತದ ನಾಗರಿಕನಿರಬೇಕು. (೨) ೩೫ ವರ್ಷಗಳಿಗಿಂತ ಕಡಿಮೆಯಿಲ್ಲದ ವಯಸ್ಸಿನವನಿರಬೇಕು. (೩) ಲೋಕ ಸಭೆಯ ಸಭಾಸದನಾಗಿರಬಾರದು. ಎಂಬ ನಿಯಮಗಳಿಗೆ ಒಳಪಟ್ಟು ಬೇಕಾದವರು ಹುರಿಯಾಳಾಗಿ ನಿಲ್ಲಬಹುದು.

**ಮಾಡತಕ್ಕ ಕೆಲಸಗಳು :—** (೧) ರಾಷ್ಟ್ರದ ಎಲ್ಲ ಸೂತ್ರಗಳು ರಾಷ್ಟ್ರಾಧ್ಯಕ್ಷನ ಕೈಯಲ್ಲಿರುವವು. (೨) ಹಣಕಾಸಿನ ಮತ್ತು ಸೈನ್ಯ ಖಾತೆಯ ಕೆಲಸಗಳು ಇವನ ಅಪ್ಪಣೆಯಿಂದ ಜರುಗುವವು. (೩) ಮಹತ್ವದ ಸೈನ್ಯಾಧಿಕಾರಿಗಳನ್ನು ನಿಯಮಿಸುವದು, ಪರರಾಷ್ಟ್ರಗಳಿಗೆ ಕಳುಹುವ ವಕೀಲರನ್ನು ಆರಿಸುವದು, ಪರರಾಷ್ಟ್ರಗಳಿಂದ ಬಂದ ವಕೀಲರಿಗೆ ಸಮ್ಮತಿಕೊಡುವದು, (೪) ವರಿಷ್ಠ ನವಕರರನ್ನು ನಿಯಮಿಸುವ ಅಧಿಕಾರವುಳ್ಳ ಮಂಡಲವನ್ನು ಗೊತ್ತುಮಾಡುವದು, ವರಿಷ್ಠ ನ್ಯಾಯಾಲಯದ ನ್ಯಾಯಾಧೀಶರನ್ನೂ ಗವ್ಹರ್ನರರನ್ನೂ ರಾಜಪ್ರಮುಖರನ್ನೂ ಉಪರಾಜ್ಯಪಾಲ (ಕಮೀಶನರ) ರನ್ನೂ ರಾಷ್ಟ್ರಾಧ್ಯಕ್ಷನೇ ಗೊತ್ತು ಮಾಡುವನು (೫) ಲೋಕ ಸಭೆಯ ಮತ್ತು ರಾಜ್ಯಪಾಲರಿಂದ ಬಂದ ಗೊತ್ತುವಳಿಗಳಿಗೆ ಒಪ್ಪಿಗೆ ಕೊಡುವದು, ಕೊಡದಿರುವದು ರಾಷ್ಟ್ರಾಧ್ಯಕ್ಷನ ಕೆಲಸವು. (೬) ಕೋರ್ಟಿನಿಂದ ಮರಣದಂಡನೆ ಹೊಂದಿದವರ ಬಗೆಗೆ ದಯೆ ತೋರಿಸುವ ಅಧಿಕಾರವು ರಾಷ್ಟ್ರಾಧ್ಯಕ್ಷನಿಗೆ ಇರುವದು.

(೧) ಉಪರಾಷ್ಟ್ರಾಧ್ಯಕ್ಷನು ಕೇಂದ್ರದ ವರಿಷ್ಠ ಸಭೆಯ ಅಧ್ಯಕ್ಷನಾಗಿ ಕೆಲಸ ಸಾಗಿಸುವನು. (೨) ರಾಷ್ಟ್ರಾಧ್ಯಕ್ಷನು ಕೆಲಸದ ಮೇಲೆ ಇಲ್ಲದಾಗ ಅವನು ಮಾಡತಕ್ಕ ಎಲ್ಲ ಕೆಲಸಗಳನ್ನು ಮಾಡುವನು.

**ಪ್ರ :—ಕೆಳಗೆ ಬರೆದ ಮಹಾವ್ಯಕ್ತಿಗಳ ಅಲ್ಪಪರಿಚಯವನ್ನು ಮಾಡಿಕೊಡಿರಿ: (೧) ರಾಜಾ ರಾಮಮೋಹನ ರಾಯ. (೨) ದಾದಾಭಾಯಿ ನವರೋಜಿ. (೩) ಲೋಕಮಾನ್ಯ ಬಾಲ ಗಂಗಾಧರ ತಿಲಕರು. (೪) ಮಹಾತ್ಮಾ ಗಾಂಧೀಜಿ.**

**ಉ :— (೧) ರಾಜಾ ರಾಮಮೋಹನರಾಯ** (೧೭೭೨-೧೮೩೩) **:** ಬಂಗಾಲ ಪ್ರಾಂತದ ರಾಧಾನಗರವು ಇವರ ಊರು. ಇವರ ಮನೆತನದ

ರನ್ನು ತಮ್ಮ ಕೌನ್ಸಿಲಿನ ಅಡಿಶನಲ್ ಮೆಂಬರರನ್ನಾಗಿ ಮಾಡಿಕೊಂಡರು. ಇದೇ ವರ್ಷ ರಾಷ್ಟ್ರಮಹಾಸಭೆಯ ಸ್ಥಾಪನೆಯಾಯಿತು. ಈ ಕಾರ್ಯದಲ್ಲಿ ದಾದಾ ಭಾಯಿಯವರು ಆಸ್ಥೆಯಿಂದ ಭಾಗವಹಿಸಿದರು. ೧೮೮೬ ರಲ್ಲಿ ಇವರು ಇಂಗ್ಲಂಡಕ್ಕೆ ಹೋಗಿ, ಪಾರ್ಲಿಮೆಂಟಿನ ಸದಸ್ಯರಾಗಲು ಪ್ರಯತ್ನಿಸಿದರು. ಆದರೆ ಅದರಲ್ಲಿ ಜಯ ದೊರೆಯಲಿಲ್ಲ. ಕೂಡಲೆ ಅವರು ಭಾರತಕ್ಕೆ ಬಂದರು. ೧೮೮೬ ರಲ್ಲಾದ ಕಲಕತ್ತೆಯ ರಾಷ್ಟ್ರಮಹಾಸಭೆಯ ಅಧ್ಯಕ್ಷರಾದರು. ೧೮೮೭ ರಲ್ಲಿ ಮತ್ತೆ ಇಂಗ್ಲಂಡಕ್ಕೆ ಹೋಗಿ, ಪಾರ್ಲಿಮೆಂಟಿನ ಸಭಾಸದರಾಗಿ ಅಲ್ಲಿ ಐದು ವರ್ಷ ಕೆಲಸ ಮಾಡಿದರು. ಅಲ್ಲಿ ಭಾರತದ ಪರವಾಗಿ ಪಾರ್ಲಿಮೆಂಟಿನಲ್ಲಿ ಮಾಡಿದ ಕಾರ್ಯವು ಮಹತ್ತ್ವದ್ದಾಗಿದೆ. ಬಳಿಕ ಇವರು ಸ್ವದೇಶಕ್ಕೆ ಬಂದು ರಾಷ್ಟ್ರ ಸಭೆಯ ಲಾಹೋರ ಅಧಿವೇಶನದ ಅಧ್ಯಕ್ಷರಾದರು. ಮುಂಬಯಿ ಯಿಂದ ಲಾಹೋರದವರೆಗೆ ಎಲ್ಲ ಸ್ಥಳಗಳಲ್ಲಿ ಇವರಿಗೆ ಅತ್ಯಾದರದ ಮತ್ತು ವೈಭವದ ಸತ್ಕಾರವಾಯಿತು.

ಕ್ರಿ. ಶ. ೧೯೦೧ ರಲ್ಲಿ ಇವರು "**ಭಾರತದ ಬಡತನವೂ ಬ್ರಿಟಿಷರ ಅನುಚಿತವಾದ ಆಡಳಿತವೂ**" ಎಂಬ ಗ್ರಂಥವನ್ನು ಬರೆದರು. ೧೯೦೬ ರಲ್ಲಿಯ ರಾಷ್ಟ್ರಮಹಾಸಭೆಯ ಕಲಕತ್ತೆಯ ಅಧಿವೇಶನದ ಅಧ್ಯಕ್ಷರಾದರು. ಮತ್ತು ಆಗ "**ಸ್ವರಾಜ್ಯವು ಭಾರತದ ನಿಶ್ಚಿತ ಧ್ಯೇಯವು,**" ಎಂದು ಸಾರಿದರು. ಮರಳಿ ೧೯೦೭ ರಲ್ಲಿ ಇಂಗ್ಲಂಡಕ್ಕೆ ಹೋದರು. ಆದರೆ ಡಾಕ್ಟರರ ಅಭಿಪ್ರಾಯದ ಮೇರೆಗೆ ಭಾರತಕ್ಕೆ ಹಿಂದಿರುಗಿದರು. ಮುಂದೆ ಇವರು ತಮ್ಮ ಹುಟ್ಟೂರಾದ **ವರಸೋವದಲ್ಲಿ** ಇರಹತ್ತಿದರು. ಆಗ ಇವರ ಮನೆಯು ದೇಶಭಕ್ತರ ಸಮ್ಮೇಲನ ಮಂಟಪವಾಗಿದ್ದಿತು. ಹೀಗಿರಲು ೧೯೧೭ ರಲ್ಲಿ ದಾದಾ ಭಾಯಿಯವರು ನಮ್ಮನ್ನು ಅಗಲಿದರು. ದೇಶವೆಲ್ಲ ದುಃಖಸಾಗರದಲ್ಲಿ ಮುಳುಗಿತು!

**(೩) ಲೋಕಮಾನ್ಯ ಬಾಳ ಗಂಗಾಧರ ಟಿಳಕ** (೧೮೫೬-೧೯೨೦): ಲೋಕಮಾನ್ಯರು ಕ್ರಿ. ಶ. ೧೮೫೬ ರಲ್ಲಿ ರತ್ನಾಗಿರಿಯಲ್ಲಿ ಜನಿಸಿದರು. ಕ್ರಿ. ಶ. ೧೮೭೬ ರಲ್ಲಿ ಬಿ. ಎ. ಪರೀಕ್ಷೆಯಲ್ಲಿ ಮತ್ತು ಕ್ರಿ. ಶ. ೧೮೭೯ ರಲ್ಲಿ ಎಲ್‌ಎಲ್. ಬಿ. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದರು. ಬಳಿಕ ಕ್ರಿ. ಶ. ೧೮೮೦ ರಲ್ಲಿ ಆಗರ ಕರರನ್ನು ಕೂಡಿಕೊಂಡು **ನ್ಯೂ ಇಂಗ್ಲಿಷ ಸ್ಕೂಲ** ಎಂಬ ಶಾಲೆಯನ್ನು ಸ್ಥಾಪಿಸಿದರು. **ಕೇಸರಿ, ಮರಾಠಾ** ಈ ವೃತ್ತಪತ್ರಿಕೆಗಳನ್ನು ಹೊರಡಿಸ

ಹತ್ತಿದರು. ಅನ್ಯಾಯದ ವಿರುದ್ಧ ಧೈರ್ಯದಿಂದ ಹೋರಾಡುವದು ಇವರ ಸ್ವಭಾವವು. ಕೋಲ್ಹಾಪುರ ಸಂಸ್ಥಾನದ ಕಾರಭಾರಿಯ ವಿರುದ್ಧ ಬರೆದ ಟೀಕೆಗಾಗಿ ಇವರು ಸೆರೆಮನೆ ಸೇರಬೇಕಾಯಿತು. ಮುಂದೆ ಕ್ರಿ. ಶ. ೧೮೮೪ ರಲ್ಲಿ ತಮ್ಮ ಗೆಳೆಯರನ್ನೊಡಗೊಂಡು **ಫರ್ಗ್ಯೂಸನ್ ಕಾಲೇಜವನ್ನು** ಸ್ಥಾಪಿಸಿ ಅದನ್ನು ಉತ್ತಮ ರೀತಿಯಿಂದ ನಾಗಿಸಿ ಊರ್ಜಿತ ಸ್ಥಿತಿಗೆ ತಂದರು. ಕ್ರಿ. ಶ. ೧೮೯೦ ರಿಂದ ಇವರು ರಾಜಕಾರಣದಲ್ಲಿ ಹೆಚ್ಚಾಗಿ ಭಾಗವಹಿಸಹತ್ತಿದರು. ರಾಷ್ಟ್ರಮಹಾಸಭೆಯ ಕೆಲಸದಲ್ಲಿ ಮನಸ್ಸುಹಾಕಿ ಹಲವು ಚಟುವಟಿಕೆಗಳನ್ನು ಕೈಕೊಂಡರು. ಸಮಾಜಶಿಕ್ಷಣಕ್ಕಾಗಿ ಗಣೇಶೋತ್ಸವ, ಶಿವಾಜಿ ಉತ್ಸವ ಮೊದಲಾದ ಕಾರ್ಯಕ್ರಮಗಳನ್ನು ಸಾಗಿಸಿದರು. ಕ್ರಿ. ಶ. ೧೮೯೭ ರಲ್ಲಿ ರಾಜ-ದ್ರೋಹದ ಆರೋಪಕ್ಕಾಗಿ ಇವರಿಗೆ ಒಂದೂವರೆ ವರ್ಷದ ಶಿಕ್ಷೆಯಾಯಿತು. ಆದರೆ ಇವರ ವಿದ್ವತ್ತೆಗೆ ಮೆಚ್ಚಿದ್ದ **ಮ್ಯಾಕ್ಸಮುಲರ** ಮತ್ತು **ಉಯಿಲ್ಯಮ್ ಹಂಟರ** ಇವರ ಪ್ರಯತ್ನದಿಂದ ಅವಧಿ ಮುಗಿಯುವ ಮೊದಲೆ ಬಿಡುಗಡೆಯಾಯಿತು. ಕ್ರಿ. ಶ. ೧೯೦೫ ರಿಂದ ಈಚೆಗೆ ಇವರು ಪೂರ್ಣವಾಗಿ ರಾಜಕಾರಣದಲ್ಲಿ ತೊಡಗಿದರು. **ಸ್ವದೇಶಿ, ಬಹಿಷ್ಕಾರ, ರಾಷ್ಟ್ರೀಯ ಶಿಕ್ಷಣ, ಸ್ವರಾಜ್ಯ** ಈ ಚತುಸ್ಸೂತ್ರಗಳ ಮಂತ್ರವನ್ನು ಜನರ ಮನಸ್ಸಿನಲ್ಲಿ ಮೂಡಿಸಿದರು. ಕ್ರಿ. ಶ. ೧೯೦೮ ರಲ್ಲಿ ರಾಜದ್ರೋಹದ ಆರೋಪಕ್ಕಾಗಿ ಇವರಿಗೆ ಆರು ವರ್ಷಗಳ ಶಿಕ್ಷೆಯಾಯಿತು. ಈ ಅವಧಿಯಲ್ಲಿ ಇವರು ಮಂಡಾಲೆಯಲ್ಲಿ ಇರಿಸಲ್ಪಟ್ಟರು. ಅಲ್ಲಿ ಇವರು " **ಗೀತಾರಹಸ್ಯ ಅಥವಾ ಕರ್ಮಯೋಗ ಶಾಸ್ತ್ರ** " ಎಂಬ ಶ್ರೇಷ್ಠ ಗ್ರಂಥವನ್ನು ರಚಿಸಿದರು. ಇವರು ಮಹಾರಾಷ್ಟ್ರ ಭಾಷೆಯಲ್ಲಿ ಬರೆದ ಈ ಗ್ರಂಥದ ಅನುವಾದವು ಹಲವು ಭಾಷೆಗಳಲ್ಲಾದಂತೆ ಕನ್ನಡದಲ್ಲಿಯೂ ಆಗಿದೆ. ಕ್ರಿ. ಶ. ೧೯೧೪ ರಲ್ಲಿ ಇವರು ಬಿಡುಗಡೆ ಹೊಂದಿ ಬಂದಬಳಿಕ, " **ಪುನಶ್ಚ ಹರಿಃ ಓಂ** " ಎಂದು ರಾಜಕೀಯ ಚಟುವಟಿಕೆಗಳನ್ನು ಮತ್ತೆ ಪ್ರಾರಂಭಿಸಿದರು. ಕ್ರಿ. ಶ. ೧೯೧೬ ರಲ್ಲಿ **ಹೋಮರೂಲ ಲೀಗ** ಎಂಬ ಸಂಸ್ಥೆಯನ್ನು ಸ್ಥಾಪಿಸಿ ಅದರ ಮೂಲಕ ತಮ್ಮ ಪಕ್ಷವನ್ನು ಸಂಘಟಿಸಿದರು. " **ಸ್ವರಾಜ್ಯವು ನನ್ನ ಜನ್ಮಸಿದ್ಧವಾದ ಹಕ್ಕು; ಅದನ್ನು ನಿಶ್ಚಯವಾಗಿ ದೊರಕಿಸುವೆನು;** " ಎಂಬ ಮಂತ್ರವನ್ನು ಎದೆಯಲ್ಲಿ ನಡುವಂತೆ ಬೋಧಿಸಿದರು. ಇವರ ಪರಿಶ್ರಮದಿಂದ ಭಾರತೀಯರು ಸ್ವರಾಜ್ಯ ಮಂದಿರದ ಮೆಟ್ಟಲುಗಳನ್ನು ಒತ್ತರದಿಂದ ಏರತೊಡಗಿದರು.

ಈ ರೀತಿ ತಡೆಯಿಲ್ಲದೆ ಹಲವು ಬಗೆಯಿಂದ ಭಾರತದ ಏಳ್ಗೆಗಾಗಿ ಜೀವದ ಪರಿವೆಯಿಲ್ಲದೆ ದುಡಿಯುತ್ತಿರುವಾಗಲೆ ಈ ಮಹಾಪುರುಷರು ಕ್ರಿ. ಶ. ೧೯೨೦ ರಲ್ಲಿ ತಮ್ಮ ಜೀವನಯಾತ್ರೆಯನ್ನು ಮುಗಿಸಿದರು.

ಜನತೆಯ ಅಂತಃಕರಣದಿಂದ ಉಕ್ಕಿಬಂದ **"ಲೋಕಮಾನ್ಯರು"** ಎಂಬ ಪದವಿಯು ಇವರಿಗಾಗಿ ಮೀಸಲಾಗಿ ಉಳಿಯಿತು!

**(೪) ಮಹಾತ್ಮಾ ಗಾಂಧೀಜಿ** (೧೮೬೯–೧೯೪೮): — ಇವರ ಪೂರ್ಣ ಹೆಸರು ಮೋಹನದಾಸ ಕರಮಚಂದ ಗಾಂಧಿ ಎಂಬದಾಗಿದೆ. ಇವರು ಕ್ರಿ. ಶ. ೧೮೬೯ ರಲ್ಲಿ ಪೋರಬಂದರ ಎಂಬಲ್ಲಿ ಹುಟ್ಟಿದರು. ಮ್ಯಾಟ್ರಿಕ್ ಪರೀಕ್ಷೆಯಾದ ಬಳಿಕ ಇವರು ಇಂಗ್ಲಂಡಕ್ಕೆ ಹೋಗಿ ಬ್ಯಾರಿಸ್ಟರರಾಗಿ ಮರಳಿ ಬಂದರು ರಾಜ-ಕೋಟ ಮತ್ತು ಮುಂಬಯಿ ಈ ಪಟ್ಟಣಗಳಲ್ಲಿ ವಕೀಲಿಯನ್ನು ಮಾಡಹತ್ತಿದರು. ಮುಂದೆ, ಪ್ರಿಟೋರಿಯದ ನ್ಯಾಯಾಲಯದಲ್ಲಿ ಒಬ್ಬ ಭಾರತೀಯ ವ್ಯಾಪಾರಸ್ಥನ ಪರವಾಗಿ ಕೆಲಸ ನಡೆಯಿಸಲು ಆಫ್ರಿಕೆಗೆ ಹೋದರು. ಅಲ್ಲಿ ಇರುವಾಗ, ಭಾರತೀಯ ನಾಗರಿಕರಿಗೆ ಆ ಸರಕಾರದಿಂದ ಆಗುತ್ತಿದ್ದ ಅನ್ಯಾಯ ಅಪಮಾನಗಳನ್ನು ನೆನೆದು ಕಳವಳಗೊಂಡರು, ಮತ್ತು ಅಲ್ಲಿಯ ಒತ್ತಾಯದ ಕಾಯದೆಗಳ ವಿರುದ್ಧ ಹೋರಾಡಲು ಟೊಂಕಕಟ್ಟಿದರು. ಅಲ್ಲಿ ೧೮೯೪ ರಲ್ಲಿ ನಾತಾಳ ಹಿಂದೀ ಕಾಂಗ್ರೆಸ್ ಎಂಬ ಸಂಸ್ಥೆಯನ್ನು ಸ್ಥಾಪಿಸಿ ಆಂದೋಲನವನ್ನು ಸಾಗಿಸಿದರು. ಅತಿಶಯವಾದ ಕಷ್ಟಗಳನ್ನು ಅನುಭವಿಸಿದರು. ಅಲ್ಲಿಯ ಬಿಳಿಯರು ಇವರನ್ನು ಪರಿಪರಿಯಿಂದ ಹಿಂಸಿಸಲು ಯತ್ನಿಸಿದರು. ಬಿಳಿಯರ ಅನ್ಯಾಯಗಳನ್ನು ಇಂಗ್ಲಂಡ ಪಾರ್ಲಿಮೆಂಟಿನ ಅಗಸೆಗೆ ಕಟ್ಟಿದರು; ಭಾರತಕ್ಕೆ ಬಂದು ದೇಶದಲ್ಲಿ ಸಂಚರಿಸಿ ಬಿಳಿಯರು ಹಿಂದೀಯರಿಗೆ ಬಗೆಯುವ ಅನ್ಯಾಯಗಳನ್ನು ಕಣ್ಣಮುಂದೆ ನಿಲ್ಲಿಸಿದರು. ಬಳಿಕ, ಆಫ್ರಿಕೆಗೆ ಮರಳಿ ಹೋಗಿ ೧೯೦೭ ರಿಂದ ಬಿಳಿಯರ ಅನ್ಯಾಯದ ವಿರುದ್ಧ ಸತ್ಯಾಗ್ರಹವನ್ನು ಹೂಡಿದರು. ಸಾವಿರಾರು ಜನರು ಸೆರೆಮನೆ ಸೇರಿದರು. ೧೯೧೪ ರ ಸಮಯಕ್ಕೆ ಗಾಂಧೀಜಿಯವರಿಗೆ ಜಯ ದೊರೆತು, ಹಿಂದೀಯರು ಅಲ್ಲಿ ಕಾಲೂರಿ ನಿಲ್ಲುವಂತಾಯಿತು. ಸುಪ್ರಸಿದ್ಧ ರಶಿಯನ್ ತತ್ವಜ್ಞಾನಿಗಳಾದ ಟಾಲ್‌ಸ್ಟಾಯ ಅವರು ಆಫ್ರಿಕೆಯ ಸತ್ಯಾಗ್ರಹದ ಬಗೆಗೆ ಗಾಂಧೀಜಿಯವರನ್ನು ಅಭಿನಂದಿಸಿದರು!

ಆಮೇಲೆ ಇವರು ಭಾರತಕ್ಕೆ ಬಂದರು. ೧೯೧೫ ರಲ್ಲಿ ಸಾಬರಮತಿಯಲ್ಲಿ ಆಶ್ರಮವನ್ನು ಸ್ಥಾಪಿಸಿದರು. ೧೯೧೭ ರಲ್ಲಿ ಚಂಪಾರಣ್ಯದಲ್ಲಿಯ ಕೂಲಿಕಾರರ

ಪರಿಸ್ಥಿತಿಯ ವಿಚಾರಣೆಗಾಗಿ, ಪ್ರತಿಬಂಧಕ ಕಾಯದೆಯನ್ನು ಭಂಗಿಸಿ ಅಲ್ಲಿ ಪ್ರವೇಶಿಸಿದರು! ಭಾರತವು ಇವರ ಸಾಹಸಕ್ಕೆ ಬೆರಗುಗೊಂಡಿತು!! ಮುಂದೆ ರೌಲೆಟಕಾಯದೆ ವಿರುದ್ಧ ಸತ್ಯಾಗ್ರಹವನ್ನು ಹೂಡಲು ಒಂದು ಮಂಡಲವನ್ನು ಸ್ಥಾಪಿಸಿದರು. ದಿಲ್ಲಿಯಿಂದ ಪಂಜಾಬಕ್ಕೆ ಹೋಗುತ್ತಿರಲು ಮಹಾತ್ಮರು ಸೆರೆ ಹಿಡಿಯಲ್ಪಟ್ಟರು. ದಬ್ಬಾಳಿಕೆಯ ನಿಷೇಧಕ್ಕಾಗಿ ಜಾಲಿಯನವಾಲಾ ಬಾಗದಲ್ಲಿ ನೆರೆದ ಸಭೆಯಮೇಲೆ ಜನರಲ್ ಡಾಯರನು ಗುಂಡಿನ ಮಳೆ ಸುರಿಸಿ ರಕ್ತದ ಕಾಲುವೆ ಹರಿಸಿದನು. ದೇಶದಲ್ಲೆಲ್ಲ ಗಂಭೀರ ಪರಿಸ್ಥಿತಿಯುಂಟಾಯಿತು. ಚಳ ವಳಿಯನ್ನು ಹತ್ತಿಕ್ಕಿಬಿಡುವ ಹಟವನ್ನು ಸರಕಾರವು ಹಿಡಿದಿದ್ದಿತು.

೧೯೨೦ ರ ಅಗಸ್ಟ ೧ ನೇ ದಿನ ಲೋಕಮಾನ್ಯರು ನಮ್ಮನ್ನು ಅಗಲಿದರು. ಅಂದೇ ಮಹಾತ್ಮರು ಅಸಹಾರ ಚಳವಳಿಯನ್ನು ಆರಂಭಿಸಿದರು. ಕಾಂಗ್ರೆಸು ಗಾಂಧಿಯವರ ತತ್ವಕ್ಕೆ ಅನುಮತಿಯನ್ನಿತ್ತಿತು. ಪದವಿಗಳನ್ನು ಬಿಡುವದು, ಶಾಸನಸಭೆಗಳ ಸಭಾಸದರು ರಾಜೀನಾಮೆ ಕೊಡುವದು, ವಿದ್ಯಾರ್ಥಿಗಳು ಶಾಲೆ-ಕಾಲೇಜುಗಳಿಗೆ ಶರಣು ಹೊಡೆಯುವದು, ಪರದೇಶಿ ಬಟ್ಟೆಗಳ ಬಹಿಷ್ಕಾರ ಮುಂತಾದವು ಈ ಅಸಹಕಾರದ ಅಂಗಗಳಾಗಿದ್ದವು. ಈ ಅಸಹಕಾರದ ಚಳ ವಳಿಯನ್ನು ಹತ್ತಿಕ್ಕುವದಕ್ಕಾಗಿಯೇ ಬ್ರಿಟಿಷರು ದಬ್ಬಾಳಿಕೆಗೆ ಕೈಹಾಕಿದರು. ಜನತೆಯು ಹೆದರಲಿಲ್ಲ; ಅಸಂಖ್ಯ ಜನರು ಸೆರೆಮನೆಯನ್ನು ಸೇರಿದರು. ಗಾಂಧೀಜಿಯವರು ಸರಕಾರಕ್ಕೆ ಪತ್ರಬರೆದು "ದಬ್ಬಾಳಿಕೆ ನಿಲ್ಲಿಸಿರಿ; ಜನ ತೆಯ ಬೇಡಿಕೆಗಳನ್ನು ಮನ್ನಿಸುವೆವೆಂದು ಏಳು ದಿನಗಳಲ್ಲಿ ಜಾಹೀರ ಪಡಿಸಿರಿ; ಇಲ್ಲದಿದ್ದರೆ ಬಾರ್ಡೋಲಿ ತಾಲೂಕಿನಲ್ಲಿ ಸಾಮೂಹಿಕ ಸತ್ಯಾಗ್ರಹವನ್ನು ಆರಂಭಿಸುವೆವು," ಎಂದು ತಿಳಿಸಿದರು. ಸರಕಾರದವರು ಸರಿಯಾದ ಉತ್ತರ ಕೊಡದೆ ಈ ಚಳವಳಿಯು ಹತ್ತಿಕ್ಕಲ್ಪಡುವದು ಎಂದು, ಜಾಹೀರಮಾಡಿದರು.

ಸತ್ಯಾಗ್ರಹವು ಆರಂಭವಾಗುವಷ್ಟರಲ್ಲಿ ಸಂಯುಕ್ತ ಪ್ರಾಂತದ ಚೋರೀ ಚೌರಾ ಎಂಬಲ್ಲಿ ಜನರು ಮಾಡಿದ ಗಲಭೆಯಿಂದ ಮಹಾತ್ಮರು ಬಾರ್ಡೋಲಿ ಸತ್ಯಾಗ್ರಹವನ್ನು ತಡೆದು, ವೈಯಕ್ತಿಕ ಸತ್ಯಾಗ್ರಹಕ್ಕೆ ಅನುಮತಿಕೊಟ್ಟರು.

ಮುಂದೆ ಯಂಗ ಇಂಡಿಯಾದಲ್ಲಿ ಗಾಂಧೀಜಿಯವರು ಬರೆದ ಲೇಖದ ನೆವದಿಂದ ಅವರಿಗೆ ಆರು ವರ್ಷಗಳ ಶಿಕ್ಷೆಯಾಯಿತು! ಚಳವಳಿಯೂ ಕೆಲದಿನ ನಿಂತಿತು. ಚಿತ್ತರಂಜನದಾಸ, ಮೋತಿಲಾಲ ನೆಹರು ಮೊದಲಾದ ಮುಂದಾಳು ಗಳು ಕೌನ್ಸಿಲುಪ್ರವೇಶದ ಧೋರಣೆಯನ್ನು ಸ್ವೀಕರಿಸಿ ಮಹಾತ್ಮರ ಒಪ್ಪಿಗೆ

ಯನ್ನೂ ಪಡೆದರು. ಆದರೆ ಸ್ವತಃ ಅವರು ಅಲಿಪ್ತರಾಗಿದ್ದರು. ಅವಧಿ ಮುಗಿಯುವ ಮೊದಲೆ ಅವರು ಬಿಡುಗಡೆ ಹೊಂದಿದರು.

ಮುಂದೆ, ೧೯೩೦ ರಲ್ಲಿ ಗಾಂಧೀಜಿಯವರು ಉಪ್ಪಿನ ಕಾಯದೆಭಂಗದ ಚಳವಳಿಯನ್ನು ಆರಂಭಿಸಿದರು ಸಾವಿರಾರು ಜನರು ಅದರಲ್ಲಿ ಅಪರೊಪನೆ ಧುಮುಕಿದರು. ಹಲವರು ಸರ್ವಸ್ವವನ್ನು ತ್ಯಾಗಮಾಡಿದರು. ಸಮರ್ಥರಾದ ಅನುಯಾಯಿಗಳೊಂದಿಗೆ ಕಾರಾಗೃಹಕ್ಕೆ ಹೋದರು. ಸರಕಾರಕ್ಕೆ ಅರಿವು ಹುಟ್ಟಿತು. ಕಾಂಗ್ರೆಸ ಪ್ರತಿನಿಧಿಗಳೆಂದು ಗಾಂಧೀಜಿಯವರು ಇಂಗ್ಲಂಡಕ್ಕೆ ದುಂಡುಮೇಜಿನ ಪರಿಷತ್ತಿಗೆ ಕರೆಯಿಸಲ್ಪಟ್ಟರು.

ದುಂಡುಮೇಜಿನ ಪರಿಷತ್ತಿನಿಂದ ಗಾಂಧೀಜಿಯವರು ಮರಳಿ ಬಂದರು. ಮತ್ತೆ ಎಲ್ಲ ಮುಂದಾಳುಗಳ ಸೆರೆಮನೆಯ ಸೇರ್ಪಡೆ, ಗಾಂಧೀಜಿಯವರ ಸಣ್ಣ ದೊಡ್ಡ ಉಪವಾಸಗಳು, ಹರಿಜನರ ಪ್ರಶ್ನೆಗಾಗಿ ಪುಣೆಯ ಪರಿಷತ್ತು, ಡಾ. ಅಂಬೇಡಕರರೊಂದಿಗೆ ಮಾಡಿಕೊಂಡ ಪುಣೆ-ಕರಾರು, ಗಾಂಧೀಜಿಯವರ ದೇಶದಾದ್ಯಂತ ಸಂಚಾರ, ಮತ್ತೆ ಕಾಯದೆ ಭಂಗ, ಬಳಿಕ ಅದನ್ನು ತಡೆದುದು ಇವೆಲ್ಲ ಘಟನೆಗಳು ಒಂದರ ಬಳಿಕೊಂದು ಸಂಭವಿಸಿದವು.

೧೯೩೫ ರಲ್ಲಿ ಭಾರತದ ಹೊಸ ಸುಧಾರಣಾ ಕಾಯದೆಯು ಪಾಸಾಯಿತು. ಕಾಂಗ್ರೆಸು ಚುನಾವಣೆಯಲ್ಲಿ ಭಾಗವಹಿಸಿ, ಎಂಟು ಪ್ರಾಂತಗಳಲ್ಲಿ ಬಹುಮತವನ್ನು ದೊರಕಿಸಿ ಅದು ಅಧಿಕಾರವನ್ನು ಪಡೆಯಿತು; ೧೯೩೭ರಲ್ಲಿ ಕಾಂಗ್ರೆಸ ಮಂತ್ರಿಮಂಡಲದ ಆಳಿಕೆಗೆ ಆರಂಭವಾಯಿತು. ೨ ನೆಯ ಮಹಾಯುದ್ಧವು ಆರಂಭವಾಗುವವರೆಗೆ ಇದರ ಆಳಿಕೆಯು ನಡೆದಿರಲು ವ್ಹಾಯಸರಾಯನು ಕಾಂಗ್ರೆಸದ ಒಪ್ಪಿಗೆಯನ್ನು ಪಡೆಯದೆ ಭಾರತವು ಮಹಾಯುದ್ಧದಲ್ಲಿ ಸೇರಿದೆ, ಎಂದು ಜಾಹೀರ ಮಾಡಿದನು. ಕಾಂಗ್ರೆಸು ಈ ಮಾತನ್ನು ಅಲ್ಲಗಳೆಯಿತು; ಅಧಿಕಾರ ತ್ಯಾಗ ಮಾಡಿತು. ಬಳಿಕ ಕಾಂಗ್ರೆಸ ವೈಯಕ್ತಿಕ ಸತ್ಯಾಗ್ರಹ, ೧೯೪೨ ರ 'ಭಾರತದಿಂದ ತೊಲಗಿರಿ' ಎಂಬ ಆಂದೋಲನ, ಕ್ರಿಪ್ಸರ ಯೋಜನೆ, ವೆವೆಲ್ಲರ, ಮಂತ್ರಿತ್ರಯರ ಘೋಷಣೆ, ಕೊನೆಗೆ ಭಾರತ ಸ್ವಾತಂತ್ರ್ಯದ ಕಾಯದೆ ಈ ಘಟನೆಗಳು ಒಂದರ ಬಳಿಕೊಂದು ಉಂಟಾದವು.

೧೯೪೭ ನೆಯ ಅಗಸ್ಟ ೧೫ ನೆಯ ದಿನ ಗಾಂಧೀಜಿಯವರ ಮುಂದಾಳ್ತನದ ಪರಿಣಾಮವಾಗಿ ಭಾರತಕ್ಕೆ ಸ್ವಾತಂತ್ರ್ಯವು ಲಭಿಸಿತು. ಗಾಂಧೀಜಿಯವರು ಮಾರ್ಗದರ್ಶಕರಾಗಿ ತಮ್ಮ ಪಟ್ಟಶಿಷ್ಯರಾದ ಪಂಡಿತ ಜವಾಹರಲಾಲ ಮತ್ತು

ಸಮರ್ಥ ಅನುಯಾಯಿಗಳಾದ ವಲ್ಲಭಭಾಯಿ ಪಟೇಲ, ಬಾಬು ರಾಜೇಂದ್ರ ಪ್ರಸಾದ, ರಾಜಗೋಪಾಲಾಚಾರ್ಯ, ಮೌ. ಅಬುಲ್‌ಕಲಮ ಆಝಾದ ಮೊದಲಾದವರಿಂದ ಹೊಸ ರಾಜ್ಯಭಾರವನ್ನು ಸಾಗಿಸಹತ್ತಿದರು. ಆದರೆ, ಇನ್ನೂ ರಾಷ್ಟ್ರಕ್ಕೆ ಅವರ ಮುಂದಾಳ್ತನವು ಅವಶ್ಯವಾಗಿರುವಾಗಲೆ, ಅವರು ನಮ್ಮನ್ನು ಅಗಲಿಹೋಗುವ ದುರ್ಘಟ ಪ್ರಸಂಗವು ಬಂದೊದಗಿತು! ೧೯೪೮ ರ ಜನೇವರಿಯ ದಿನಾಂಕ ೩೦ ರಂದು ಸಾಯಂಕಾಲದ ೫ ಗಂಟೆಯ ಸುಮಾರಿಗೆ ಪ್ರಾರ್ಥನೆಗಾಗಿ ವೇದಿಕೆಯನ್ನೇರಿ ನಿಂತಿರುವಾಗಲೆ ತಲೆತಿರುಕನೊಬ್ಬನ ಗುಂಡಿಗೆ ಆಹುತಿಯಾದರು!! ಅಂದು ಇಡಿಯ ರಾಷ್ಟ್ರವು ಶೋಕಸಾಗರದಲ್ಲಿ ಮುಳುಗಿತು!!!

ಸತ್ಯ, ಅಹಿಂಸೆ, ಸಮತೆ ಈ ತತ್ವಗಳ ಪಾಲನೆಯಲ್ಲಿಯೆ ಗಾಂಧೀಜಿ ಯವರು ತಮ್ಮ ಆಯುಷ್ಯವನ್ನು ಕಳೆದರು. ಅಂತೆಯೆ ಜಗತ್ತು ಅವರನ್ನು **ಮಹಾತ್ಮರು** ಎಂದಿತು. ತಿಲಕರಿಗಾಗಿ **ಲೋಕಮಾನ್ಯ**ರೆಂಬ ಹೆಸರು ಹೇಗೋ ಹಾಗೆ, ಗಾಂಧೀಜಿಯವರಿಗಾಗಿ **ಮಹಾತ್ಮ**ರೆಂಬ ಹೆಸರು ಭಾರತ ದಲ್ಲಿ ಮೀಸಲಾಗಿದೆ.

---

## ಅತಿ ಪ್ರಾಚೀನ ಕಾಲದಲ್ಲಿ ವರ್ತಿಸಿದ ಕೆಲವು ಸಂಗತಿಗಳ ಕಾಲಗಳು

**ಶೈಶುನಾಗ ವಂಶ (ಕ್ರಿ. ಶ. ಪೂ. ೬೪೨. ಕ್ರಿ. ಶ. ಪೂ. ೪೧೩).**

| | | | | | |
|---|---|---|---|---|---|
| ೧. | ಬಿಂಬಸಾರ | ಕ್ರಿ. ಶ. ಪೂ. ೬೪೨ | ರಿಂದ | ಕ್ರಿ. ಶ. ಪೂ. | ೫೮೨ |
| ೨. | ಅಜಾತಶತ್ರು | ,, | ೫೮೨ | ,, | ೫೫೪ |
| ೩. | ದರ್ಶಕ | ,, | ೫೫೪ | ,, | ೫೨೭ |
| ೪. | ಉದಯ | ,, | ೫೨೭ | ,, | ೫೦೩ |
| | ಉಳಿದ ಅರಸರು | ,, | ೫೦೩ | ,, | ೪೧೩ |

| | | | |
|---|---|---|---|
| ಕ್ರಿ. ಶ. ಪೂ. ೩೦೦೧ | | | ಮಹಾಭಾರತ ಯುದ್ಧ |
| ,, | ೨೦೦೦ ರಿಂದ | ಕ್ರಿ. ಶ. ಪೂ. ೧೫೦೦ | ಆರ್ಯರ ಪ್ರಗತಿ |
| ,, | ೧೫೦೦ | ,, ೧೦೦೦ | ಉಪನಿಷತ್ಕಾಲ |
| ,, | ೮೦೦ | ,, ೭೦೦ | ಪಾಣಿನಿಯ ಕಾಲ |
| ,, | ೬೫೦ | | ನಾಣ್ಯಗಳ ಪ್ರಚಾರ |

| | | |
|---|---|---|
| ಕ್ರಿ. ಶ. ಪೂ. ೫೬೭ ರಿಂದ ಕ್ರಿ. ಶ. ಪೂ. ೪೮೭ | | ಗೌತಮ ಬುದ್ಧ |
| ,, ೫೪೭ | ,, ೪೬೭ | ಮಹಾವೀರ ವರ್ಧಮಾನ |
| ,, ೪೦೦ | | ಕಣಾದನ ಕಾಲ |
| ,, ೩೨೭ | ,, ೩೨೫ | ಸಿಕಂದರನ ದಾಳಿ |

# ಪ್ರಾಚೀನ ಕಾಲದಲ್ಲಿ ಆಳಿದ ಪ್ರಸಿದ್ಧವಾದ ರಾಜವಂಶಗಳು

## ಮೌರ್ಯವಂಶ (ಕ್ರಿ. ಶ. ಪೂ. ೩೨೧—ಕ್ರಿ. ಶ. ಪೂ. ೧೮೪)

| | | | |
|---|---|---|---|
| ೧ | ಚಂದ್ರಗುಪ್ತ | ಕ್ರಿ. ಶ. ಪೂ. ೩೨೧ ರಿಂದ | ಕ್ರಿ. ಶ. ಪೂ. ೨೯೮ |
| ೨ | ಬಿಂದುಸಾರ | ,, ೨೯೮ | ,, ೨೭೩ |
| ೩ | ಅಶೋಕ | ,, ೨೭೪ | ,, ೨೩೭ |
| ೪ | ಉಳಿದ ಅರಸರು | ,, ೨೩೭ | ,, ೧೮೪ |

## ಗುಪ್ತ ವಂಶ (ಕ್ರಿ. ಶ. ೩೨೦ ರಿಂದ ೬೦೦).

| | | |
|---|---|---|
| ೧ | ಚಂದ್ರಗುಪ್ತ | ಕ್ರಿ. ಶ. ೩೨೦-೩೩೦ |
| ೨ | ಸಮುದ್ರಗುಪ್ತ | ,, ೩೩೦-೩೭೫ |
| ೩ | ೨ನೆಯ ಚಂದ್ರಗುಪ್ತ | ,, ೩೭೫-೪೧೩ |
| ೪ | ಕುಮಾರಗುಪ್ತ | ,, ೪೧೩-೪೫೫ |
| ೫ | ಸ್ಕಂದಗುಪ್ತ | ,, ೪೫೫-೪೮೦ |
| ೬ | ಉಳಿದ ಅರಸರು | ,, ೪೮೦-೬೦೦ |

## ಬಾದಾಮಿಯ ಚಾಲುಕ್ಯ ವಂಶ (ಕ್ರಿ. ಶ. ೫೦೦ ರಿಂದ ೭೫೦).

| | | |
|---|---|---|
| ೧ | ಜಯಸಿಂಹ ಮತ್ತು ರಣರಾಗ | ಕ್ರಿ. ಶ. ೫೦೦-೫೫೦ |
| ೨ | ೧ನೆಯ ಪುಲಿಕೇಶಿ | ,, ೫೫೦-೫೬೬ |
| ೩ | ಕೀರ್ತಿವರ್ಮ ಮತ್ತು ಮಂಗಳೇಶ | ,, ೫೬೬-೬೦೮ |
| ೪ | ೨ನೆಯ ಪುಲಿಕೇಶಿ | ,, ೬೦೯-೬೪೨ |
| ೫ | ವಿಕ್ರಮಾದಿತ್ಯ | ,, ೬೪೨-೬೮೦ |
| ೬ | ಉಳಿದ ಅರಸರು | ,, ೬೮೦-೭೫೦ |

## ರಾಷ್ಟ್ರಕೂಟ ವಂಶ (ಕ್ರಿ. ಶ. ೭೫೦ ರಿಂದ ೯೭೩).

| | | |
|---|---|---|
| ೧ | ದಂತಿದುರ್ಗ | ಕ್ರಿ. ಶ. ೭೫೦-೭೬೦ |
| ೨ | ೧ನೆಯ ಕೃಷ್ಣ | ,, ೭೬೦-೭೭೯ |
| ೩ | ೨ನೆಯ ಗೋವಿಂದ ಮತ್ತು ಧ್ರುವ | ,, ೭೭೯-೭೯೪ |
| ೪ | ೩ನೆಯ ಗೋವಿಂದ | ,, ೭೯೪-೮೧೪ |
| ೫ | ೧ನೆಯ ಅಮೋಘವರ್ಷ | ,, ೮೧೪-೮೭೭ |
| ೬ | ಇಮ್ಮಡಿ ಕೃಷ್ಣ ಮುಂತಾದ ಉಳಿದ ಅರಸರು | ,, ೮೭೭-೯೭೩ |

## ಪಶ್ಚಿಮ ಚಾಲುಕ್ಯರು (ಕ್ರಿ. ಶ. ೯೭೩ ರಿಂದ ೧೧೮೯).

| | | | |
|---|---|---|---|
| ೧. | ನೂರ್ಮಡಿ ತೈಲಪ | ಕ್ರಿ. ಶ. | ೯೭೩-೯೯೭ |
| ೨ | ಇರಿವಬೆಡಂಗ ಮುಂತಾದ ಮೂವರು | ,, | ೯೯೭-೧೦೪೨ |
| | ೧ನೆಯ ಸೋಮೇಶ್ವರ | ,, | ೧೦೪೨-೧೦೬೮ |
| | ೨ನೆಯ ಸೋಮೇಶ್ವರ | ,, | ೧೦೬೮-೧೦೭೬ |
| | ವಿಕ್ರಮಾದಿತ್ಯ | ,, | ೧೦೭೬-೧೧೨೭ |
| | ೩ನೆಯ ಸೋಮೇಶ್ವರ | ,, | ೧೧೨೭-೧೧೩೮ |
| | ಉಳಿದ ಅರಸರು | ,, | ೧೧೩೮-೧೧೮೯ |

## ಮಹತ್ವದ ಸಂಗತಿಗಳ ಕಾಲಗಳು

| | | | |
|---|---|---|---|
| ೧ | ಮಿನಾಂಡರನ ಆಳಿಕೆ | | ಕ್ರಿ. ಶ. ಪೂ. ೧೬೦ ರಿಂದ ಕ್ರಿ. ಶ. ಪೂ. ೧೪೦ |
| ೨ | ಕನಿಷ್ಕನ ಆಳಿಕೆ | ಕ್ರಿ. ಶ. | ೧೨೦-೧೯೦ |
| ೩ | ಫಾಹ್ಯೆನನು ಹಿಂದುಸ್ಥಾನದಲ್ಲಿದ್ದದ್ದು | ,, | ೪೦೫-೪೧೧ |
| ೪ | ಹರ್ಷನ ಆಳಿಕೆ | ,, | ೬೦೬-೬೪೭ |
| ೫ | ಹುವೆನ್‌ತ್ಸಂಗ | ,, | ೬೩೯. |
| ೬ | ಶಂಕರಾಚಾರ್ಯರ ಕಾಲ | ,, | ೭೮೮-೮೨೦ |
| ೭ | ವೀರಬಲ್ಲಾಳ | ,, | ೧೧೭೩-೧೨೨೦ |
| ೮ | ೫ನೆಯ ಭಿಲ್ಲಮ | ,, | ೧೧೮೭-೧೧೯೧ |

## ಅಫಗಾನರ ಕಾಲದಲ್ಲಿ ಆಗಿಹೋದ
## ಪ್ರಸಿದ್ಧವಾದ ರಾಜವಂಶಗಳು

೧. ಮುಸಲ್ಮಾನರ ಮೊದಲನೆಯ (ಅಫಗಾನ) ಸಾಮ್ರಾಜ್ಯ (ಕ್ರಿ. ಶ. ೧೨೦೬-೧೫೨೬)

ಗುಲಾಮಿ ಮನೆತನ (ಕ್ರಿ. ಶ. ೧೨೦೬-೧೨೮೮)

| | | | |
|---|---|---|---|
| ೧ | ಕುತುಬುದ್ದೀನ ಐಬಕ್ | ಕ್ರಿ. ಶ. | ೧೨೦೬-೧೨೧೦ |
| ೨ | ಶಮಸುದ್ದೀನ ಇಲ್ತಮಶಾ | ,, | ೧೨೧೦-೧೨೩೫ |
| ೩ | ಸುಲ್ತಾನಾ ರಜಿಯಾ | ,, | ೧೨೩೬-೧೨೩೯ |
| ೪ | ಬಹರಾಮ್, ಮಸ್-ಊದ | ,, | ೧೨೩೯-೧೨೪೬ |
| ೫ | ನಾಸೀರುದ್ದೀನ ಮಹಮೂದ | ,, | ೧೨೪೬-೧೨೬೬ |
| ೬ | ಬಲ್ಬನ್ | ,, | ೧೨೬೬-೧೨೮೬ |
| ೭ | ಕೈಕುಬಾದ | ,, | ೧೨೮೬-೧೨೮೮ |

ಖಿಲಜೀ ಮನೆತನ (ಕ್ರಿ. ಶ. ೧೨೯೦-೧೩೨೧)

| | | | |
|---|---|---|---|
| ೧ | ಜಲಾಲುದ್ದೀನ | ಕ್ರಿ. ಶ. | ೧೨೯೦-೧೨೯೬ |
| ೨ | ಅಲ್ಲಾಉದ್ದೀನ | ,, | ೧೨೯೬-೧೩೧೫ |
| ೩ | ಮುಬಾರಕ | ,, | ೧೩೧೬-೧೩೨೧ |

ತಘಲಕ ಮನೆತನ ( ಕ್ರಿ. ಶ. ೧೩೨೧–೧೪೧೪ )

| | | | |
|---|---|---|---|
| ೧ | ಗಯಾಸುದ್ದೀನ | ಕ್ರಿ. ಶ. | ೧೩೨೧-೧೩೨೬ |
| ೨ | ಮಹಮ್ಮದಷಾಹ | ,, | ೧೩೨೬-೧೩೫೧ |
| ೩ | ಫಿರೋಜಷಾಹ | ,, | ೧೩೫೧-೧೩೮೮ |
| ೪ | ಮಹಮ್ಮದಷಾಹ | ,, | ೧೩೯೦-೧೩೯೭ |
| ೫ | ಮಹಮೂದಷಾಹ | ,, | ೧೩೯೭-೧೪೧೨ |

ಸಯ್ಯದ ಮನೆತನ ( ಕ್ರಿ. ಶ. ೧೪೧೪–೧೪೫೦)

| | | | |
|---|---|---|---|
| ೧ | ಖಿಜರಖಾನ | ,, | ೧೪೧೪-೧೪೨೫ |
| ೨ | ಮುಬಾರಕ | ,, | ೧೪೨೫-೧೪೩೫ |
| ೩ | ಮಹಮ್ಮದಷಾಹ | ,, | ೧೪೩೫-೧೪೪೫ |
| ೪ | ಅಲ್ಲಾಉದ್ದೀನ | ,, | ೧೪೪೫-೧೪೫೦ |

ಲೋದಿ ಮನೆತನ ( ಕ್ರಿ. ಶ. ೧೪೫೦–೧೫೨೬ )

| | | | |
|---|---|---|---|
| ೧ | ಬಹಿಲೋಲ ಖಾನ | ,, | ೧೪೫೦-೧೪೮೮ |
| ೨ | ಸಿಕಂದರ | ,, | ೧೪೮೮-೧೫೧೭ |
| ೩ | ಇಬ್ರಾಹಿಮ | ,, | ೧೫೧೭-೧೫೨೬ |

೨. ಅಫಗಾನರ ಕಾಲದ ಉತ್ತರ ಭಾರತದ ಬೇರೆ ರಾಜ್ಯಗಳು

| | | | |
|---|---|---|---|
| ೧ | ಬಂಗಾಲ | ಕ್ರಿ. ಶ. | ೧೩೪೦-೧೫೭೬ |
| ೨ | ಜೋನಪೂರ | ,, | ೧೩೯೪-೧೪೭೭ |
| ೩ | ಕಾಶ್ಮೀರ | ,, | ೧೩೨೬-೧೫೮೬ |
| ೪ | ಮಾಳವ | ,, | ೧೪೦೧-೧೫೩೧ |
| ೫ | ಗುಜರಾಥ | ,, | ೧೩೯೧-೧೫೭೨ |
| ೬ | ಚಿತ್ತೂರ | ,, | ೧೩೧೩-೧೫೪೧ |

೩. ಅಫಗಾನ ಕಾಲದ ದಕ್ಷಿಣ ಹಿಂದುಸ್ಥಾನದ ಬೇರೆ ರಾಜ್ಯಗಳು

| | | | |
|---|---|---|---|
| ೧ | ಖಾನದೇಶ | ಕ್ರಿ. ಶ. | ೧೩೫೧-೧೫೯೯ |
| ೨ | ಬಹಮನೀ ರಾಜ್ಯ | ,, | ೧೩೪೭-೧೫೨೬ |
| ೩ | ಇಮಾದಷಾಹಿ | ,, | ೧೪೯೦-೧೬೩೬ |
| ೪ | ನಿಜಾಮಷಾಹಿ | ,, | ೧೪೯೦-೧೬೩೬ |
| ೫ | ಕುತುಬಷಾಹಿ | ,, | ೧೫೧೨-೧೬೮೭ |
| ೬ | ಬರೀದಷಾಹಿ | ,, | ೧೫೧೨-೧೬೫೬ |
| ೭ | ಆದಿಲ್‌ಷಾಹಿ | ,, | ೧೪೮೯-೧೬೮೬ |
| ೮ | ವಿಜಯನಗರದ ಸಾಮ್ರಾಜ್ಯ | ,, | ೧೩೩೬-೧೫೬೫ |
| | ಅ. ಸಂಗಮ ವಂಶ | ,, | ೧೩೩೬-೧೪೭೮ |
| | ಆ. ಸಾಳುವ ವಂಶ | ,, | ೧೪೭೮-೧೪೯೬ |
| | ಇ. ತುಳುವಂಶ | ,, | ೧೪೯೬-೧೫೬೫ |

## ಮಹತ್ವದ ಸಂಗತಿಗಳ ಕಾಲಗಳು

| | | | |
|---|---|---|---|
| ೧ | ಮಹಮ್ಮದ ಪೈಗಂಬರರ ಜನನ | ಕ್ರಿ. ಶ. | ೫೭೦ |
| ೨ | ಹಿಜರಿಶಕದ ಆರಂಭ | ,, | ೬೨೨ |
| ೩ | ಮಹಮ್ಮದ ಪೈಗಂಬರರ ಮರಣ | ,, | ೬೩೩ |
| ೪ | ಮಹಮ್ಮದ ಬಿನ್ ಕಾಸೀಮನು ಸಿಂಧಪ್ರಾಂತಕ್ಕೆ ಬಂದದ್ದು | ,, | ೭೧೨ |
| ೫ | ಮಹಮೂದನ ೧ನೆಯ ದೌಡು | ,, | ೧೦೦೧ |
| ೬ | ,, (೧೭ನೆಯ) ಸೋಮನಾಥದ ಮೇಲಿನ ದೌಡು | ,, | ೧೦೨೪ |
| ೭ | ಮಹಮ್ಮದ ಘೋರಿಯು ಸೋತದ್ದು | ,, | ೧೧೯೧ |
| ೮ | ಪೃಥ್ವೀರಾಜನು ಸೋತು ಹತನಾದದ್ದು | ,, | ೧೧೯೨ |
| ೯ | ಬಖ್ತಿಯಾರನು ಬಂಗಾಲವನ್ನು ತೆಗೆದುಕೊಂಡದ್ದು | ,, | ೧೨೦೫ |
| ೧೦ | ಹಿಂದುಸ್ಥಾನದಲ್ಲಿ ಮುಸಲ್ಮಾನರ ರಾಜ್ಯಸ್ಥಾಪನೆ | ,, | ೧೨೦೬ |
| ೧೧ | ಅಲ್ಲಾಉದ್ದೀನನು ಮೊಗಲರನ್ನು ಹಿಂದಕಟ್ಟಿದ್ದು | ,, | ೧೨೯೭ |
| ೧೨ | ಅಲ್ಲಾಉದ್ದೀನನು ಚಿತ್ತೂರನ್ನು ತಕ್ಕೊಂಡದ್ದು | ,, | ೧೩೦೩ |
| ೧೩ | ದೇವಗಿರಿಯು ಅಲ್ಲಾಉದ್ದೀನನ ಕೈಸೇರಿತು | ,, | ೧೩೧೦ |
| ೧೪ | ದ್ವಾರಸಮುದ್ರವು ಅಲ್ಲಾಉದ್ದೀನನ ಕೈಸೇರಿತು | ,, | ೧೩೧೨ |
| ೧೫ | ಹಮೀರನಿಂದ ಚಿತ್ತೂರಿಗೆ ಸ್ವಾತಂತ್ರ್ಯವು ದೊರೆತದ್ದು | ,, | ೧೩೧೩ |
| ೧೬ | ವಿಜಯನಗರ ಸಾಮ್ರಾಜ್ಯದ ಸ್ಥಾಪನೆ | ,, | ೧೩೩೬ |
| ೧೭ | ಬಹಮನೀ ರಾಜ್ಯದ ಸ್ಥಾಪನೆ | ,, | ೧೩೪೭ |
| ೧೮ | ತೈಮೂರನ ದಾಳಿ | ,, | ೧೩೯೮ |
| ೧೯ | ಉತ್ತರ ಹಿಂದುಸ್ಥಾನದಲ್ಲಿ ಭೂಕಂಪವಾದದ್ದು | ,, | ೧೫೦೫ |
| ೨೦ | ಪಾನಿಪತದ ಮೊದಲನೆಯ ಯುದ್ಧ | ,, | ೧೫೭೫ |
| ೨೧ | ರಾಕ್ಷಸತಂಗಡಿಯ ಯುದ್ಧ | ,, | ೧೫೭೫ |

## ಮೊಗಲ ಬಾದಶಾಹರ ವಂಶಾವಳಿ (೧೫೨೬–೧೮೫೮)

| | | | |
|---|---|---|---|
| ೧ | ಬಾಬರ | ಕ್ರಿ. ಶ. | ೧೫೨೬-೧೫೩೦ |
| ೨ | ಹುಮಾಯೂನ | ಕ್ರಿ. ಶ. ೧೫೩೦–೪೦ ಮತ್ತು | ೧೫೫೫-೧೫೫೬ |
| ೩ | ಅಕ್ಬರ | ಕ್ರಿ. ಶ. | ೧೫೫೬-೧೬೦೫ |
| ೪ | ಜಹಾಂಗೀರ | ,, | ೧೬೦೫-೧೬೨೭ |
| ೫ | ಷಾಹಜಹಾನ್ | ,, | ೧೬೨೭-೧೬೫೮ |
| ೬ | ಔರಂಗಜೇಬ್ | ,, | ೧೬೫೮-೧೭೦೭ |
| ೭ | ಉಳಿದ ಅರಸರು | ,, | ೧೭೦೭-೧೮೫೮ |

### ಸೂರ ಮನೆತನ (ಕ್ರಿ. ಶ. ೧೫೪೦-೧೫೫೬)

| | | | |
|---|---|---|---|
| ೧ | ಷೇರಷಾಹ | ಕ್ರಿ. ಶ. | ೧೫೪೦-೧೫೪೫ |

| | | | |
|---|---|---|---|
| ೨ | ಸಲೀಮಷಾಹ | ಕ್ರಿ. ಶ. | ೧೫೪೫-೧೫೫೩ |
| ೩ | ಫಿರೋಜಷಾಹ ಮೊದಲಾದ ಮೂವರು | ,, | ೧೫೫೩-೧೫೫೪ |
| ೪ | ಸಿಕಂದರಷಾಹ | ,, | ೧೫೫೪-೧೫೫೫ |

ಮೊಗಲರ ಆಳಿಕೆಯಲ್ಲಿಯ

## ಮಹತ್ವದ ಸಂಗತಿಗಳ ಕಾಲಗಳು

| | | | |
|---|---|---|---|
| ೧ | ಮೊಗಲ ಸಾಮ್ರಾಜ್ಯ ಸ್ಥಾಪನೆ | ಕ್ರಿ. ಶ. | ೧೫೨೬ |
| ೨ | ಸಿಕ್ರಿಯ ಯುದ್ಧ | ,, | ೧೫೨೭ |
| ೩ | ಷೇರಷಾಹನು ದಿಲ್ಲಿಯ ಒಡೆಯನಾದದ್ದು | ,, | ೧೫೪೦ |
| ೪ | ಹುಮಾಯೂನನು ಮರಳಿ ರಾಜ್ಯವನ್ನು ಸಂಪಾದಿಸಿದ್ದು | ,, | ೧೫೫೪ |
| ೫ | ಅಕ್ಬರನ ಮರಣ | ,, | ೧೬೦೫ |
| ೬ | ನೂರಜಹಾನಳು ಕಾರಭಾರವನ್ನು ಕೈಕೊಂಡದ್ದು | ,, | ೧೬೧೧ |
| ೭ | ಸರ್ ಟಾಮಸ್ ರೋನು ಬಂದದ್ದು | ,, | ೧೬೧೫ |
| ೮ | ನಿಜಾಮಷಾಹಿಯ ಕೊನೆ | ,, | ೧೬೩೭ |
| ೯ | ಷಾಹಜಹಾನನ ಮರಣ | ,, | ೧೬೬೬ |
| ೧೦ | ಔರಂಗಜೇಬ ರಾಜಸಿಂಹರ ಒಪ್ಪಂದ | ,, | ೧೬೮೧ |
| ೧೧ | ಆದಿಲಷಾಹಿಯ ಕೊನೆ | ,, | ೧೬೮೬ |
| ೧೨ | ಕುತುಬಷಾಹಿಯ ಕೊನೆ | ,, | ೧೬೮೭ |
| ೧೩ | ಸಂಭಾಜಿಯ ಕೊಲೆ | ,, | ೧೬೮೯ |
| ೧೪ | ಔರಂಗಜೇಬನ ಮರಣ | ,, | ೧೭೦೭ |

ಮಹಾರಾಷ್ಟ್ರ-ಇಂಗ್ಲಿಷರ ಆಳಿಕೆಯ ಕಾಲದಲ್ಲಿಯ

## ಪ್ರಸಿದ್ಧ ರಾಜವಂಶಗಳು.

### ೧. ಮರಾಠರ ಮನೆತನ (ಸಾತಾರಾ) (ಕ್ರಿ. ಶ. ೧೬೭೪-೧೮೪೮)

| | | | |
|---|---|---|---|
| ೧ | ಛತ್ರಪತಿ ಶಿವಾಜಿ ಮಹಾರಾಜ | ಕ್ರಿ. ಶ. | ೧೬೭೪-೧೬೮೦ |
| ೨ | ,, ಸಂಭಾಜಿ | ,, | ೧೬೮೦-೧೬೮೯ |
| ೩ | ,, ರಾಜಾರಾಮ | ,, | ೧೬೮೯-೧೭೦೦ |
| ೪ | ,, ೨ನೆಯ ಶಿವಾಜಿ | ,, | ೧೭೦೦-೧೭೦೮ |
| ೫ | ,, ಶಾಹೂರಾಜ | ,, | ೧೭೦೮-೧೭೪೯ |
| ೬ | ,, ರಾಮರಾಜ | ,, | ೧೭೪೯-೧೭೭೭ |
| ೭ | ,, ೨ನೆಯ ಶಾಹೂರಾಜ | ,, | ೧೭೭೭-೧೮೦೮ |
| ೮ | ,, ಪ್ರತಾಪಸಿಂಹ | ,, | ೧೮೦೮-೧೮೩೯ |
| ೯ | ,, | ,, | ೧೮೩೯-೧೮೪೮ |

### ೨. ಪೇಶವೆಯರ ಮನೆತನ (ಪುಣೆ) ಕ್ರಿ. ಶ (೧೭೧೪–೧೮೧೮.)

| | | | |
|---|---|---|---|
| ೧ | ಬಾಳಾಜಿ ವಿಶ್ವನಾಥ | ಕ್ರಿ. ಶ. | ೧೭೧೪-೧೭೨೦ |
| ೨ | ಬಾಜೀರಾಯ | ,, | ೧೭೨೦-೧೭೪೦ |
| ೩ | ಬಾಳಾಜಿ ಬಾಜೀರಾಯ | ,, | ೧೭೪೦-೧೭೬೦ |
| ೪ | ಮಾಧವರಾಯ | ,, | ೧೭೬೧-೧೭೭೧ |
| ೫ | ನಾರಾಯಣರಾಯ | ,, | ೧೭೭೨-೧೭೭೩ |
| ೬ | ಸವಾಯಿ ಮಾಧವರಾಯ | ,, | ೧೭೭೪-೧೭೯೫ |
| ೭ | ೨ನೆಯ ಬಾಜೀರಾಯ | ,, | ೧೭೯೫-೧೮೧೮ |

### ೩. ಈ. ಇಂ. ಕಂಪನಿಯ ಆಳಿಕೆಯ ಕಾಲದ ಗ. ಜನರಲರು

| | | | |
|---|---|---|---|
| ೧ | ವಾರನ ಹೆಸ್ಟಿಂಗ್ಸ | ಕ್ರಿ. ಶ. | ೧೭೭೪-೧೭೮೫ |
| ೨ | ಲಾರ್ಡ ಕಾರ್ನವಾಲೀಸ | ,, | ೧೭೮೫-೧೭೯೩ |
| ೩ | ಸರ ಜಾನ್ ಶೋಅರ | ,, | ೧೭೯೩-೧೭೯೮ |
| ೪ | ಲಾರ್ಡ ವೆಲಸ್ಲಿ | ,, | ೧೭೯೮-೧೮೦೫ |
| ೫ | ಲಾರ್ಡ ಕಾರ್ನವಾಲೀಸ (೨ನೆಯ ಸರತಿ) | ,, | ೧೮೦೫ |
| ೬ | ಸರ ಜಾರ್ಜ ಬಾರ್ಲೊ | ,, | ೧೮೦೫-೧೮೦೭ |
| ೭ | ಲಾರ್ಡ ಮಿಂಟೊ | ,, | ೧೮೦೭-೧೮೧೩ |
| ೮ | ಮಾ. ಆಫ್ ಹೆಸ್ಟಿಂಗ್ಸ | ,, | ೧೮೧೩-೧೮೨೫ |
| ೯ | ಲಾರ್ಡ ಆಮ್ಹರ್ಸ್ಟ | ,, | ೧೮೨೩-೧೮೨೮ |
| ೧೦ | ಲಾರ್ಡ ಉ. ಬೆಂಟಿಂಕ | ,, | ೧೮೨೮-೧೮೩೩ |
| ೧೧ | ಸರ ಚಾ. ಮೆಟಕಾಫ | ,, | ೧೮೩೫-೧೮೩೬ |
| ೧೨ | ಲಾರ್ಡ ಆಕ್ಲಂಡ | ,, | ೧೮೩೬-೧೮೪೨ |
| ೧೩ | ಲಾರ್ಡ ಎಲೆನ್‌ಬರೊ | ,, | ೧೮೪೨-೧೮೪೪ |
| ೧೪ | ಲಾರ್ಡ ಹಾರ್ಡಿಂಜ | ,, | ೧೮೪೪-೧೮೪೮ |
| ೧೫ | ಲಾರ್ಡ ಡಾಲಹೌಸಿ | ,, | ೧೮೪೮-೧೮೫೬ |

### ೪. ಇಂಗ್ಲಂಡದ ಬಾದಶಾಹರ ಆಳಿಕೆಯ ಕಾಲದಲ್ಲಿಯ ಹಿಂದುಸ್ಥಾನದ ಗ. ಜನರಲರು ಮತ್ತು ವ್ಹಾಯಿಸರಾಯರು.

| | | | |
|---|---|---|---|
| ೧ | ಲಾರ್ಡ ಕ್ಯಾನಿಂಗ | ಕ್ರಿ. ಶ. | ೧೮೫೮-೧೮೬೨ |
| ೨ | ಲಾರ್ಡ ಎಲ್ಜಿನ | ,, | ೧೮೬೨-೧೮೬೩ |
| ೩ | ಲಾರ್ಡ ಲಾರೆನ್ಸ | ,, | ೧೮೬೪-೧೮೬೯ |
| ೪ | ಲಾರ್ಡ ಮೇಯೊ | ,, | ೧೮೬೯-೧೮೭೨ |
| ೫ | ಲಾರ್ಡ ನಾರ್ಥಬ್ರುಕ್ | ,, | ೧೮೭೨-೧೮೭೬ |
| ೬ | ಲಾರ್ಡ ಲಿಟನ | ,, | ೧೮೭೬-೧೮೮೦ |

| | | | |
|---|---|---|---|
| ೭ | ಲಾರ್ಡ ರಿಪನ | ಕ್ರಿ. ಶ. | ೧೮೮೦-೧೮೮೪ |
| ೮ | ಲಾರ್ಡ ಡಫರಿನ | ,, | ೧೮೮೪-೧೮೮೮ |
| ೯ | ಲಾರ್ಡ ಲ್ಯಾನ್ಸಡೌನ | ,, | ೧೮೮೮-೧೮೯೪ |
| ೧೦ | ಲಾರ್ಡ ಎಲ್ಗಿನ | ,, | ೧೮೯೪-೧೮೯೯ |
| ೧೧ | ಲಾರ್ಡ ಕರ್ಝನ | ,, | ೧೮೯೯-೧೯೦೫ |
| ೧೨ | ಲಾರ್ಡ ಮಿಂಟೊ | ,, | ೧೯೦೫-೧೯೧೦ |
| ೧೩ | ಲಾರ್ಡ ಹಾರ್ಡಿಂಜ | ,, | ೧೯೧೦-೧೯೧೬ |
| ೧೪ | ಲಾರ್ಡ ಚೇಮ್ಸ್‌ಫರ್ಡ | ,, | ೧೯೧೬-೧೯೨೧ |
| ೧೫ | ಲಾರ್ಡ ರೀಡಿಂಗ | ,, | ೧೯೨೧-೧೯೨೬ |
| ೧೬ | ಲಾರ್ಡ ಆಯರ್ವಿನ | ,, | ೧೯೨೬-೧೯೩೧ |
| ೧೭ | ಲಾರ್ಡ ವಿಲಿಂಗ್ಡನ್ | ,, | ೧೯೩೧-೧೯೩೬ |
| ೧೮ | ಲಾರ್ಡ ಲಿನ್‌ಲಿಥಗೋ | ,, | ೧೯೩೬-೧೯೪೩ |
| ೧೯ | ಲಾ. ವೇವೆಲ್ ವ್ಹಾ. ಆಗಮನ | ,, | ೧೯೪೩ |
| ೨೦ | ಮೌಂಟಬ್ಯಾಟನ್ ಯೋಜನೆ | ,, | ಜೂನ ೧೯೪೭ |
| ೨೧ | ಸಿ. ರಾಜಗೋಪಾಲಾಚಾರ್ಯ | ,, | ೧೯೪೮ |

## ಮರಾಠಾ-ಇಂಗ್ಲಿಷರ ಆಳಿಕೆಯ ಕಾಲದಲ್ಲಿಯ
## **ಮಹತ್ವದ ಸಂಗತಿಗಳ ಕಾಲಗಳು.**

| | ಕ್ರಿ. ಶ. |
|---|---|
| ಇಂಗ್ಲಿಷ ಈಸ್ಟ ಇಂಡಿಯಾ ಕಂಪನಿಯ ಸ್ಥಾಪನೆ | ೧೬೦೦ |
| ಸುರತದಲ್ಲಿ ವಖಾರವನ್ನು ಕಟ್ಟಿಸಿದ್ದು | ೧೬೧೨ |
| ಅಂಬೋಯನಾದ ಕೊಲೆ | ೧೬೨೩ |
| ಶಿವಾಜಿಯ ಜನ್ಮ | ೧೬೩೦ |
| ನಿಜಾಮಶಾಹಿಯ ಕೊನೆ | ೧೬೩೭ |
| ಮದ್ರಾಸವು ಇಂಗ್ಲಿಷರಿಗೆ ದೊರೆಯಿತು | ೧೬೩೯ |
| ಶಿವಾಜಿಯು ರಾಯಗಡವನ್ನು ತೆಗೆದುಕೊಂಡದ್ದು | ೧೬೪೬ |
| ಅಫಜುಲ್‌ಖಾನನು ಹತನಾದದ್ದು | ೧೬೫೯ |
| ಫ್ರೇಂಚ ಈಸ್ಟ ಇಂಡಿಯಾ ಕಂಪನಿಯ ಸ್ಥಾಪನೆ | ೧೬೬೦ |
| ಸಾಲ್ಹೇರದ ಯುದ್ಧ | ೧೬೭೨ |
| ಶಿವಾಜಿಯ ಪಟ್ಟಾಭಿಷೇಕ | ೧೬೭೪ |
| ಶಿವಾಜಿಯ ಮರಣ | ೧೬೮೦ |
| ಔರಂಗಜೇಬನಿಗೂ ರಜಪೂತರಿಗೂ ಆದ ಒಪ್ಪಂದ | ೧೬೮೧ |
| ಆದಿಲಶಾಹಿಯ ಕೊನೆ | ೧೬೮೬ |
| ಕುತುಬಶಾಹಿಯ ಕೊನೆ | ೧೬೮೭ |

ಮುಂಬಯಿಯು ಇಂಗ್ಲಿಷ ವ್ಯಾಪಾರಸ್ಥರ ಕೇಂದ್ರವಾಯಿತು ೧೬೮೭
ಸಂಭಾಜಿಯ ಕೊಲೆ ೧೬೮೯
ಜಿಂಜಿಯ ಮುತ್ತಿಗೆ ೧೬೯೧- ೯೮
ಔರಂಗಜೇಬನ ಮರಣ ೧೭೦೭
ಯುನಾಯಿಟೆಡ್ ಈಸ್ಟ ಇಂಡಿಯಾ ಕಂಪನಿಯ ಸ್ಥಾಪನೆ ೧೭೦೭
ಬಾಳಾಜಿಯು ಪೇಶ್ವೆಯಾದದ್ದು ೧೭೧೪
ಚಿಮಣಾಜಿಯು ಪೋರ್ತುಗೀಜರನ್ನು ವಸಯಿ ಪ್ರಾಂತದಿಂದ ಹೊರಗೆ ಹಾಕಿದ್ದು ೧೭೩೯
ನಾದಿರಶಾಹನ ದಾಳಿ ೧೭೩೯
ಮರಾಠರಿಗೆ ಮಾಳವದ ಸನದು ದೊರೆಯಿತು ೧೭೪೨
ನಿಜಾಮ ಉಲ್ಮುಲ್ಕನ ಮರಣ ೧೭೪೮
ಅಬದಾಲಿಯ ದಾಳಿಯ ಆರಂಭ ೧೭೪೮
ಅರ್ಕಾಟಿದ ಮುತ್ತಿಗೆ ೧೭೫೧
ಪ್ಲಾಸಿಯ ಯುದ್ಧ ೧೭೫೭
ಉದಗೀರದ ಕಾಳಗ ೧೭೬೦
ವಾಂಡೀವಾಶದ ಕಾಳಗ ೧೭೬೦
ಕುಂಜಪುರವು ಮರಾಠರ ಕೈಸೇರಿತು ೧೭೬೦
ಪಾಣಿಪತದ ಮೂರನೆಯ ಯುದ್ಧ ೧೬೭೧
ಪಾಂಡಿಚೇರಿಯ ಯುದ್ಧ ೧೭೬೦
ರಾಕ್ಷಸಭವನದ ಕಾಳಗ ೧೭೬೩
ಬಕ್ಸಾರದ ಯುದ್ಧ ೧೭೬೪
ಅಲ್ಹಾಬಾದದ ಒಪ್ಪಂದ ೧೭೬೫
ಮೈಸೂರಿನ ಮೊದಲನೆಯ ಯುದ್ಧ ೧೭೬೭-೬೯
ಮದ್ರಾಸ ಒಪ್ಪಂದ ೧೭೬೯
ರೆಗ್ಯುಲೇಟಿಂಗ ಆಕ್ಟ ೧೭೭೩
ಮರಾಠರ ಮೊದಲನೆಯ ಯುದ್ಧ ೧೭೭೫-೮೨
ಪುರಂದರದ ಒಪ್ಪಂದ ೧೭೭೬
ಮೈಸೂರಿನ ೨ನೆಯ ಯುದ್ಧ ೧೭೮೦-೮೪
ಸಾಲ್ಬಾಯಿ ಒಪ್ಪಂದ ೧೭೮೨
ಹೈದರನ ಮರಣ ೧೭೮೨
ಮಂಗಳೂರಿನ ಒಪ್ಪಂದ ೧೭೮೪
ಪಿಟ್ಟನ ಇಂಡಿಯಾ ಬಿಲ್ಲು ೧೭೮೪
ಮೈಸೂರಿನ ಮೂರನೆಯ ಯುದ್ಧ ೧೭೯೧- ೯೨

| | |
|---|---|
| ಭೂತಾನದ ಯುದ್ಧ | ೧೮೬೪ |
| ಅಫಗಾನರ ೨ ನೆಯ ಯುದ್ಧ | ೧೮೭೮—೮೦ |
| ಚಾಮರಾಜ ಒಡೆಯರಿಗೆ ಮೈಸೂರಿನ ರಾಜ್ಯ ದೊರೆಯಿತು | ೧೮೮೧ |
| ರಾಷ್ಟ್ರಸಭೆಯ ಆರಂಭ | ೧೮೮೫ |
| ಬ್ರಹ್ಮದೇಶದ ೩ ನೆಯ ಯುದ್ಧ | ೧೮೮೫—೮೬ |
| ರಾಣಿಯವರ ಆಳಿಕೆಯ ಸುವರ್ಣಮಹೋತ್ಸವ | ೧೮೮೭ |
| ಮಣಿಪುರದ ದಂಗೆ | ೧೮೯೦ |
| ಕೌನ್ಸಿಲ ಆಕ್ಟ (ಕಾಯ್ದೆ ಮಂಡಲಗಳ ಸಭಾಸದರ ಸಂಖ್ಯೆಯನ್ನು ಹೆಚ್ಚು ಮಾಡಿದ್ದು) | ೧೮೯೨ |
| ಮೋಪಲಾ ಜನರ ದಂಗೆ | ೧೮೯೪ |
| ಪ್ಲೇಗು ಬೇನೆಯ ಆರಂಭ | ೧೮೯೬ |
| ರಾಣಿಯವರ ಹೀರಕೋತ್ಸವ | ೧೮೯೭ |
| ವ್ಹಿಕ್ಟೋರಿಯಾ ಮಹಾರಾಣಿಯವರ ಮರಣ | ೧೯೦೧ |
| ಮೋರ್ಲೆ-ಮಿಂಟೋ ಸುಧಾರಣೆ | ೧೯೦೯ |
| ಎಡ್ವರ್ಡ ಬಾದಶಹಾಹರ ಮರಣ | ೧೯೧೦ |
| ದಿಲ್ಲಿಯ ಸಮಾರಂಭ | ೧೯೧೧ |
| ಯುರೋಪದ ಮಹಾಯುದ್ಧ | ೧೯೧೪—೧೮ |
| ಜಾರ್ಜ ಬಾದಶಹರ ಜಾಹೀರನಾಮೆ | ೧೯೧೭ |
| ಮಾಂಟ್‌ಫರ್ಡ ಸುಧಾರಣೆ | ೧೯೧೯ |
| ಪ್ರಿನ್ಸ ಆಫ್ ವೇಲ್ಸರವರು ಹಿಂದುಸ್ಥಾನಕ್ಕೆ ಬಂದದ್ದು | ೧೯೨೫ |
| ಸಾಯಮನ್ ಕಮಿಶನ್ | ೧೯೨೭-೨೮ |
| ೧ನೆಯ ರಾವುಂಡ ಟೇಬಲ್ ಕಾನ್ಫರನ್ಸ | ೧೯೩೦ |
| ೨ನೆಯ ,, ,, ,, | ೧೯೩೧ |
| ೩ನೆಯ ,, ,, ,, | ೧೯೩೨ |
| ಶುಭ್ರಪತ್ರಿಕೆಯನ್ನು ಪ್ರಸಿದ್ಧಿಸಿದ್ದು | ಮಾರ್ಚ ೧೯೩೩ |
| ಜಾಯಿಂಟ ಸಿಲೆಕ್ಟ ಕಮಿಟಿಯ ಆರಂಭ | ಎಪ್ರಿಲ್ ೧೯೩೩ |
| ,, ,, ,, ರಿಪೋರ್ಟ ಪ್ರಸಿದ್ಧವಾಯಿತು | ನವ್ಹಂಬರ ೧೯೩೪ |
| ಹಿಂದುಸ್ಥಾನದ ಕಾಯ್ದೆ ಪಾಸಾಯಿತು | ಅಗಸ್ಟ ೧೯೩೫ |
| ಪಂಚಮ ಜಾರ್ಜ ಬಾದಶಹಾಹರ ನಿಧನ | ೧೯೩೬ |
| ಎಂಟನೆಯ ಎಡ್ವರ್ಡ ಬಾದಶಹಾಹರ ರಾಜ್ಯತ್ಯಾಗ | ೧೯೩೭ |
| ಆರನೆಯ ಜಾರ್ಜರು ಬಾದಶಹಾಹರಾದದ್ದು | ೧೯೩೭ |
| ಹಿಂದುಸ್ಥಾನದ ಕಾಯ್ದೆಯಂತೆ ಕಾರಭಾರದ ಆರಂಭ | ಎಪ್ರಿಲ್ ೧೯೩೭ |

| | |
|---|---|
| ಆರನೆಯ ಜಾರ್ಜ ಬಾದಷಹರ ಪಟ್ಟಾಭಿಷೇಕ | ಮೇ ೧೯೩೭ |
| ೨ನೆಯ ಮಹಾ ಯುದ್ಧ | ೧೯೩೯-೪೫ |
| ಸರ್ ಕ್ರಿಪ್ಸರು ಹಿಂದುಸ್ಥಾನಕ್ಕೆ ಬಂದದ್ದು | ೧೯೪೨ |
| ಭಾರತದಿಂದ ತೊಲಗಿರಿ ( ಚಲೇಜಾಂವ್ ಚಳವಳಿ ) | ಆಗಸ್ಟ ೧೯೪೨ |
| ಲಾ. ವೇವೆಲ್ ವ್ಹಾ. ಆಗಮನ | ೧೯೪೩ |
| ಕಾಂಗ್ರೆಸ್ ಮಂತ್ರಿಮಂಡಲದ ರಚನೆ | ೧೯೪೬ |
| ಮಂತ್ರಿತ್ರಯರ ಯೋಜನೆ | ೧೯೪೬ |
| ಘಟನಾ ಸಮಿತಿಯ ೧ನೆಯ ಅಧಿವೇಶನ | ೧೯೪೬ |
| ,, ,, ೨ನೆಯ ,, | ೧೯೪೭ |
| ಆಟ್ಲಿ ಅವರ ಘೋಷಣೆ | ಫೇಬ್ರುವರಿ ೧೯೪೭ |
| ಏಶಿಯದ ಪರಿಷತ್ತು | ಮಾರ್ಚ ೧೯೪೭ |
| ಮೌಂಟ್‌ಬ್ಯಾಟನ್ ಯೋಜನೆ | ಜೂನ ೧೯೪೭ |
| ಭಾರತ ಸ್ವಾತಂತ್ರ್ಯದ ಕಾಯದೆ | ಜುಲೈ ೧೯೪೭ |
| ಸ್ವಾತಂತ್ರ್ಯ ಪ್ರಾಪ್ತಿ | ಆಗಸ್ಟ ೧೯೪೭ |
| ಮಹಾತ್ಮಾಜಿಯವರ ಕೊಲೆ | ೩೦ ಜನೇವರಿ ೧೯೪೮ |
| ಬ್ರಿಟಿಷರು ಭಾರತದಿಂದ ಹೋದರು | ಜೂನ ೧೯೪೮ |
| ಭಾರತದಲ್ಲಿ ಸಾರ್ವಭೌಮ ಲೋಕಸತ್ತಾತ್ಮಕ ಗಣರಾಜ್ಯದ ಸ್ಥಾಪನೆ | ದಿ. ೨೬-೧-೧೯೫೦ |
| ಪಂಚವಾರ್ಷಿಕ ಯೋಜನೆ | ೧೯೫೧ |
| ಭಾರತ-ಪಾಕಿಸ್ತಾನ ಸ್ನೇಹ ಸಂವರ್ಧನೆ | ೧೯೫೩ |